



## ವಿವಿಧ ಮಾಧ್ಯಮಗಳ ಸಮರ್ಥ ಕಲೆಗಾರ

# ಡಿ. ನೆಡುಂಜೆಳಿಯನ್





**ಚೆ**ನ್ನೈವಾಸಿ ಶ್ರೀ ಡಿ. ನೆಡುಂಜೆಳಿಯನ್, ಮೂಲತಃ ತಂಜಾವೂರು ಜಿಲ್ಲೆಯ ರಾಯಂದೂರಿನ ಬಡ ಕುಟುಂಬದಿಂದ ಬಂದವರು. ಕುಂಭಕೋಣಂ ಸರಕಾರಿ ಕಲಾ ಶಾಲೆಯಲ್ಲಿ ಅಭ್ಯಾಸ ಮಾಡಿದರು. ತಂಜಾವೂರಿನ ತಮಿಳು ವಿಶ್ವವಿದ್ಯಾನಿಲಯದಲ್ಲಿ ಚಿತ್ರಗಾರರಾಗಿ ಕೆಲಸ ಮಾಡಿದ ಸಂದರ್ಭದಲ್ಲಿ, ಕುದುರೆಯನ್ನು ಜನಪದ ಕಲೆಯ ಶೈಲಿಯಲ್ಲಿ ಚಿತ್ರಿಸುವ ಅವಕಾಶ ಒದಗಿತು. ಹೀಗೆ ಪ್ರಾರಂಭವಾಗಿ, ಚಲನೆಯ ಸಂಕೇತವಾದ ಕುದುರೆ ಇವರ ಅನೇಕ ಚಿತ್ರಗಳಲ್ಲಿ, ಹಲವು ಬಗೆಯಲ್ಲಿ ಕಾಣಿಸಿಕೊಂಡಿದೆ. ಇದನ್ನು ಅವರು ಇಮೋಷನಲಿಸಂ ಎನ್ನುತ್ತಾರೆ. ಚಿನ್ನ ಲೇಪಿತ ತೆಳುಹಾಳೆಯ ಮೇಲೆ ಆಕ್ರಿಲಿಕ್ ಮಾಧ್ಯಮದಲ್ಲಿ ಚಿತ್ರ ಬಿಡಿಸುವುದು ಇವರ ಮತ್ತೊಂದು ವೈಶಿಷ್ಟ್ಯ. ವಿದ್ಯಾರ್ಥಿ ದೆಸೆಯಲ್ಲಿಯೇ ಇವರು ಔಟ್‌ಸ್ಟ್ಯಾಂಡಿಂಗ್ ಯಂಗ್ ಪೆಯಿಂಟರ್ ಪ್ರಶಸ್ತಿ, ಆಂಧ್ರದ ಚಿತ್ರಕಲಾನಿಕೇತನ ಪ್ರಶಸ್ತಿ, ತಿರುವಳ್ಳುವರ್ ಸಾಹಿತ್ಯ ಸಭಾ ಪ್ರಶಸ್ತಿ ಗಳಿಸಿದ್ದಾರೆ. ಚೆನ್ನೈ, ಬೆಂಗಳೂರು, ಮುಂಬೈ, ಹೈದರಾಬಾದ್, ಕಲ್ಕತ್ತ, ದಿಲ್ಲಿ ಮುಂತಾದ ನಗರಗಳಲ್ಲಿ ಇವರ ಚಿತ್ರಪ್ರದರ್ಶನಗಳು ನಡೆದಿವೆ. ಇತ್ತೀಚೆಗೆ ಬೆಂಗಳೂರು ಚಿತ್ರಕಲಾ ಪರಿಷತ್ತಿನಲ್ಲಿ ಇವರ ಏಕವ್ಯಕ್ತಿ ಕಲಾ ಪ್ರದರ್ಶನ ನಡೆಯಿತು. ಇದು ಇವರ ಇಪ್ಪತ್ತನೇ ಏಕವ್ಯಕ್ತಿ ಪ್ರದರ್ಶನ. ಸಿಬಿ, ಬಾಬಿ – ಇವರ ಮಕ್ಕಳು. ಪತ್ನಿ ವಾಣಿ, ಚೆನ್ನೈ ಪ್ರದೂಷ ನಿಯಂತ್ರಣ ಮಂಡಲಿಯಲ್ಲಿ ಎಂಜಿನಿಯರ್.

ಶ್ರೀ ನೆಡುಂಜೆಳಿಯನ್ ಅವರು ಜಲವರ್ಣ, ತೈಲವರ್ಣ, ಆಕ್ರಿಲಿಕ್ ಮಾಧ್ಯಮದಲ್ಲಿ ರಚಿಸಿರುವ ಕೆಲವು ಕಲಾಕೃತಿಗಳು ಮತ್ತು ಕಂಚಿನಲ್ಲಿ ಮಾಡಿರುವ ಶಿಲ್ಪದ ದೃಶ್ಯಗಳು ಇಲ್ಲಿವೆ.

ಕೆ. ಪಿ. ಸ್ವಾಮಿ
೧೬೭, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮









# ಹೊಸತು

## ಒಳಗೇನಿದೆ.....



---


ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಹರಿಣಿ, ಜಿ. ಎಂ. ಬೊಮ್ನಳ್ಳಿ
ರಾಮಚಂದ್ರ ಕೊಪ್ಪಲು, ರವಿಕುಮಾರ್ ಅಜ್ಜೀಪುರ

ಮುಖಪುಟದಲ್ಲಿ : ವಿಪ್ರೋ ಸಂಸ್ಥೆ ಪ್ರಾಯೋಜಿಸಿದ ಗಿಲ್ಡ್ ವಿಮೆನ್ ಅಚೀವರ್
ಸಂಸ್ಥೆ ಸಂಘಟಿಸಿದ ಮೇ ೯ ರ ಮದರ್ಸ್ ಡೇಯಂದು 'ಆರೋಗ್ಯವಂತ ಶಿಶು'
ಬಹುಮಾನ ಗಳಿಸಿದ ಪರಾಗ

ಛಾಯಾಚಿತ್ರ : ಆರೆಸ್ಸಾರ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಭಾ**ರತದ ರಾಜಕೀಯದಲ್ಲಿ ಕಮ್ಯುನಿಸ್ಟರ ಪಾತ್ರ ಅಪ್ರಸ್ತುತವೆಂದು ಚುನಾವಣಾ ಪ್ರ[illegible]ರ ಭಾಷಣಗಳಲ್ಲಿ ಎಲ್. ಕೆ. ಅಡ್ವಾನಿ ಹೇಳುತ್ತಿದ್ದರು. ಅದೂ ವಿಶೇಷವಾಗಿ ಕೇರಳದ[illegible] ಫಲಿತಾಂಶ ಬಂದನಂತರ ಅವರ ಅಭಿಪ್ರಾಯ ಬದಲಾಗಿರಬೇಕು. ಆದರೆ ಆಮೇಲೆ ಅವರು ಕಾಣಿಸಿಕೊಂಡದ್ದೇ ವಿರಳ. ಸುಷ್ಮಾ ಸ್ವರಾಜರಂತೆ ತಲೆ ಬೋಳಿಸಿಕೊಳ್ಳುವ ಶಪಥವನ್ನು ಅವರು ಮಾಡಲಾರರು. ಈಕೆಯಾದರೋ ಸಾಧ್ವೀಮಣಿ. ಬಿಳಿ ಸೀರೆಯುಟ್ಟು ದಮಯಂತಿಯಂತೆ ನೆಲದ ಮೇಲೆ ಪವಡಿಸುವ ಯೋಚನೆ ಸುಷ್ಮಾ ಅವರದಾಗಿತ್ತು. ಭೋಪಾಲಿನ ತರಳೆಯಂತೂ ಕೇದಾರನಾಥದಲ್ಲಿ ತಪಸ್ಸಿಗೆ ತೆರಳುವವರಿದ್ದರು. ಮಹಾಜನ್-ಅಡ್ವಾನಿ-ವೆಂಕಯ್ಯ ಇದಕ್ಕೆಲ್ಲಾ ಪರದೆಯ ಹಿಂದೆ ಸೂತ್ರಧಾರರಾಗಿ ವಿಚಕ್ಷಣೆಯಿಂದ ಯೋಜನೆ ಸಿದ್ಧಗೊಳಿಸಿದ್ದಿರಬೇಕು. ದೇಶದಲ್ಲಿ ಮೇ ೧೯ರಂದು ದೊಂಬಿ, ಬೆಂಕಿ, ರಕ್ತ ಸಾಕಷ್ಟು ವ್ಯಾಪಕವಾಗಿ ಕಂಡುಬರುವ ಸಾಧ್ಯತೆಯನ್ನು ಮನಗಂಡ ವಿದೇಶ ಸಂಜಾತೆಯು ತನಗೆ 'ದೇಶವನ್ನು ಒಡೆಯುವ ಉದ್ದೇಶವಿಲ್ಲ' ಎಂದು ಅತಿಗಂಭೀರವಾಗಿ ಹೇಳಿ ಪ್ರಧಾನ ಮಂತ್ರಿಯ ಸ್ಥಾನ ಬೇಡವೆಂದದ್ದು ಈ ದಶಕದ ಇತಿಹಾಸದಲ್ಲಿ ಬಹಳ ಪ್ರಮುಖವಾಗಿ ದಾಖಲಾಗುತ್ತದೆ. ಸಂವಿಧಾನ, ಕಾನೂನು, ಸಭ್ಯತೆ, ಸೌಜನ್ಯ, ಇವಾವುವೂ ಭಾರತೀಯ ಸಂಸ್ಕೃತಿಯ ಕಟ್ಟಾ ಪ್ರತಿಪಾದಕರಿಗೆ ಒಗ್ಗುವಂಥವಲ್ಲ ಎಂಬ ರೀತಿಯಲ್ಲಿ ವೆಂಕಯ್ಯನವರ ಪದಾತಿಗಳು ನಡೆದುಕೊಂಡದ್ದು ಮತ್ತೆ ಈ ದಶಕದ ಇತಿಹಾಸದಲ್ಲಿ ಪ್ರಮುಖವಾಗಿ ದಾಖಲಾಗುತ್ತದೆ; ಆದರೆ ವಿಲಕ್ಷಣವಾದ ಅಕ್ಷರಗಳಲ್ಲಿ. ಇಂದಿರಾ ಗಾಂಧಿ ೧೯೭೫ರಲ್ಲಿ ಕೈಗೊಂಡಿದ್ದ ಕ್ರಮವನ್ನು ೨೦೦೪ರಲ್ಲಿ ಸೋನಿಯಾ ಗಾಂಧಿ ಕೈಗೊಳ್ಳಬೇಕೆಂಬುದು ವೆಂಕಯ್ಯ ಆಶಯವಾಗಿದ್ದರೆ, ಆ ಜ್ವಾಲೆಗೆ ನೀರು ಸುರಿದು ತಣ್ಣಗೆ ಮಾಡಿದ ಕೀರ್ತಿ ಸೋನಿಯಾಗೆ ಸಲ್ಲುತ್ತದೆ. ಈ ಪ್ರಸಂಗದಲ್ಲಿ ರಾಷ್ಟ್ರಾಧ್ಯಕ್ಷರು ದಾಳಗಳನ್ನು ಹೇಗೆ ಉರುಳಿಸಿದರೋ ತಿಳಿಯುವಂತಿಲ್ಲ. ಜಾರ್ಜ್ ಫರ್ನಾಂಡೀಸ್ ಅಂತೂ ಬರೋಡಕ್ಕೆ ಹಿಂದಿರುಗಿ ರೈಲು ಹಳಿಗಳ ತಪಾಸಣೆ ಮಾಡುತ್ತಾ ರೈಲು ಉರುಳಿಸುವುದನ್ನು ಗಹನವಾಗಿ ಪರ್ಯಾಲೋಚಿಸಬಹುದು.

ಇಲ್ಲಿ ಗಮನಿಸಬೇಕಾದ್ದು ಸಂವಿಧಾನ ಬಾಹಿರ ನೀತಿ ಮತ್ತು ಕ್ರಿಯೆ ನಮ್ಮ ರಾಜಕೀಯದಲ್ಲಿ ವಹಿಸುತ್ತಿರುವ ಪಾತ್ರ ಎಂಥದು ಎಂಬುದನ್ನು. ಸುಷ್ಮಾ ಅವರ ಪತಿರಾಯ, ಕೌಶಲ್ ಎಂಬಾತ, ಸೋನಿಯಾ ಪ್ರಧಾನಿಯಾದರೆ ತಾನು ರಾಜ್ಯಸಭೆಯೊಳಗೆ ಸರ್ವಥಾ ಕಾಲಿಡುವುದಿಲ್ಲವೆಂದು ಘೋಷಿಸಿದ್ದು ಪ್ರಚಾರಕ್ಕೆ ಬಂತು ; ಆದರೆ ಆತನ ಅವಧಿ ಇನ್ನು ಒಂಭತ್ತು ದಿನಗಳು ಮಾತ್ರವೇ ಇದ್ದಿತೆಂಬುದನ್ನು ಯಾರೂ ಹೇಳಲಿಲ್ಲ. ನಮ್ಮ ದೇಶದ ಸಾರ್ವಭೌಮತ್ವವನ್ನು ಅಮೆರಿಕಾದ ಪದತಲದಲ್ಲಿ ವಾಜಪೇಯಿ ಸರ್ಕಾರ ಸಮರ್ಪಿಸುತ್ತಿದ್ದಾಗ ಮಾನ್ಯ ಸುಷ್ಮಾ ಅವರಿಗೆ ಸೋಫಾದ ಮೇಲೆ ಮಲಗಲು ಅಭ್ಯಂತರವಿರಲಿಲ್ಲ ಅಲ್ಲವೇ ? ಸೋನಿಯಾ ಅವರಿಗೆ ಸಂವಿಧಾನ ರೀತ್ಯಾ ಪ್ರತಿರೋಧ ಒಡ್ಡಲು ಅಸಮರ್ಥರಾದ ವೆಂಕಯ್ಯನವರ ವೀರರು ಆಯ್ಕೆ ಮಾಡಿಕೊಂಡಿದ್ದು ಅತ್ಯುಗ್ರ ಹಿಂಸೆ ಮತ್ತು ಅಂತರ್ಯುದ್ಧಕ್ಕೆ ಹಾದಿ ಮಾಡಿಕೊಡುವಂತಹ ಕ್ರಮಗಳನ್ನು. ಹಿಂದೆ ಜೆ.ಪಿ.ಯವರು ಸೈನ್ಯದ ಅಧಿಕಾರಿಗಳು ಸರ್ಕಾರದ ಆದೇಶವನ್ನು ಪಾಲಿಸಬಾರದೆಂದು ಸಲಹೆ ನೀಡಿದ್ದರೆ, ಈಗ ವೆಂಕಯ್ಯನವರು ಜನರಿಗೆ ವಿದೇಶಿ ಮದ್ಯದ ಮತ್ತು ಬರಿಸಿದರು. ಇನ್ನೈದು ವರ್ಷ ಕಾದು ಸೋನಿಯಾ ಮೈತ್ರಿಕೂಟವನ್ನು ಸೋಲಿಸುವಷ್ಟು ಸಹನೆ ಇವರಿಗಿಲ್ಲ. ಆಕೆ ಲೋಕಸಭೆಗೆ ಮೊದಲು ಆಯ್ಕೆಯಾದಾಗ ಮುಂದೊಮ್ಮೆ ಪ್ರಧಾನಿಯಾಗಿಬಿಡಬಹುದೆಂಬ ಊಹೆಯೂ ಇವರಿಗಿರಲಿಲ್ಲ. ತಮ್ಮ ಆಡಳಿತದ ಬಗ್ಗೆ ಅವರಿಗೆ ಅಷ್ಟು ವ್ಯಾಮೋಹವಿದ್ದಿತು ! ಆದರೆ ಅವರ ಆಡಳಿತ ಅದೆಷ್ಟು ಕಳಪೆಯಾಗಿತ್ತೆಂದರೆ ಸೋನಿಯಾ ಏಣಿ ಏರಿಯೇಬಿಟ್ಟರು. ಇನ್ನು ಮುಂದೆ ವೆಂಕಯ್ಯನವರ ಪಕ್ಷವು ಸಂವಿಧಾನಬಾಹಿರ ಕೃತ್ಯಗಳನ್ನು ಹೆಚ್ಚು ಹೆಚ್ಚಾಗಿ ಆಯ್ಕೆ ಮಾಡಿಕೊಳ್ಳುತ್ತದೆಂಬುದಕ್ಕೆ ಇದೊಂದು ಸೂಚನೆ. ಆ ವೇಳೆಗೆ ಸುಷ್ಮಾ ಅವರ ಇಂದಿನ ಚಾಕಚಕ್ಯತೆಯಿಂದಾಗಿ ಅವರೇ ಅಧ್ಯಕ್ಷರೂ ಆಗಿರುತ್ತಾರೇನೋ !

ವೆಂಕಯ್ಯನವರ ಪೂರ್ವಾಶ್ರಮದ ಗುರು ಗೋವಿಂದಾಚಾರ್ಯರು ಹಾಗೂ ನಮ್ಮ ರಾಜ್ಯದ ಉಡುಪಿ ಪೂಜ್ಯಪಾದರೊಬ್ಬರು ಈ ಸಂದರ್ಭದಲ್ಲಿ 'ಕ್ವಿಟ್ ಇಂಡಿಯಾ' ಚಳುವಳಿಗೆ ಹುಮ್ಮಸ್ಸಿನಿಂದ ಕರೆಕೊಟ್ಟರು. ಕೊಡಬೇಕಾದ್ದೇ, ಪಾಪ, ಏಕೆಂದರೆ ತಮ್ಮ ಪ್ರಾಯದಲ್ಲಿ ಆಚಾರ್ಯರು ೧೯೪೨ರ ಚಳುವಳಿಯಲ್ಲಿ ಭಾಗವಹಿಸಿರಲಿಲ್ಲವಲ್ಲಾ, ಅದಕ್ಕೆ. ವಾಜಪೇಯಿಯವರು ಭಾಗವಹಿಸಿದ್ದರು ; ಯಾರನ್ನೋ ಪೊಲೀಸರಿಗೆ ಹಿಡಿದುಕೊಡುವ ಮೂಲಕ ! "ಭಾರತ ಬಿಟ್ಟು ತೊಲಗಿ" ಎಂಬ ಚಳುವಳಿಗೇಕೆ ಇಷ್ಟೊಂದು ಅವಮಾನ ಮಾಡಲು ಆಚಾರ್ಯದ್ವಯರಿಗೆ ತವಕವೆಂಬುದನ್ನು ಸತ್ಯಾನ್ವೇಷಣೆಯೇ ಪರಮೋದ್ದೇಶವನ್ನಾಗಿ ಉಳ್ಳ ಹಿರಿಯ ಸಂಶೋಧಕರು ಕೈಗೆತ್ತಿಕೊಳ್ಳಬೇಕು. 'ದ್ವಿರಾಷ್ಟ್ರ ಪೌರತ್ವ' ಎಂಬ ಕಲ್ಪನೆಗೆ ಸೊಪ್ಪು ಹಾಕಿದ ವಾಜಪೇಯಿ - ಸುಷ್ಮಾ - ಮಹಾಜನ್ - ಅಡ್ವಾನಿ ಪಕ್ಷಕ್ಕೆ 'ವಿದೇಶ ಸಂಜಾತರು'

(೮ನೇ ಪುಟಕ್ಕೆ)




ಸಂಪುಟ-೫ ಸಂಚಿಕೆ - ೧೧ ಜೂನ್ ೨೦೦೪

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್: ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

# ಸಾರ್ವತ್ರಿಕ ಚುನಾವಣೆ - ೨೦೦೪

## ಸಂಪಾದಕೀಯ

**ಈ**ಗಷ್ಟೆ ಮುಗಿದ ಚುನಾವಣೆ ಮತ್ತು ಫಲಿತಾಂಶಗಳನ್ನು ತದನಂತರದ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮೂರು ವಿಷಯಗಳು ಎದ್ದು ಕಾಣುತ್ತವೆ. ಒಂದು ಎನ್‌ಡಿಎ ಸರ್ಕಾರದ ನಿರ್ಣಾಯಕ ಸೋಲು ಮತ್ತು ಅದರ ಸೋಲಿಗೆ ಕಾರಣವಾದ ಕಾಂಗ್ರೆಸ್ ಮತ್ತು ಇತರ ಪಕ್ಷಗಳು ಅಳವಡಿಸಿಕೊಂಡ ರಾಜಕೀಯ ತಂತ್ರಗಳು. ಕಳೆದ ಚುನಾವಣೆಯಲ್ಲಿ ಎನ್‌ಡಿಎ ಗುಂಪು ಒಂದಿಷ್ಟು ಕನಿಷ್ಠ ಬಹುಮತ ಗಳಿಸಲು ಸಾಧ್ಯವಾದುದು ವಿರೋಧ ಪಕ್ಷಗಳ ಅನೈಕ್ಯತೆಯಿಂದ ಮತ್ತು ಭಾಜಪ ಬೆಸೆದುಕೊಂಡ ಒಂದು ಮೈತ್ರಿಕೂಟದಿಂದ. ಆಗಲೂ ಭಾಜಪ ತನ್ನ ಕೋಮುವಾದದ ನಿಲುವುಗಳನ್ನು ಕೆಲಕಾಲ ಮರೆಗಿಟ್ಟು ಸ್ಥಿರ ಸರ್ಕಾರದ ಆಶ್ವಾಸನೆ ನೀಡಿದ್ದೂ ಒಂದು ಕಾರಣ. ಯೋಜನಾಬದ್ಧ ಆರ್ಥಿಕ ನೀತಿಯನ್ನು ಕೈಬಿಟ್ಟು ವಿಶ್ವ ಬ್ಯಾಂಕ್, ವಿಶ್ವ ಹಣಕಾಸು ಸಂಸ್ಥೆ, ವಿಶ್ವ ವ್ಯಾಪಾರ ಮಂಡಳಿಗಳ ಆಜ್ಞಾಧಾರಕರೆಂಬಂತೆ ಬಹು ಜನಸಮೂಹದ ಕ್ಷೇಮ ದೃಷ್ಟಿಯನ್ನು ಕೈಬಿಟ್ಟು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದಂಥ ಜನವಿರೋಧಿ ಸ್ವಾವಲಂಬನಾವಿರೋಧಿ ಆರ್ಥಿಕ ನೀತಿಯನ್ನು ಅನುಸರಿಸಿ ತಮ್ಮ ಸಾಂಪ್ರದಾಯಿಕ ಸಮರ್ಥಕರನ್ನು ರೊಚ್ಚಿಗೆಬ್ಬಿಸಿದ್ದ ಕಾಂಗ್ರೆಸ್, ಯಾವ ವಿಧವಾದ ಒಕ್ಕೂಟ ರಚನೆಗೂ ಮುಂದಾಗದೆ ಅಹಂಕಾರವನ್ನು ವ್ಯಕ್ತಪಡಿಸಿದ್ದು ಜನತೆ ಅವರ ವಿರುದ್ಧವಾಗಿ ಮತ ಚಲಾವಣೆಯನ್ನು ಅನಿವಾರ್ಯವೆಂಬಂತೆ ಮಾಡಬೇಕಾಯ್ತು. ಅಂಥ ಋಣಾತ್ಮಕ ಮತದ ಬೆಂಬಲದಿಂದ ಗದ್ದುಗೆ ಹಿಡಿದ ಭಾಜಪ ತನ್ನ ಮೂಲ ಕೋಮುವಾದೀಯ ಕಾರ್ಯಕ್ರಮಗಳನ್ನು ಹಲವಾರು ರೀತಿ ಪ್ರಯೋಗಿಸಿದ್ದೇ ಅಲ್ಲದೆ ಕಾಂಗ್ರೆಸ್ ಪ್ರಾರಂಭಿಸಿದ್ದ ಮತ್ತು ಈಗಾಗಲೇ ಜನತೆಯಿಂದ ತಿರಸ್ಕೃತವಾದ ಆರ್ಥಿಕ ನೀತಿಯನ್ನೇ ಮತ್ತೂ ತೀವ್ರವಾಗಿ ಕಾರ್ಯಗತಗೊಳಿಸಿತು. ಜನತೆಗೆ ತಂದ ಅಪಾರ ಕಷ್ಟಸಂಕುಲಗಳು ಈಗಾಗಲೇ ಚರ್ಚಿತ. ಹೀಗಾಗಿ ಇಂದಿನ ಚುನಾವಣೆಯಲ್ಲಿ ಜನತೆ ಮತ್ತೊಮ್ಮೆ ಈ ದುಷ್ಟಕೂಟದ ವಿರುದ್ಧ ಮತ ಪ್ರಕಟಿಸುವುದು ಸ್ಪಷ್ಟವೇ ಆಗಿತ್ತು. ಹಿಂದಿನ ಅನುಭವದಿಂದ ಪಾಠ ಕಲಿತ ಕಾಂಗ್ರೆಸ್ ಪಕ್ಷ ಈ ಬಾರಿ ಜನತೆಯ ಮುಂದೆ ಒಂದಿಷ್ಟು ವಿನೀತ ಭಾವ ಪ್ರಕಟಿಸಿತು. ಅಷ್ಟೇನೂ ಸಮರ್ಪಕವಲ್ಲದಿದ್ದರೂ, ಇತಿಮಿತಿಯ ಒಂದು ಒಕ್ಕೂಟವನ್ನು ರಚಿಸಿಕೊಂಡಿತು. ದೇಶದಲ್ಲಿ ದಳ್ಳುರಿಯಾಗಿ ಹರಡಿದ್ದ ಕೋಮುವಾದದ ವಿರುದ್ಧ ಎಡ ಮತ್ತು ಪ್ರಜಾಪ್ರಭುತ್ವವಾದಿ ಶಕ್ತಿಗಳೊಡನೆ ಒಟ್ಟುಗೂಡಿ ಪ್ರಚಂಡ ಪ್ರಚಾರ್ರ ನಡೆಸಿತು. ಹಾಗೂ ಹಿಂದಿನ ಆರ್ಥಿಕ ನೀತಿಯಲ್ಲಿ ಹಲವಾರು ಸುಧಾರಣಾ ನೀತಿಗಳನ್ನು ತರುವುದಾಗಿ, ತಪ್ಪುಗಳನ್ನು ತಿದ್ದಿಕೊಳ್ಳುವುದಾಗಿ ಪ್ರಚಾರಮಾಡಿತು. ಇಂಥ ಪರಿಸ್ಥಿತಿಯಲ್ಲಿ ಎನ್‌ಡಿಎ ಬಣಕ್ಕೆ ಸಂಪೂರ್ಣ ಸೋಲಾದದ್ದು ಆಶ್ಚರ್ಯವೇನಲ್ಲ. ಜನ ಯೋಚಿಸಿಯೇ ಮತ ಚಲಾಯಿಸುತ್ತಾರೆ ಎಂದು ಮತ್ತೊಮ್ಮೆ ಸಾಬೀತಾಗಿದೆ. ಹೀಗಾಗಿ ಈ ಬಾರಿ ಎಲ್ಲ ಕಡೆಯೂ ಭಾಜಪ ಕೂಟದ ವಿರುದ್ಧ ಇರುವವರಲ್ಲಿ ತಮಗೆ ತೋರಿದವರಿಗೆ ಮತ ಚಲಾಯಿಸುವುದು ಹಾಗೂ ಆರ್ಥಿಕ ನೀತಿಯ ಪರಿಷ್ಕರಣೆಗೆ ಹೋರಾಡುವ ಛಲ ಉಳ್ಳ ಎಡಪಕ್ಷದವರು ಕಣದಲ್ಲಿದ್ದರೆ ಅವರಿಗೆ ಜರೂರಾಗಿ ಮತ ಚಲಾಯಿಸಿರುವುದೇ ಕಾರಣ ಅವರು ಅಧಿಕ ಸಂಖ್ಯೆಯಲ್ಲಿ ಜಯಿಸಿರುವುದಕ್ಕೆ. ಆದರೆ ಬಂದ ಪರಿಣಾಮ ನಿರ್ಣಾಯಕವೇ, ದೇಶದ ರಾಜಕೀಯ ಛಿನ್ನಂಭಿದ್ರವಾಗಿ ಹೋಗಿದೆಯೆ ಎಂಬುದು ಪ್ರಶ್ನೆ. ರಾಜಕೀಯ ಪಟಲ ಛಿದ್ರವಾಗಿ ಕಾಣುತ್ತಿರುವುದು ಇದೇ ಮೊದಲಲ್ಲ. ಇದಕ್ಕೆ ಭಾಜಪದ ಕೋಮವಾದವೇ ಸಂಪೂರ್ಣ ಕಾರಣವಲ್ಲ. ಅವರ ಆ ವಾದಕ್ಕೆ ಈ ದೇಶದಲ್ಲಿ ವ್ಯಾಪಕ ಬೆಂಬಲವಿಲ್ಲವೆಂದು ಪದೇ ಪದೇ ಸ್ಪಷ್ಟವಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಎಲ್ಲಿಯವರೆಗೆ ಆರ್ಥಿಕ ಸ್ವಾವಲಂಬನೆ ಮತ್ತು ಯೋಜನಾಬದ್ಧ ಆರ್ಥಿಕ ನೀತಿಯನ್ನು ಸ್ವೀಕರಿಸಲಾಗಿತ್ತೋ ಅಲ್ಲಿಯವರೆಗೆ ರಾಜಕೀಯವಾಗಿ ಪಕ್ಷಗಳು ಬಹುಮತವನ್ನು ಪಡೆಯಲು ಸಾಧ್ಯವಾಗುತ್ತಾ ಬಂದಿದೆ. ಎಲ್ಲಿಯವರೆಗೆ ಆರ್ಥಿಕ ನೀತಿಯಲ್ಲಿನ ಆಂತರಿಕವಾದ ಸಂಬದ್ಧತೆ ಮತ್ತು ಸಾಮಾಜಿಕವಾದ ಭವ್ಯದೃಷ್ಟಿಯ ಮುನ್ನೋಟ ಪ್ರಸ್ಫುಟವಾಗಿತ್ತೋ ಅಲ್ಲಿಯವರೆಗೆ ರಾಜಕೀಯವಾಗಿಯೂ ಅದು ಐಕಮತ್ಯವಾಗಿ ಬಹುಮತವಾಗಿ ಪರಿಣಮಿಸುತ್ತಿತ್ತು. ಈ ನೀತಿಗೆ ವಿರುದ್ಧವಾದ, ವಿಭಾಗೀಯ ಹಿತಾಸಕ್ತಿಗಳನ್ನು ಮಾತ್ರ ಪೋಷಿಸುವ ಉದಾರೀಕರಣೇತ್ಯಾದಿ ಹೊಸ ಬಂಡವಳಿಗ ನೀತಿ ಪ್ರಾರಂಭವಾದಂದಿನಿಂದ ರಾಜಕೀಯ ಬಹುಮತ ಯಾವ ಪಕ್ಷಕ್ಕೂ ದೊರಕುತ್ತಿಲ್ಲ ಎನ್ನುವುದನ್ನು ಗಮನಿಸಬಹುದು. ಅಂದರೆ ರಾಜಕೀಯ ಅಸ್ಥಿರತೆಗೆ ಕಾರಣವನ್ನು ಬೇರೆಲ್ಲೋ ಹುಡುಕಬೇಕು. ಪಕ್ಷ ರಾಜಕೀಯದಲ್ಲಲ್ಲ. ರಾಜಕೀಯ ಅಸ್ಥಿರತೆಯೇ ಆತಂಕಕಾರಿ ಅಲ್ಲ. ಆ ಅಸ್ಥಿರಕ್ಕೆ ಕಾರಣವಾದ ವಿಷಯಗಳು ಮುಖ್ಯವಾಗುತ್ತವೆ.

ಈ ಚುನಾವಣೆ ನಿರ್ಣಾಯಕವಾಗಿ ಹೇಳಿರುವುದು ಕೋಮುವಾದದ ಮತ್ತು ಆರ್ಥಿಕ ಏಕಸ್ವಾಮ್ಯದ ಬೆಂಬಲ ಪಡೆದ ಫ್ಯಾಸೀ ಶಕ್ತಿಯ ತಿರಸ್ಕಾರ ಹಾಗೂ ಈಗ ಚಾಲ್ತಿಯಲ್ಲಿರುವ ಸ್ವರೂಪದ ಆರ್ಥಿಕ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದ ನೀತಿಯ ತಿರಸ್ಕಾರ. ಈ ನೀತಿಗಳನ್ನು ಕೈಬಿಟ್ಟು ಹೊಸ ತಿರುವು ತರಲು ಜನತೆ, ಬದಲಾಗಿರುವುದಾಗಿ ಹೇಳಿಕೊಳ್ಳುವ, ಸ್ವಲ್ಪ ಮೆದುವಾಗಿರುವ, ಬಹುಶಃ ಪರಿಪಕ್ವವಾಗಿರುವ ಕಾಂಗ್ರೆಸ್ ಪಕ್ಷ ಹಾಗೂ ಎಡ ಮತ್ತು ಜಾತ್ಯತೀತ ಪ್ರಜಾತಂತ್ರಾತ್ಮಕ ಪಕ್ಷಗಳಿಗೆ ಪರಸ್ಪರ ಸಹಕರಿಸಿ ಆಡಳಿತ ನಡೆಸಲು ಆದೇಶ ನೀಡಿದೆ. ಕಾಂಗ್ರೆಸ್ ತನ್ನ ಆರ್ಥಿಕ ಮತ್ತು ಸಾಮಾಜಿಕ ನೀತಿಗಳನ್ನು ಎಡ ಮತ್ತು ಪ್ರಜಾತಂತ್ರಾತ್ಮಕ ಶಕ್ತಿಗಳನ್ನು ಒಲಿಸಿಕೊಂಡು, ಸೂಕ್ತವಾಗಿ ಮಾರ್ಪಡಿಸಿಕೊಂಡು ರೂಪಿಸಬೇಕಾಗುತ್ತದೆ. ಇದೂ ಒಂದು ಸ್ಪಷ್ಟ ನಿರ್ಣಯವೇ. ಇದು ಒಂದು ಪ್ರಯೋಗವೇ ಆದರೂ, ಬಹುಶಃ ಐದು ವರ್ಷಗಳವರೆಗೂ ಸರ್ಕಾರ ನಡೆಸಬಲ್ಲ ಐಕಮತ್ಯವಾದೀತು ಎಂಬ ಭರವಸೆ ಮೂಡಲು ಕೆಲವು ಕಾರಣಗಳಿವೆ.

ಉದಾರೀಕರಣವೆಂದರೆ ಯಾವ ನಿಯಂತ್ರಣವೂ ಇಲ್ಲದ ಸ್ವೇಚ್ಛಾಚಾರವಲ್ಲ. ಅದು ರಾಜಕೀಯ ಭಾಷೆಯಾಗಿ, ಆಡಳಿತಶಾಹಿಯ, ವಸಾಹತುಶಾಹಿ ಕಾಲದ ಸಂಹಿತೆಗೆ ಸೆರೆಬಿದ್ದ ನೀತಿಯನ್ನು ಸಡಿಲಗೊಳಿಸುವುದು ಎನ್ನುವುದಕ್ಕೆ ಸೀಮಿತ. ಖಾಸಗೀಕರಣವೆಂದರೆ ಸಾರ್ವಜನಿಕ ಆಸ್ತಿಯನ್ನು ಚಿಕ್ಕಾಸಿಗೆ ಆಸಕ್ತ ಬಂಡವಾಳಗಾರರಿಗೆ ಮಾರಿಬಿಡುವುದಲ್ಲ. ಅದು ಅರ್ಥವಿಕಾಸದಲ್ಲಿ ಖಾಸಗೀ ಪ್ರಯತ್ನಗಳಿಗೆ ಯಾವುದೇ ಕೇಂದ್ರದಲ್ಲೂ ಪ್ರವೇಶಿಸಿ ಮುಕ್ತವಾಗಿ ಬೆಳೆಯಲು ಬೇಕಾದ ಎಲ್ಲ ಅವಕಾಶಗಳ ಕಲ್ಪನೆ, ಹೊಸ ಬಂಡವಾಳ ವಿನಿವೇಶಕ್ಕೆ, ಉದ್ದಿಮೆ ಸೃಷ್ಟಿಗೆ ಮತ್ತು ಮುಕ್ತ ಅವಕಾಶಕ್ಕೆ ನೀಡಿದ ಕರೆ. ಹಾಗೂ ಸಾರ್ವಜನಿಕ ಉದ್ದಿಮೆಗಳು ಪೈಪೋಟಿಯಲ್ಲಿ ನಿಲ್ಲಬಲ್ಲ ಸಮರ್ಪಕ, ಲಾಭಗಳಿಸುವ ಸ್ವತಂತ್ರ ಉದ್ದಿಮೆಗಳಾಗಿ ಪರಿವರ್ತಿತವಾಗಬೇಕೇ ವಿನಃ ಸೋಮಾರಿ ಕಾರ್ಮಿಕರ ಅಥವಾ ಹೆಸರು ಕೆಟ್ಟ ರಾಜಕೀಯ ಪುಡಾರಿಗಳಿಗೆ ಆಶ್ರಯ ನೀಡುವ ಸವಲತ್ತುಗಳಲ್ಲ. ಜಾಗತೀಕರಣವೆಂದರೆ ವಿಜ್ಞಾನ ಮತ್ತು ತಂತ್ರಜ್ಞಾನದ ಅಪಾರ ಬೆಳವಣಿಗೆಯ ಪರಿಣಾಮವಾಗಿ

ಸಹಜವಾಗಿಯೇ ಪರಸ್ಪರ ಸಂಬಂಧ ಬೆಳೆಸಿಕೊಂಡಿರುವ ಜಾಗತಿಕ ಅರ್ಥ ವ್ಯವಸ್ಥೆಯೊಡನೆ ರಾಷ್ಟ್ರೀಯ ಉದ್ದಿಮೆಗಳನ್ನು ವ್ಯವಹಾರವನ್ನು ಜಾಗತಿಕ ವ್ಯವಹಾರ ಪ್ರಪಂಚದೊಡನೆ ಪರಸ್ಪರ ಪ್ರಯೋಜನಕ್ಕಾಗಿ ಬೆಸೆದುಕೊಳ್ಳುವ ನೀತಿಗಳನ್ನು ಅನುಸರಿಸುವುದು. ನಮಗೆ ಬೇಕೋ ಬೇಡವೋ ವಿದೇಶೀ ಬಂಡವಾಳ ಒಳಕ್ಕೆ ಬಿಡುವುದು, ಅಗತ್ಯಕ್ಕೆ ಮೀರಿದ ವಿಲಾಸ ವೈಭವ ವಸ್ತುಗಳನ್ನು ಲೆಕ್ಕವಿಲ್ಲದಷ್ಟು ಮುಕ್ತವಾಗಿ ಆಮದು ಮಾಡಿಕೊಳ್ಳುವುದು, ರಾಷ್ಟ್ರೀಯವಾಗಿ ಅಗತ್ಯವಾದ ಮುಖ್ಯವಾದ ಉದ್ದಿಮೆಗಳ ಒಡೆತನವನ್ನು ವಿದೇಶೀಯರಿಗೆ ಒಪ್ಪಿಸುವುದು ಮುಂತಾದವು ಜಾಗತೀಕರಣವೆನಿಸಿ ಕೊಳ್ಳುವುದಿಲ್ಲ. ಈ ನಿಲುವುಗಳನ್ನು ಮನಮೋಹನಸಿಂಗರು, ಎಡಪಕ್ಷಗಳೂ ಪದೇ ಪದೇ ಸ್ಪಷ್ಟಪಡಿಸಿದ್ದಾರೆ. ಹೀಗಾಗಿ ಹೊಸ ಸರ್ಕಾರ ಕೋಮುವಾದವನ್ನು, ಫ್ಯಾಸೀ ಶಕ್ತಿಗಳನ್ನು, ಮಟ್ಟ ಹಾಕುವಲ್ಲಿ ಹಾಗೂ ರಾಷ್ಟ್ರೀಯ ಹಿತಕ್ಕೆ ಹೊಂದುವಂತೆ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ನೀತಿಗಳನ್ನು ಪರಿಷ್ಕರಿಸಿ, ಅನ್ವಯಿಸಿ, ಆದರೂ ಹಿಂದಿಗಿಂತ ಉತ್ತಮ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಬಲ್ಲುದು ಎಂಬ ಆಶಾವಾದಕ್ಕೆ ಕಾರಣ ನೀಡಿದೆ. ಇಂಥ ನೀತಿ ಸಹಜವಾಗಿಯೇ ಬಹುಜನ ಪರವಾಗಿರುತ್ತದೆ. ರಾಷ್ಟ್ರೀಯ ವರಮಾನ ಹೆಚ್ಚಿ ಒಂದಿಷ್ಟು ನ್ಯಾಯಯುತ ಹಂಚಿಕೆಯ ದಾರಿ ಹಿಡಿಯುತ್ತದೆ.

ಭರವಸೆಗೆ ಕಾರಣಗಳನ್ನು ಮೆಲಕು ಹಾಕುತ್ತಲೇ, ಒಕ್ಕೂಟ ಸರ್ಕಾರಗಳ ಬಗ್ಗೆ ಒಂದೆರಡು ಅವಲೋಕನ ನೀಡಬಹುದು. ನಮ್ಮ ದೇಶವನ್ನು ಬಹುಕಾಲ ಏಕಪಕ್ಷವಾಗಿ ಆಳಿದ ಕಾಂಗ್ರೆಸ್ ಪಕ್ಷ ಒಂದು ವಿಭಾಗೀಯ ಆಸಕ್ತಿಯನ್ನು ಪ್ರತಿನಿಧಿಸುವ ಪಕ್ಷವಾಗಿರಲಿಲ್ಲ. ಅದೊಂದು ವಿಶಾಲ ಚಪ್ಪರ. ಅದರಡಿ ವಿವಿಧ ಆಸಕ್ತಿಗಳು ಸ್ವಾತಂತ್ರ್ಯ ಪೂರ್ವದಲ್ಲಿ ಒಂದು ಸಾಮಾನ್ಯ ಉದ್ದೇಶಕ್ಕಾಗಿ ಅಣಿನೆರೆದಿದ್ದವು. ಸ್ವಾತಂತ್ರ್ಯವೆಂಬ ಆ ಉದ್ದೇಶ ಸಾಧಿತವಾದ ಮೇಲೆ ಅದೇ ಪಕ್ಷ ಆಡಳಿತ ಪಕ್ಷವಾಗಿ ಪರಿವರ್ತಿತವಾದ ಮೇಲೆ ಇನ್ನೂ ಹಲವಾರು ಚುನಾವಣೆಗಳಲ್ಲಿ ಏಕಪಕ್ಷವಾಗಿ ಮುಂದುವರಿಯಲು ಈ ಮೂಲ ಲಕ್ಷಣವಾದ ಸಂಯುಕ್ತ ರಂಗದ ಸ್ವಭಾವ ರಚನೆ ಅದರಲ್ಲಿ ಮುಂದುವರಿದಿದ್ದೇ ಕಾರಣ. ಕಾಂಗ್ರೆಸ್ ಪದದ ಅರ್ಥವೇ ಸಂಮೇಳನ, ಒಟ್ಟು ಕೂಟ ಎಂದು. ಬಹುಪಕ್ಷೀಯ ಪ್ರಜಾಪ್ರಭುತ್ವ ಪರಿಪಕ್ವವಾಗುತ್ತಿದ್ದಂತೆಯೇ ವಿವಿಧ ಪಕ್ಷಗಳು ವಿವಿಧ ಆಸಕ್ತಿಗಳ ಪ್ರತೀಕಗಳಾಗಿ, ಪ್ರತಿನಿಧಿಸಲು ಪ್ರಾರಂಭಿಸಿದಂತೆ, ಕಾಂಗ್ರೆಸ್ ಪಕ್ಷ ಬಿಟ್ಟು ಅಂಥ ಆಸಕ್ತಿಗಳು ಬೇರೆಡೆ ಸೇರುವ ಪ್ರಕ್ರಿಯೆ ಬೆಳೆದಂತೆಲ್ಲಾ ಕಾಂಗ್ರೆಸ್ ತನ್ನ ಕಾಂಗ್ರೆಸ್‌ತನವನ್ನು ಕಳೆದುಕೊಳ್ಳುತ್ತಾ ಬಂದು ಆಂತರಿಕವಾಗಿ ಅದು ಉದ್ಯಮಿಗಳ, ಉನ್ನತ ಮಧ್ಯಮ ವರ್ಗದ ಆಸಕ್ತಿಗಳನ್ನು ಹೆಚ್ಚು ಹೆಚ್ಚು ಪ್ರತಿನಿಧಿಸಲು ಪ್ರಾರಂಭಿಸಿದಂತೆ, ಅದರ ಬಹುಮತವೂ ಕಡಿಮೆಯಾಗುತ್ತಾ ಬಂತು. ಅಂದರೆ ಕಾಂಗ್ರೆಸ್ ಪಕ್ಷ ಏಕಪಕ್ಷವಾಗಿ ಬಹುಮತ ಪಡೆಯುತಿದ್ದ ಕಾಲದಲ್ಲಿ ಅದು ವಸ್ತುತಃ ಸಂಯುಕ್ತರಂಗವಾಗಿತ್ತು. ಈಗ ವಾಸ್ತವದಲ್ಲಿ ಈ ಸಂಯುಕ್ತ ರಂಗದ ಅನಿವಾರ್ಯತೆಯನ್ನು ಜನತೆ ಚುನಾವಣೆಗಳಲ್ಲಿ ಮತ ನೀಡುವ ಪ್ರಕ್ರಿಯೆಯಲ್ಲಿ ಒತ್ತಿ ಹೇಳುತ್ತಿದೆ. ಅಂದರೆ ಮುಂಬರುವ ಸರ್ಕಾರಗಳು ಬಹುಪಕ್ಷೀಯ ಮೈತ್ರಿಕೂಟಗಳಾಗಿರುತ್ತವೆ ಎಂದರೆ ಅದು ಅಸ್ಥಿರತೆಗೆ ಕಾರಣವೆಂದು ಗಾಬರಿಯಾಗದೆ ಅದು ಬೆಳೆಯುತ್ತಿರುವ ಪ್ರಜಾಪ್ರಭುತ್ವದ ಪ್ರಬುದ್ಧತೆ, ಪರಿಪಕ್ವತೆ ಎಂದು ಅರ್ಥೈಸಬಹುದು. ಇಂದಿನ ಮಟ್ಟಿಗೆ ಎಡ ಪಕ್ಷಗಳೂ ಈ ಅನಿವಾರ್ಯತೆಯನ್ನು ಗುರುತಿಸಲು ಪ್ರಾರಂಭಿಸಿರುವುದು ಸ್ವಾಗತಾರ್ಹ. ಚುನಾವಣೆಯ ಪೂರ್ವದಲ್ಲೇ ಇಂಥ ಒಕ್ಕೂಟಗಳ ಅಸ್ತಿತ್ವವಿದ್ದು, ಅದು ಸಾಮಾನ್ಯ ಕಾರ್ಯಕ್ರಮಗಳನ್ನು ಸಿದ್ಧಪಡಿಸಿ, ಮತ ಬೇಡಿದರೆ ಮತದಾರರಿಗೆ ಆಯ್ಕೆ ಸುಲಭವಾಗುತ್ತದೆ. ರಾಜಕೀಯ ಪಕ್ಷಗಳಲ್ಲಿ ಜವಾಬ್ದಾರಿ ಹೆಚ್ಚುತ್ತದೆ.

ಈ ವಿಶ್ಲೇಷಣೆ ಬರೆಯುವ ವೇಳೆಗೆ ಬರುವ ಸರ್ಕಾರದ, ಅದರ ಸಾಮಾನ್ಯ ಕಾರ್ಯಕ್ರಮದ ಸ್ಪಷ್ಟ ಚಿತ್ರ ದೊರಕಿಲ್ಲ. ಆ ಕಾರ್ಯಕ್ರಮಗಳ ವಿಸ್ತೃತ ವಿಮರ್ಶೆಗೆ ಕಾಯಬೇಕು. ಆದರೂ ಅದು ಯಾವುದೇ ಕಾರ್ಯಕ್ರಮವಿದ್ದರೂ ಅದರ ಸಾಮಾನ್ಯ ರೂಪುರೇಷೆ ಈ ಮೇಲಿನ ವಿಶ್ಲೇಷಣೆಯನ್ನು ಹೊಂದಿಕೊಂಡೇ ಇರಬೇಕಾಗುತ್ತದೆ. ಆರ್ಥಿಕ ನೀತಿಯನ್ನು ಜನಪರವಾಗಿ ಸ್ವಾವಲಂಬನೆಯ ಉದ್ದೇಶಕ್ಕಾಗಿ ಸಂಪೂರ್ಣ ಪರಿಷ್ಕರಿಸಬೇಕಾಗುತ್ತದೆ. ಸ್ವಾವಲಂಬನೆಗೂ, ಜಾಗತೀಕರಣಕ್ಕೂ ವೈಷಮ್ಯವಿಲ್ಲ ವೆಂದು ಇಲ್ಲಿ ಸ್ಪಷ್ಟಪಡಿಸಬೇಕು. ಸಾರ್ವಜನಿಕ ಉದ್ದಿಮೆಗಳನ್ನು ರಕ್ಷಿಸಿ, ಬೆಳೆಸಬೇಕು. ಆಧುನೀಕರಣಗೊಳಿಸಬೇಕು ಎನ್ನುವುದಕ್ಕೂ, ಖಾಸಗೀಕರಣ ನೀತಿಗೂ ವೈಷಮ್ಯವಿಲ್ಲ ಎಂಬುದನ್ನು ಕಾರ್ಯಕ್ರಮ ಗುರುತಿಸಬೇಕು. ಕಾರ್ಮಿಕ ನೀತಿಯನ್ನು ಪರಿಷ್ಕರಿಸಬೇಕು ಅಂದರೆ ಅವರ ಸಂಘ ಕಟ್ಟಿಕೊಳ್ಳುವ ಹಕ್ಕು, ಮುಷ್ಕರದ ಹಕ್ಕು, ಕನಿಷ್ಠ ವೇತನದ ಹಕ್ಕು, ಖಾಯಂ ಉದ್ಯೋಗದ ಹಕ್ಕುಗಳನ್ನು ಮೊಟಕು ಮಾಡುವುದಿಲ್ಲ ಎಂದು ಸ್ಪಷ್ಟಪಡಿಸಬೇಕಾಗುತ್ತದೆ. ಬಂಡವಾಳ ವಿನಿವೇಶವನ್ನು ಆದ್ಯತೆಗಳ ಆಧಾರದ ಮೇಲೆ ನಿರ್ದೇಶಿಸಬೇಕು ಎಂದು ಗುರುತಿಸುತ್ತದೆ. ರೈತನ ಸಮಸ್ಯೆ ಭೂ ಸುಧಾರಣೆ ಇಲ್ಲದೆ ಸಂಪೂರ್ಣವಾಗುವುದಿಲ್ಲ ಎಂಬುದನ್ನು ಹೇಳುವಾಗ ಎಲ್ಲರೂ ಮೆಚ್ಚಿಕೊಂಡಿರುವ ಪಶ್ಚಿಮ ಬಂಗಾಳ ಮತ್ತು ಕೇರಳ ಪ್ರಯೋಗಗಳನ್ನು ಗುರುತಿಸಬೇಕಾಗುತ್ತದೆ.

ಸರ್ಕಾರದ ರಚನೆಯಲ್ಲಿ ನಡೆದ ಎಲ್ಲ ಗಲಾಟೆಯನ್ನು ಗಮನಿಸಿದಾಗ ಒಂದು ವಿಷಯ ಸ್ಪಷ್ಟವಾಗುತ್ತದೆ. ಪ್ರಗತಿಪರ ಪ್ರಜಾಪ್ರಭುತ್ವಾತ್ಮಕ ಶಕ್ತಿಗಳು ಯಾರನ್ನು ಸೋಲಿಸಿದ್ದೇವೆ ಎಂದುಕೊಂಡಿದ್ದರೋ ಅವರು ಇನ್ನೂ ಚೆನ್ನಾಗಿಯೇ ಉಸಿರಾಡುತ್ತಿದ್ದಾರೆ. ರಾಷ್ಟ್ರವನ್ನೆಲ್ಲಾ ರಕ್ತಪಾತದ ಆಂದೋಳನಕ್ಕೆ ಇಳಿಸುವ ದುರುದ್ದೇಶದಿಂದ ಈ ಫ್ಯಾಸೀ ಕೋಮುವಾದ ಶಕ್ತಿಗಳು ಸೋನಿಯಾ ಅವರ ವಿರುದ್ಧ ವಿಷಕಾರಿದ ರೀತಿ ಇದನ್ನು ಸ್ಪಷ್ಟಪಡಿಸುತ್ತದೆ. ಜನಮೆಚ್ಚಿದ ಆಕೆಯನ್ನು ವಿದೇಶೀ ಎಂದು ಹೂಂಕಾರ ಮಾಡಿದ ಈ ಮಹಿಷಾಸುರರು ನಾಳೆ ಜ್ಯೋತಿ ಬಸು ಪ್ರಧಾನಿಯಾದರೆ ಅವರ ಸಿದ್ಧಾಂತ ವಿದೇಶೀ ಎನ್ನಬಹುದು. ಮತ್ತೊಬ್ಬರಿಗೆ ಹಿಂದಿ ಬರದು, ಆಗದು ಎನ್ನಬಹುದು. ಒಟ್ಟಿನಲ್ಲಿ ಜನಮತಕ್ಕೆ ವಿರೋಧವಾಗಿ ತಮ್ಮಿಷ್ಟದಂತೆ ವರ್ತಿಸುವ, ಅದರ ಸಮರ್ಥನೆಗಾಗಿ ಹಿಂಸಾಚಾರಕ್ಕೆ ಇಳಿಯುವ ದುಷ್ಟಶಕ್ತಿಗಳಿಗೆ ಕೇವಲ ಒಂದು ಏಟು ಬಿದ್ದಿದೆಯೇ ವಿನಃ ಅದು ಮಾರಣಾಂತಿಕವಾಗಿಲ್ಲ. ಹಾಗಾಗಿ, ಪ್ರಗತಿಪರ ಒಕ್ಕೂಟದ ಮುಂದೆ ಮುಂಬರಲಿರುವ ದಿನಗಳು ಹೋರಾಟಗಳ ಚಳುವಳಿಗಳ ದಿನಗಳೇ ಆಗಿರುತ್ತವೆ. ಕಟು ಎಚ್ಚರಿಕೆ ಅಗತ್ಯ. ಏತನ್ಮಧ್ಯೆಯೂ ಮಧ್ಯಂತರದಲ್ಲಿ ಒಡೆದು ಬೀಳದೆ ಐದು ವರ್ಷ ಆಳಬಲ್ಲೆವು ಎಂದು ತೋರಿಸಬೇಕಾದ ಜವಾಬ್ದಾರಿ ಅವರ ಮೇಲಿದೆ. ಸೋನಿಯಾ ಅವರು ವಿವಿಧ ಪಕ್ಷಗಳ ನಡುವೆ ಹೊಂದಾಣಿಕೆ ಪಡೆಯುವ ಸಾಮರ್ಥ್ಯವನ್ನು ಈಗಾಗಲೇ ತೋರಿದ್ದು ಆಕೆಯ ನೇತೃತ್ವದ ಒಕ್ಕೂಟ ತನ್ನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸೀತು ಎಂಬ ಭರವಸೆ ಮೂಡಿಸುತ್ತದೆ. ''ನಾವು ಕಟ್ಟುವವರು, ಒಡೆಯುವವರಲ್ಲ'' ಎಂದು ಹೇಳಿದ ಎಡ ಪಕ್ಷಗಳ ನಾಯಕರ ಆಶ್ವಾಸನೆ ಈ ಬಗ್ಗೆ ಎಲ್ಲರ ದೃಢ ನಿರ್ಧಾರವನ್ನೂ ಸ್ಪಷ್ಟಪಡಿಸುತ್ತದೆ.

* * *






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೪೨೪೩೦೨

# ಮೇ ತಿಂಗಳ ಷೇರುಪೇಟೆಯ ಏರಿಳಿತದ ನಾಟಕ

ಮೇ ಮೂರನೆಯ ವಾರದ ಷೇರುಪೇಟೆಯ ಧಾರಣೆವಾಸಿಯಲ್ಲಿ ವಿಶಿಷ್ಟ ಸ್ವರೂಪದ ಏರಿಳಿತ ಹಾಗೂ ಕುಸಿತ ತಲೆದೋರಿತು. ಬಂಡವಾಳದ ಹಿತವೇ ಕೇಂದ್ರಬಿಂದುವಾದ ಅರ್ಥ ವ್ಯವಸ್ಥೆಯಲ್ಲಿ ಷೇರುಪೇಟೆಯ ಪಾತ್ರ ವ್ಯವಹಾರಕ್ಕೆ ಅಗತ್ಯವಾದ ನಿರಂತರ ಬಂಡವಾಳ ಪೂರೈಕೆ, ಇರುವ ಬಂಡವಾಳವನ್ನು ಹೆಚ್ಚು ಲಾಭ ಬರುವ ದಿಕ್ಕಿನಲ್ಲಿ ನಿರಂತರ ಸ್ಥಾನಪಲ್ಲಟ ಮಾಡುವ ಪ್ರಕ್ರಿಯೆಯಾಗಿ, ನಿವಾರಿಸಿಕೊಳ್ಳಲಾಗದ ಪೀಡೆಯೆಂಬಂತೆ ಇದನ್ನು ಗುರುತಿಸಿಕೊಳ್ಳಲಾಗಿದೆ. ಈ ಪ್ರಕ್ರಿಯೆ ವಿಪುಲವಾಗಿಲ್ಲದ, ಸೀಮಿತವಾದ ಬಂಡವಾಳವನ್ನು ಅಗತ್ಯಗಳ ಆದ್ಯತೆಯ ಆಧಾರದ ಮೇಲೆ ಹಂಚುವ ಪ್ರಕ್ರಿಯೆಯೆಂದೂ ಹೇಳಿಕೊಳ್ಳುತ್ತಾರೆ. ಲಾಭ ಸೃಷ್ಟಿಯೇ ಅಗತ್ಯವನ್ನು ಅವಲಂಬಿಸಿದ ಆದ್ಯತೆಯ ಸೂಚಕವೆಂದೂ, ಈ ಅಗತ್ಯವೆಂಬುದೇ ಸಾಮಾಜಿಕ ಅಗತ್ಯವೆಂದೂ ಒಪ್ಪದವರು, ಇದೇ ಆದ್ಯತೆಯ ಮೇಲಿನ ಹಂಚಿಕೆಯನ್ನು ಯೋಜನಾಬದ್ಧ ಆರ್ಥಿಕ ನೀತಿಯ ಆಧಾರದ ಮೇಲೆ ಸಾಧಿಸಲು ಇಚ್ಛಿಸುತ್ತಾರೆ.

ಈ ವಾರದಲ್ಲಿ ನನಗೆ ವೈಯಕ್ತಿಕವಾಗಿ ಸಹಸ್ರಾರು ಕೋಟಿ ನಷ್ಟವಾಯಿತು ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ನನ್ನಲ್ಲಿ ಹಣವಿದ್ದಿದ್ದರೆ, ಅಂದು ನಾನು ಬೇಕಾದಷ್ಟು ಷೇರುಗಳನ್ನು ಕೊಳ್ಳಬಹುದಿತ್ತು. ನನ್ನಲ್ಲಿರುವ ಷೇರಿನ ಬೆಲೆ ನಾನು ಮಾರುಕಟ್ಟೆಗೆ ಹೋಗದಿದ್ದರೂ, ಅಂದಿನ ಕುಸಿದ ಬೆಲೆಯಂತೆ, ಅರ್ಧ ಬೆಲೆ ಕಳೆದುಕೊಂಡಿತು ಹಾಗೂ ಮಾರನೆಯ ದಿನವೇ ಆ ನಷ್ಟವನ್ನು ತುಂಬಿಕೊಂಡೆ. ಹೀಗೆ ಕೇವಲ ಭಾವನಾತ್ಮಕವಾಗಿ ಏನು ಹೇಳಿದರೂ ಅದೇನೂ ತಪ್ಪಾಗುವುದಿಲ್ಲ. ಆದರೂ ಇಡೀ ದೇಶವೇ ಇದರ ಬಗ್ಗೆ ಕಳವಳಗೊಂಡಂತೆ ವಾರ್ತಾ ಮಾಧ್ಯಮಗಳು ಪ್ರತಿಬಿಂಬಿಸಿವೆ. ಈ ಹಿಂದೆ ಹರ್ಷದ್ ಮೆಹ್ತಾ ಮೋಸ ಮಾಡಿದನೆಂದು ಪ್ರಕಟವಾದಂದು ಇಂಥದೇ ಪ್ರಸಂಗ ಬಂದಿತ್ತು. ಆದರೆ ಅಂದಿನ ಸಂಗತಿಗೂ ಇಂದಿನದಕ್ಕೂ ಅನೇಕ ಸ್ತರಗಳಲ್ಲಿ ಮೂಲಭೂತ ವ್ಯತ್ಯಾಸಗಳಿವೆ.

ಹರ್ಷದ್ ಮೆಹ್ತಾ ನಾಜೂಕಿನ ಮಾತುಗಳಿಂದ ಲಕ್ಷಾಂತರ ಜನರನ್ನು ಮರುಳು ಮಾಡಿ, ಸಾರ್ವಜನಿಕ ಹಣವನ್ನು ಉಪಯೋಗಿಸಿ, ಎಲ್ಲರನ್ನೂ ಷೇರುಪೇಟೆಯ ಸುಳಿಯಲ್ಲಿ ಕೆಲವು ಕಾಲ ಸೆಳೆದುಕೊಂಡು ವೈಯಕ್ತಿಕವಾಗಿ ಅಪಾರ ಲಾಭ ಗಳಿಸಿದ. ಅವನ ಲಾಭ, ಸಹಸ್ರಾರು ಜನರ ನಷ್ಟವಾಗಿತ್ತು. ಆತ ತಾನು ಷೇರುಪೇಟೆಯ ನಿಯಮಗಳಾವುವನ್ನೂ ಅತಿಕ್ರಮಿಸದೆ ನಡೆದುಕೊಂಡುದಾಗಿಯೂ, ಇನ್ನಷ್ಟು ಸಮಯ ಕೊಟ್ಟಿದ್ದರೆ, ಎಲ್ಲರ ನಷ್ಟವನ್ನೂ ಸರಿದೂಗಿಸುವುದಾಗಿಯೂ, ತಾನು ವಾಸ್ತವದಲ್ಲಿ ಅಪರಾಧಿಯಲ್ಲ ಎಂದು ಹೇಳಿಕೊಂಡಿದ್ದು, ಇವೆಲ್ಲವೂ ಒಂದು ಮಟ್ಟದಲ್ಲಿ ಸರಿಯೆಂದು ತೋರುತ್ತದೆ. ಷೇರುಪೇಟೆ ಬೀದಿಯಲ್ಲಿ, ಮೋಸ ಹೋಗುವುದು ಮೋಸ ಮಾಡುವುದು ಅಲ್ಲಿಯ ಮಾಮೂಲಿ ನೀತಿ. ಅಂದು ಮನಮೋಹನ ಸಿಂಗರು ನೇರವಾಗಿ ಷೇರುಪೇಟೆಯನ್ನು ಟೀಕಿಸದೆ, ಮೋಸಹೋದ ಮಧ್ಯಮವರ್ಗದವರನ್ನು ನಿಮಗಲ್ಲ ಈ ಜಾಗ, ನೀವೇಕೆ ಅಲ್ಲಿಗೆ ಹೋದಿರಿ ಎಂದು ಛೇಡಿಸಿದ್ದು ಜ್ಞಾಪಕಕ್ಕೆ ಬರುತ್ತದೆ. ಅಂದಿನಿಂದ ಇಂದಿನವರೆಗೆ ಷೇರುಪೇಟೆಯನ್ನು ವಿಪರೀತ ಏರುಪೇರಿಗೆ ಒಯ್ಯುವ ಜೂಜುಕೋರರಿಂದ ರಕ್ಷಿಸಲು ಅನೇಕ ನಿಯಂತ್ರಣ ಕ್ರಮಗಳನ್ನು ರೂಪಿಸಲಾಗಿದ್ದು ಅವು ಮೊದಲಿಗಿಂತ ಹೆಚ್ಚು ಶಿಸ್ತನ್ನು ಅಲ್ಲಿ ತಂದಿವೆ. ಪರಿಸ್ಥಿತಿ ಹದಗೆಟ್ಟಾಗ ಷೇರುಪೇಟೆಯ ಕಂಪ್ಯೂಟರ್‌ಗಳೇ ಅದನ್ನು ಗುರುತಿಸಿ ವ್ಯವಹಾರವನ್ನು ಕೆಲವು ಕಾಲ ಸ್ಥಗಿತಗೊಳಿಸುವುದು ಇಂಥ ಒಂದು ಕ್ರಮ. ಆದರೂ ಯೂಟಿಐ ಪ್ರಕರಣದಲ್ಲಿ ರಿಲೆಯನ್ಸ್ ಅಪಾರ ಹಣ ಕಬಳಿಸಿದಂತಹ ಪ್ರಸಂಗಗಳು ನಡೆಯುತ್ತಲೇ ಇವೆ. ಇದು ಬಂಡವಾಳ ವ್ಯವಸ್ಥೆಯ ಸಾಮಾನ್ಯ ಲಕ್ಷಣವಾಗಿದ್ದು, ಅದರ ಮೇಲೆ ಪ್ರಲಾಪ ಮಾಡಿ ಪ್ರಯೋಜನವಿಲ್ಲ.

ಸಾಮಾನ್ಯ ಮನುಷ್ಯನ ದೃಷ್ಟಿಯಿಂದ ಷೇರುಪೇಟೆಯ ವ್ಯವಹಾರವನ್ನು ಗಮನಿಸುವುದು ಅಗತ್ಯ. ಅದು, ಅದರ ರಾಜಕೀಯ ಅರ್ಥಾತ್ ಬಂಡವಾಳದ ರಾಜಕೀಯದ ವಿಷಯ. ಹೊಸದೊಂದು ಆರ್ಥಿಕ ನೀತಿ, ಮೂರು ತಿಂಗಳಿಗೊಮ್ಮೆ ರಿಸರ್ವ್ ಬ್ಯಾಂಕ್ ಪ್ರಕಟಿಸುವ ಸಾಲದ ನೀತಿ, ಬಜೆಟ್ ಮಂಡನೆ, ಮುಖ್ಯವಾಗಿ, ಸರ್ಕಾರವೊಂದು ಪ್ರಜಾತಂತ್ರಾತ್ಮಕ ಪ್ರಕ್ರಿಯೆಯಲ್ಲಿ ತನ್ನ ವಾಯಿದೆ ಮುಗಿಸಿದ ನಂತರ ಹೊಸದೊಂದು ಸರ್ಕಾರ ಅಧಿಕಾರಕ್ಕೆ ಬರುವಾಗ, ಅದರಲ್ಲೂ ಅಲ್ಲಿ ಆಳುವ ಪಕ್ಷದ ಬದಲಾವಣೆಯಾದಾಗ, ಈ ಸಂಧಿಕಾಲಗಳಲ್ಲಿ ಷೇರುಪೇಟೆ ವಿಚಿತ್ರವಾಗಿ ವರ್ತಿಸಿ, ಕೆಲವೇ ಪ್ರಬಲ ದಳ್ಳಾಳಿಗಳು ಅಪಾರ ಲಾಭ ಮಾಡಿಕೊಳ್ಳುವುದು ಆಗಾಗ್ಗೆ ಕಂಡುಬಂದಿರುವ ವಾಸ್ತವ. ಅಧಿಕಾರದ ನಿಗೂಢ ಸನಿಕೆಗಳನ್ನು ನಿಯಂತ್ರಿಸುವ ಸಂಪತ್ತಿನ ಮಾರುಕಟ್ಟೆ ಸಾಧಾರಣ ಜನರ, ಸಾರ್ವಜನಿಕರ ಹಿತದೃಷ್ಟಿಗಿಂತ ಭಿನ್ನವಾದ, ತನ್ನದೇ ಸ್ವಾರ್ಥದಿಂದ ಪ್ರತಿಕ್ರಿಯಿಸಬಲ್ಲದು. ತನ್ಮೂಲಕ ಬರಲಿರುವ ಬದಲಾವಣೆಯ ಸ್ವರೂಪವನ್ನು ನಿಯಂತ್ರಿಸಬಲ್ಲದು, ನಿರ್ದೇಶಿಸಬಲ್ಲದು. ಇದು ಹರ್ಷದ್ ಮೆಹ್ತಾ ಪ್ರಕರಣದ ಪ್ರಭಾವಕ್ಕಿಂತ ಸಂಪೂರ್ಣವಾಗಿ ಭಿನ್ನವಾದುದು, ಕೃತ್ರಿಮವಾದುದು, ಉದ್ದೇಶಪೂರಿತವಾದುದು. ಇಂತಹ ಬದಲಾವಣೆಯ ಸಂಧಿಕಾಲದಲ್ಲೇ ಅಂತರರಾಷ್ಟ್ರೀಯವಾಗಿಯೂ ಹಣಕಾಸು ಮಾರುಕಟ್ಟೆಯಲ್ಲೇ ಆಗಲಿ, ರಾಜಕೀಯವಾಗಿಯೇ ಆಗಲಿ, ಏನಾದರೂ ತೀವ್ರ ಪರಿಸ್ಥಿತಿ ತಲೆದೋರಿದರೆ, ಮುಗಿದಂತೆಯೇ. ಷೇರುಪೇಟೆಯ ಪಾತ್ರಧಾರಿಗಳು ಉಗ್ರವಾಗಿ ಪ್ರತಿಕ್ರಿಯಿಸಿ, ಇನ್ನಿತರ ಎಲ್ಲ ವ್ಯವಸ್ಥೆಯ ಮೇಲೂ ಅನಪೇಕ್ಷಣೀಯ ಪ್ರಭಾವ ಬೀರಿ ಏರುಪೇರಿನ ಬಿಕ್ಕಟ್ಟು ತಂದೊಡ್ಡುವುದು ಖಚಿತ. ಬೇರಾವುದೋ ಸಟ್ಟಾ ಜೂಜು ಕೇಂದ್ರಗಳನ್ನು ಸಾಮಾನ್ಯ ಜನಜೀವನಕ್ಕೆ ಸಂಬಂಧಿಸಿದ್ದಲ್ಲವೆಂದು ನಿರ್ಲಕ್ಷಿಸಿದರೂ, ಷೇರುಪೇಟೆಯ ವ್ಯವಹಾರವನ್ನು ಗಮನಕ್ಕೆ ತೆಗೆದುಕೊಳ್ಳದೆ ಸುಮ್ಮನಿರಲಾಗುವುದಿಲ್ಲ. ತೀವ್ರ ಪರಿಸ್ಥಿತಿ ತಲೆದೋರಿದೊಡನೆಯೇ ರಿಸರ್ವ್ ಬ್ಯಾಂಕ್ ಮಧ್ಯಪ್ರವೇಶ, ಸರ್ಕಾರದ ಅಥವಾ ಈಗ ರಚಿತವಾಗಿರುವ ಸೆಕ್ಯೂರಿಟೀಸ್ ಮತ್ತು ಎಕ್ಸ್‌ಚೇಂಜ್ ಬೋರ್ಡ್‌ನ ಮಧ್ಯಪ್ರವೇಶ ಅನಿವಾರ್ಯವಾಗುತ್ತದೆ. ಸಾರ್ವಜನಿಕ ಹಣವನ್ನು ಬಳಸಿ ಪರಿಸ್ಥಿತಿಯನ್ನು ಮೊನ್ನೆ ತಂದಂತೆ ಹತೋಟಿಗೆ ತರಬೇಕಾಗುತ್ತದೆ. ಮೇ ೧೭ರ ಷೇರುಪೇಟೆಯ ಕುಸಿತಕ್ಕೆ ಸ್ವಲ್ಪಮಟ್ಟಿಗೆ ಅಂತರರಾಷ್ಟ್ರೀಯ ಕಾರಣಗಳನ್ನು (ಪೆಟ್ರೋಲ್ ಬೆಲೆ, ಚೀನಾ ಅರ್ಥ ವ್ಯವಸ್ಥೆಯಲ್ಲಿ ಹಿಂಜರಿತ, ಅಮೆರಿಕದಲ್ಲಿ ಬಡ್ಡಿ ಏರಿಕೆ ಇತ್ಯಾದಿ) ನೀಡಬಹುದೇ ವಿನಃ ರಿಸರ್ವ್ ಬ್ಯಾಂಕ್ ಗವರ್ನರುಗಳೇ ಆದಿಯಾಗಿ ಎಲ್ಲ ಆರ್ಥಿಕ ಹಾಗೂ ಹಣಕಾಸು ಚಿಂತಕರೂ, ಈ ವರ್ತನೆಗೆ ಯಾವ ರೀತಿಯ ತರ್ಕಬದ್ಧ ಕಾರಣವೂ ಇರಲಿಲ್ಲವೆಂದೂ, ಅಷ್ಟೇ ಏಕೆ, ಎಡಪಕ್ಷಗಳೂ ಸೇರಿದಂತೆ ಬರಲಿರುವ ಯಾವ ಹೊಸ ಸರ್ಕಾರದ ಆರ್ಥಿಕ ನೀತಿಗಳೂ ಆರ್ಥಿಕ ವಿಕಾಸದ ವಿರುದ್ಧವಾದುದಲ್ಲವೆಂದು ಹೇಳಿರುವುದನ್ನೂ ಗಮನಿಸಿದಾಗ ಪರಿಸ್ಥಿತಿಯ ರಾಜಕೀಯ ವ್ಯಾಖ್ಯಾನ ಸ್ಪಷ್ಟವಾಗುತ್ತದೆ. ಅಧಿಕಾರ ಕಳೆದುಕೊಂಡ ಎನ್.ಡಿ.ಎ. ಹಣಕಾಸು ಮಂತ್ರಿ ಎಡಪಕ್ಷಗಳ ನಾಯಕರುಗಳ ಹೇಳಿಕೆಗಳು ಮಾರುಕಟ್ಟೆಯ ಪತನಕ್ಕೆ ಕಾರಣವೆಂದು ಹೇಳಿ ತಮ್ಮ ಒಲವು ಯಾರ ಕಡೆ ಎಂದು ಸ್ಪಷ್ಟಪಡಿಸಿದ್ದಾರೆ. ಮನಮೋಹನ ಸಿಂಗರು, ದೇಶಭಕ್ತಿಯ ವಿಷಯದಲ್ಲಿ ಎಡಪಕ್ಷಗಳು ಯಾರಿಗೂ ಕಡಿಮೆಯಲ್ಲವೆಂದಿದ್ದು, ಎ. ಬಿ. ಬರ್ಧನ್ ಈ ಬೆದರಿಕೆಗಳಿಗೆ ತಾವು ಹೆದರುವುದಿಲ್ಲವೆಂದು ಹೂಂಕಾರ ಹಾಕಿದ್ದೂ ಎಲ್ಲಾ ಅರ್ಥವತ್ತಾಗುತ್ತದೆ. ಆದರೆ ವಾಸ್ತವದಲ್ಲಿ ಷೇರುಪೇಟೆಯ ಹಗರಣದಲ್ಲಿ ಪೆಟ್ಟು ಬೀಳುವುದು ಲಕ್ಷಾಂತರ ಸಣ್ಣ ಹೂಡಿಕೆಯವರಿಗೆ ಎಂದು ಗಮನಿಸಿದಾಗ, ಈ ಸಂಸ್ಥೆಯ ಸಾಮಾಜಿಕ ಹಿತಾಸಕ್ತಿಗಳ ವಿರೋಧಿ ಸ್ವರೂಪ ಸ್ಪಷ್ಟವಾಗುತ್ತದೆ. ಮೊನ್ನೆಯ ಆತಂಕಕಾರೀ ಪರಿಸ್ಥಿತಿಗೆ ಕಾರಣರಾದವರನ್ನು ಗುರುತಿಸಿ ಎಚ್ಚರಿಕೆ ನೀಡುವುದರಲ್ಲಿಯೂ, ಮಧ್ಯೆ ಪ್ರವೇಶಿಸಲೂ ಏಕೆ ವಿಳಂಬವಾಯಿತು, ಯಾರು ಕಾರಣವೆಂದು ಪತ್ತೆ ಮಾಡಿ, ಇದನ್ನು ಇನ್ನು ಮುಂದೆ ತಡೆಗಟ್ಟಲು ತಕ್ಕ ನಿಯಂತ್ರಣ ವ್ಯವಸ್ಥೆಯನ್ನು ನಿರ್ಮಿಸುವುದೂ ಹೊಸ ಸರ್ಕಾರದ ಆದ್ಯ ಕರ್ತವ್ಯ.

ವಿದೇಶೀ ಹಣ ಹೂಡಿಕೆದಾರರು ನಮ್ಮ ಷೇರುಪೇಟೆಗೆ ಬರಲು ಇದ್ದ ಕಾರಣಗಳು ಈಗ ಇಲ್ಲವೆಂದಾದಲ್ಲಿ ಅವರು ಅದಕ್ಕೆ ಮತ್ತೆಲ್ಲಿ ಅಧಿಕ ಲಾಭ ಗಳಿಸುವ ಅವಕಾಶವಿದೆಯೋ ಅಲ್ಲಿಗೆ ತಮ್ಮ ಬಂಡವಾಳವನ್ನು ರವಾನಿಸುವುದು ಒಂದು ಸಹಜ ಬೆಳವಣಿಗೆ. ಕಳೆದ ಹತ್ತು ವರ್ಷಗಳಲ್ಲಿ ಉದಾರೀಕರಣ ನೀತಿಯಿಂದಾಗಿ ದೇಶದೊಳಕ್ಕೆ ಹರಿದುಬಂದ ೫೦ ಸಹಸ್ರ ಕೋಟಿ ರೂಪಾಯಿಯಲ್ಲಿ ಆ ವಾರ ಕೆಲವು ಹೂಡಿಕೆಗಾರರು ೧೫೦೦ ಕೋಟಿಯಷ್ಟು ಬಂಡವಾಳವನ್ನು ಹಿಂತೆಗೆದುಕೊಂಡಿದ್ದು ಒಂದು ತಾತ್ಕಾಲಿಕ ಬೆಳವಣಿಗೆ ಇರಬಹುದು. ಈ ಏರುಪೇರಿಗೆ, ಸರ್ಕಾರವನ್ನು ಸೇರಲಿಚ್ಛಿಸದ ಎಡಪಕ್ಷಗಳು ಕಾರಣವೆಂದು ಪ್ರಚಾರ ಮಾಡುವುದು ಕಿಡಿಗೇಡಿತನ. ಪಶ್ಚಿಮದ ಮಾರುಕಟ್ಟೆಯಲ್ಲೇ ಈಗ ಇಲ್ಲಿ ದೊರೆಯುವ ಬಡ್ಡಿ ದೊರಕುವಂತಿರುವುದೂ ಅದಕ್ಕೆ ಕಾರಣ. ನಮ್ಮಲ್ಲಿ ಬಡ್ಡಿ ದರವು ಈಗ ಕಡಿಮೆಯಾಗಿರುವುದೂ ಕಾರಣವೆನ್ನಬಹುದು. ಅಮೆರಿಕದ ಆಂತರಿಕ ಕೇಂದ್ರದಲ್ಲೇ ಹೊಸ ಬಂಡವಾಳಕ್ಕೆ ಬೇಡಿಕೆ ಬರಲಾರಂಭಿಸಿರುವುದೂ ಕಾರಣ. ಹಾಗೂ ದೇಶದಲ್ಲಿ ನಗದು ಹಣ ಹೂಡಿಕೆಗೆ ಅವಕಾಶ ಸಿಗದೆ ಹೆಚ್ಚುವರಿ ತುಂಬಿದೆ. ಈಗ ವಿದೇಶೀ ಹಣದ ಹೂಡಿಕೆಯ ಅಗತ್ಯದಿಂದ ಮುಕ್ತವಾಗುವ ಪರಿಸ್ಥಿತಿಯಲ್ಲಿದೆ ನಮ್ಮ ಖಾಸಗೀ ವ್ಯವಹಾರದ ವಹಿವಾಟಿನ ಮಟ್ಟ. ಹೀಗಾಗಿ ಷೇರುಪೇಟೆಯ ಈ ಕುಸಿತ, ಸೋನಿಯಾ ಪ್ರಧಾನಿಯಾಗುವುದಿಲ್ಲ ಎಂದೊಡನೆಯೇ, ಅದೇ ಷೇರುಪೇಟೆಯ ಸರದಾರರು ಮನಮೋಹನರ ಹೆಸರನ್ನು ಎತ್ತಿಕೊಂಡು, ಒಂದೇ ದಿನದಲ್ಲಿ ಮಾರುಕಟ್ಟೆ ಮೇಲೇರಿಸಿರುವುದು – ಈ ವರ್ತನೆ ರಾಜಕೀಯ ಶಕ್ತಿಗಳ ಅಷ್ಟೇನೂ ಅಸ್ಪಷ್ಟವಲ್ಲದ ಕಿತಾಪತಿ ಎಂದೆನಿಸಿದರೆ ಅದು ಸತಾರ್ಕಿತವಾದ ಅನಿಸಿಕೆಯೇ. ಬಂಡವಾಳ ಅರ್ಥ ವ್ಯವಸ್ಥೆಯ ಅಂತರ್ಗತ ಬಹುಪಕ್ಷೀಯ ಪ್ರಜಾಪ್ರಭುತ್ವದಲ್ಲಿ ಕೇವಲ ಮತಗಳ ಎಣಿಕೆಯು ಯಾರಿಗೆ ಅಧಿಕಾರವೆಂದು ನಿರ್ಣಯಿಸುವುದರಲ್ಲಿ ನಿರ್ಣಾಯಕವಾಗುವುದಿಲ್ಲ.

**ಮೇ** ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ "ಬೆಂಗಳೂರು-ಕರ್ನಾಟಕ : ಅಂಕಿ ಸಂಖ್ಯೆಗಳ ಕಿರುನೋಟ" ಲೇಖನವು ಉದಯಭಾನು ಕಲಾನಿಕೇತನ ದವರು ಪ್ರಕಟಿಸುತ್ತಿರುವ 'ಬೆಂಗಳೂರು ದರ್ಶನ'ಕ್ಕಾಗಿ ಶ್ರೀ ರಾ. ನಂ. ಚಂದ್ರಶೇಖರ್ ಮತ್ತು ಶ್ರೀ ರಾ. ಪ್ರಭುಶಂಕರ್ ಬರೆದ ಲೇಖನ. **- ಸಂಪಾದಕ**

**ಏಪ್ರಿಲ್ ಸಂಚಿಕೆ**

ಪಾಲ್ ಸ್ವೀಜಿ ಕುರಿತ ಸಂಪಾದಕೀಯ ಅತ್ಯಂತ ಮಾನವೀಯತೆಯ, ಕಳಕಳಿಯ ವ್ಯಕ್ತಿಯಾದ ಸ್ವೀಜಿಯ ಪರಿಚಯವನ್ನು ಚೆನ್ನಾಗಿ ಮಾಡಿಕೊಟ್ಟಿದೆ. ಬಂಡವಾಳಶಾಹಿ ವ್ಯವಸ್ಥೆಯ ಭವಿಷ್ಯದ ಬಗ್ಗೆ ಚಿಂತಿಸುತ್ತ ಸ್ವೀಜಿ ಹೇಳಿದ ಮಾತುಗಳು ಇಂದಿನ ನಮ್ಮ ಪರಿಸ್ಥಿತಿಗೆ ಕನ್ನಡಿ ಹಿಡಿದಂತಿದೆ. 'ಗೋತ್ರ ಪದ್ಧತಿಯ ವೈಜ್ಞಾನಿಕ...' ಎನ್ನುವ ಲೇಖನ ಪಾರಿಭಾಷಿಕ ಪದಗಳಿಂದ, ಪರಿಕಲ್ಪನೆಗಳಿಂದ ಭಾರವಾಗಿ ಹೋಗಿದೆ. ವಸ್ತು ಉಪಯುಕ್ತವಾಗಿದ್ದು ಸರಳವಾಗಿದ್ದರೂ ಲೇಖಕರು ಅದನ್ನು ಕ್ಲಿಷ್ಟಗೊಳಿಸಿದ್ದಾರೆ ಅನ್ನಿಸುತ್ತದೆ.

ಬೆಂಗಳೂರು **ಸುಜಾತ**

ಡಾ|| ಜಿ. ಭಾಸ್ಕರ ಮಯ್ಯರವರ ಲೇಖನ "ಅಂಧ ಕೂಪದತ್ತ ಉನ್ನತ ಶಿಕ್ಷಣ" ತುಂಬ ಗಂಭೀರವಾಗಿದೆ. ಅದು ಎಚ್ಚರಿಕೆಯ ಕರೆಗಂಟೆಯನ್ನೂ ಕೊಡುತ್ತದೆ. ಈಗ ರಾಜಾರೋಷವಾಗಿ ಕಂಡು ಬರುತ್ತಿರುವ ಈ ಪಿತೂರಿ ಬಹಳ ದೀರ್ಘಕಾಲದಿಂದ ನಡೆದುಕೊಂಡು ಬರುತ್ತಿದೆ. ಆದರೆ ಈಗ ಅದಕ್ಕೊಂದು ಅಧಿಕಾರದ ಮುದ್ರೆ ಬಿದ್ದು ಚಲಾವಣೆಗೆ ಬರುತ್ತಿದೆ. ಜ್ಞಾನ-ವಿಜ್ಞಾನದ ಕ್ಷೇತ್ರದಲ್ಲಿ ಪ್ರಪಂಚ ಎಷ್ಟೊಂದು ಮುನ್ನಡೆದಿರುವಾಗ, ಆ ಕ್ಷೇತ್ರದಲ್ಲಿ ಸ್ಪರ್ಧಾತ್ಮಕತೆ ಉಂಟಾಗಿರುವಾಗ ಅಸಮರ್ಥನೀಯವಾದ ವಿಚಾರಗಳನ್ನು ಒಂದು ದೇಶದ ಜನಾಂಗದ ತಲೆಯಲ್ಲಿ ತುರುಕಲು ಹವಣಿಸುತ್ತಿರುವುದು ಎಂಥ ಘೋರವಾದ ದುಷ್ಟತನವೆನ್ನಬೇಕು.

ಗುಲಬರ್ಗಾ **ಭಾಲಚಂದ್ರ ಜಯಶೆಟ್ಟಿ**

**ಪ್ಯಾಲಿಸ್ಟೈನ್**

ಈಗಿನ ಭಯೋತ್ಪಾದನೆ ಮತ್ತು ಯುದ್ಧದ ಭೀಕರತೆಗೆ ಇಸ್ರೇಲ್ ಕಾರಣ. ಪ್ಯಾಲಿಸ್ಟೈನಿನ ನೂರಾರು ಜನರ ಹಕ್ಕುಗಳನ್ನು ಕಸಿದುಕೊಳ್ಳಲಾಗಿದೆ, ನೆಲೆಗಳಿಂದ ಹೊರ ದೂಡಲಾಗಿದೆ. ಅವರ ನೆಲೆಗಳಿಗೆ ಹಿಂದಿರುಗಲು ಅವರು ಹಕ್ಕುದಾರರೆಂಬುದನ್ನು ಮನಗಂಡು, ಬೇಕಾದ ಕ್ರಮ ಗಳನ್ನು ಕೈಗೊಳ್ಳಬೇಕು. ವಿಶ್ವಸಂಸ್ಥೆಗೆ ಇದನ್ನು ನಿರ್ವಹಿಸುವ ಶಕ್ತಿ ಇದೆ. ಇದು ದೇಶದ, ವಿಶ್ವದ ನಿರಾಶ್ರಿತರೆಲ್ಲರಿಗೂ ಅನ್ವಯಿಸುವ ಕಾಲ ಬಂದೀತೇ ?

ಬೆಂಗಳೂರು **ವೆಂಕಟಾಚಲ**

**ಲಂಕೇಶ್ ಕಾವ್ಯ**

ಲಂಕೇಶ್ ಕನ್ನಡ ಕಾವ್ಯ ಪರಂಪರೆಯಲ್ಲಿ ನಿಲ್ಲುವ ಕವಿಯಲ್ಲವೆಂದು ಲೇಖಕರು ಪ್ರತಿಪಾದಿಸುತ್ತಿದ್ದಾರೆಂದು ಎನಿಸುತ್ತದೆ. ಹಾಗಾದಲ್ಲಿ ಕವಿಗೆ ಮತ್ತು ಕವಿತೆಗೆ ಇರಬೇಕಾದ ಅರ್ಹತೆಗಳೇನು ? ಎಷ್ಟು ಕವಿತೆ ರಚಿಸಿದರೆ 'ಕವಿ' ಎನಿಸಿಕೊಳ್ಳಲು ಸಾಧ್ಯ ? ಒಂದು ಭಾಷೆಯ ಕಾವ್ಯಪರಂಪರೆಗೆ ಮಹತ್ವದ್ದನ್ನು ಸಲ್ಲಿಸಲು ಮತ್ತು ಅಲ್ಲಿ ಸಲ್ಲುವ ಕವಿ ಎನಿಸಿಕೊಳ್ಳಲು ಎಷ್ಟು ಕವಿತೆಗಳನ್ನು ರಚಿಸಿರ ಬೇಕು ? ಸಲ್ಲುವ ಕವಿ ಎನಿಸಿಕೊಳ್ಳಲು ಮಹಾಕಾವ್ಯಗಳನ್ನೇ ರಚಿಸಬೇಕೆ ? ಅಥವಾ ಒಂದೆರಡು ಜೀವಪರ ವಿಚಾರ ಚರ್ಚಿಸಲ್ಪಡುವ ಕವಿತೆಗಳೇ ಸಾಕೆ ?

ದಿನ್ನಿಯವರು ತಮ್ಮ ಲೇಖನದುದ್ದಕ್ಕೂ ಲಂಕೇಶ್ ಮಹತ್ವದ ಕವಿಯಲ್ಲವೆನ್ನುತ್ತಲೇ ಲಂಕೇಶರಿಂದ ಕನ್ನಡಕ್ಕೆ ಅಗಾಧವಾದದ್ದು ಸಂದಿದೆ ಎಂದು ಪ್ರತಿಪಾದಿಸುವುದು ವೈರುಧ್ಯದ ಪರಾಕಾಷ್ಠೆಯಾಗಿದೆ.

ಶಿವಮೊಗ್ಗ **ಡಾ. ಎಂ. ಕುಮಾರ**




**ಡಾ. ನಿರಂಜನ ವಾನಳ್ಳಿ ಅವರ 'ಪ್ರೆಸ್ ಎಂಬ ಹಣೆಪಟ್ಟಿ ಯಾಕೆ ಬೇಕು ?'** ನಾನು ಈ ಮೊದಲು ಅಂದುಕೊಂಡಂತೆ ಆಗಿ ನನ್ನ ಭಾವನೆಗಳನ್ನು ಸಹ ಡಾ|| ವಾನಳ್ಳಿ ಮೂಡಿಸಿದ್ದಾರೆ ಎನ್ನುವ ಸಮಾಧಾನ ಉಂಟಾಗಿದೆ. ನಿಜವಾಗಲೂ ಇದು ನಾನು ಕಂಡುಂಡ ಅನುಭವ. ನಾನು ಪ್ರತಿಷ್ಠಿತ ಪತ್ರಿಕೆಯ ಸುದ್ದಿ ಸಂಪಾದಕನಾಗಿದ್ದರೂ ಸಹ ಪ್ರೆಸ್ ಎಂಬ ಹಣೆಪಟ್ಟಿ ವಾಹನದ ಮೇಲೆ ಬರೆಯಿಸಿಲ್ಲ. ಪತ್ರಕರ್ತರಾದವರು ತಮ್ಮನ್ನು ಗುರುತಿಸಿಕೊಳ್ಳುವ ರೀತಿಯಲ್ಲಿ ತಮ್ಮ ವರ್ಚಸ್ಸು ಇಟ್ಟುಕೊಳ್ಳಬೇಕು.

ಗುಲಬರ್ಗಾ **ಸಂಗಮನಾಥ್ ರೇವತಗಾಂವ್**

**ಮೇ ಸಂಚಿಕೆ**

ಜೇಲು, ಕೋಳ ಅಪರಾಧಿಲೋಕದ ಕಳಂಕಿತ ಬದುಕಿನ ರೂಪಕಗಳು. ಸಾಮಾಜಿಕ ರಾಜಕೀಯ ಕಾರಣಗಳಿಗಾಗಿ ಜೇಲಿಗೆ ಹೋಗಿಬರುವುದು ಸಾಮಾಜಿಕ ಗೌರವದ, ಪ್ರತಿಷ್ಠೆಯ, ಆತ್ಮಾಭಿಮಾನದ ಸಂಕೇತವೂ ಹೌದು. ಹತ್ತು ತಿಂಗಳ ಹಿಂದೆ ನಾನು ಜೈಲಿಗೆ ಅನಿರೀಕ್ಷಿತವಾಗಿ ಹೋಗ ಬೇಕಾಯಿತು. ಒಂದು ಸುಳ್ಳು ದೂರಿನ ಕಾರಣದಿಂದ ನಾನು ಬಂಧಿತನಾಗಿ ವಿಚಾರಣಾ ಕೈದಿಯಾಗಿ ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿ ಒಂದು ತಿಂಗಳು ಕಳೆದೆ. ಹತ್ತು ತಿಂಗಳಾದರೂ ಆರೋಪಪಟ್ಟಿ ಸಲ್ಲಿಸಲಾಗಿಲ್ಲ. ನಾನೇ ಈಗ ಮಾನನಷ್ಟ ಮೊಕದ್ದಮೆ ಹಾಕುವ ತಯಾರಿಯಲ್ಲಿದ್ದೇನೆ. ಕೇವಲ ಐವತ್ತು ಸಾವಿರ ರೂ.ಗಳ ಎರಡು ಜಾಮೀನು ಗಳನ್ನು ನೀಡಿದ್ದರೆ ನಾನು ಅಂದೇ ಬಿಡುಗಡೆಯಾಗುತ್ತಿದ್ದೆ. ಆದರೆ ನನ್ನ ಸಹಾಯಕ್ಕೆ ಅಶಿಕ್ಷಿತನಾದ, ಕಾನೂನಿನ ತಿಳುವಳಿಕೆಯಿರದ, ಮಾನಸಿಕವಾಗಿ ಅಸ್ವಸ್ಥನಾಗಿರುವ ಹಳ್ಳಿಗನಾದ ನನ್ನ ತಮ್ಮನೊಬ್ಬನನ್ನು ಬಿಟ್ಟು ಯಾರೂ ಬರಲಿಲ್ಲ. ಫ್ಯಾಕ್ಟರಿಯೊಂದರಲ್ಲಿ ಕಾರ್ಮಿಕನಾಗಿ ರಾತ್ರಿ ಪಾಳಿ ದುಡಿಯುತ್ತ ಹಗಲು ರೆಗ್ಯುಲರ್ ವಿದ್ಯಾರ್ಥಿಯಾಗಿ ಉನ್ನತ ಮಟ್ಟದೊಂದಿಗೆ ಶಿಕ್ಷಣ ಪೂರೈಸಿದವ ನಾನು.

ಇದು ನನ್ನ ಕವನ :

**ಕಲೆಗಳು**

*ಇಲ್ಲಿ ಬಹಳಷ್ಟು ಜನರ ಮುಖಗಳ ಮೇಲೆ*
*ಕಣ್ಣೀರಿನ ಕಲೆಗಳು*
*ಗಾಯದ ಕಲೆ ರಕ್ತದ ಕಲೆ ಬಣ್ಣಗಳ ಕಲೆ*
*ಹುಟ್ಟಿನಿಂದ ಬಂದ ಮಚ್ಚೆಗಳ ಕಲೆ*
*ಇವುಗಳಿಗಿಂತ ಆಳವಾಗಿ ಅಗಲವಾಗಿ*
*ಮುಖದ ಮೇಲೆ ಮೈತುಂಬ*
*ಕಾಣುವ ಕಾಣದ ಕಲೆಗಳು*
*ಮೈಯಾಚೆ ಮನದಾಚೆ*
*ಮೋಡಗಳ ಹಾಗೆ ಹಬ್ಬುವ ಕಲೆಗಳು*
*ಜೋಲು ಮೋರೆ ಸೋಲಿತ ನಡಿಗೆ*
*ಅಸಹಾಯಕ ನೋಟಗಳಲ್ಲಿ ಭಯದಿಂದ ಇಣುಕುವ*
*ಮನಸಿನ ಮೇಲೆ ಎಳೆದ ಬರೆಗಳಂಥ ಕಲೆಗಳು*
*ಎಂದು ಸೋಪು ಹಚ್ಚಿ ತೊಳೆದರೂ ಸ್ವಚ್ಛಗೊಳ್ಳದ*
*ಇನ್ನಷ್ಟು ಸ್ಫುಟಗೊಳ್ಳುವ ವಿಕಾರ ಕಲೆಗಳು*
*ತಿಕ್ಕಿ ಉಜ್ಜಿದರೂ ಮಾಸದ*
*ಒಳಗಿನ ಬೆಂಕಿಯ ಹೊಗೆಯಿಂದ ಜಿಡ್ಡಾದ ಕಲೆಗಳು*
*ಕುಡಿದ ನೀರೆಲ್ಲ ಬೆವರು ಮೂತ್ರಗಳಾಗದೆ*
*ಬರೀ ಕಣ್ಣರಾಗುತ್ತದೆ ಇಲ್ಲಿ*
*ಆದ್ದರಿಂದ ನೀರು ಕುಡಿಯಲು ಭಯ*
*ಬತ್ತಿದರೆ ಎಲ್ಲಿಂದಲೋ ಪುಟಿವ*
*ಜೀವ ಹಿಂಡಿ ಹೊರ ಹೊಮ್ಮುವ ಕಣ್ಣೀರು*
*ಶಿಲೆಯ ಮೇಲಿನ ಬರಹಗಳ ಹಾಗೆ ಕಲೆಗಳನ್ನು ಉಳಿಸುವುದು*
*ಜೀವಮಾನದ ಕಲೆಗಳಿವು*

ಧಾರವಾಡ **ಬಸವರಾಜ ವಕ್ಕುಂದ**

ಹಿಂದೆ ವೀರ ಸಾವರಕರ್ ಮಾಂಡಲಿ ಜೈಲಿನಲ್ಲಿ ಮತ್ತು ಅಂಡಮಾನ್ ಜೈಲಿನಲ್ಲಿ ಇದ್ದಾಗ ಬರೆದಂತಹ ಕವಿತೆಗಳು ನೆನಪಿಗೆ ಬಂದವು. ಹಾಗೆ ನೋಡಿದರೆ ಕೈದಿಗಳಲ್ಲೂ ಸಹ ಉತ್ತಮ ಸಾಹಿತ್ಯವನ್ನು ಮೂಡಿಸುವವರೂ ಇಲ್ಲದಿಲ್ಲ. ಅದಕ್ಕೆ 'ಮರಾಠಿ ಕೈದಿಗಳ ಕವಿತೆಗಳು' ಒಂದು ಉದಾಹರಣೆಯೇ ಸರಿ ಎನ್ನಬಹುದು.

ನಾಗಮಂಗಲ **ಗುರುವಯ್ಯ**

***ಬಂತು ಚುನಾವಣೆ***

*ರಥದ ಮೇಲೆ ರಥವು ಹರಿದು*
*ಪಾಂಚಜನ್ಯ ಮೊಳಗಿದೆ,*
*ಹಳೆಯ ಪಥದಿ ಹೊಸತು ಮಾತು*
*ಭರವಸೆ ನುಡಿ ಬೆಳಗಿದೆ.*
*ಅವರನಿವರು ಇವರನವರು*
*ತೆಗಳಿ ತೆಗಳಿ ಕಟಕಿ ಉಗುಳಿ*
*ಕಮಲ ಚೆಂದವೆಂದು ವಿಮಲ*
*ಚಕ್ರ ಬಂಧವೆಂದು ತ್ರಿಶೂಲ*
*ತಮಟೆ ಹೊಡೆದು ಸಾರಿವೆ*
*ಚುನಾವಣೆಯಲಿ ಹೋರಿವೆ !*

* * *

*ಯಾರು ಬಂದರೇನು ನಮಗೆ ?*
*ರಾಗಿ ಬೀಸೋದು ತಪ್ಪದು ಜನಕೆ !*
*ಎಲ್ಲರೂನು ಉಡಾಫೆ ಹೊಡೆದು ಅಂಗೈಯಲ್ಲಿ ಆಕಾಶ ತೋರಿ*
*ಸ್ವರ್ಗವನ್ನೇ ಧರೆಗೆ ತಂದು, ಮೋಡಿ ಹಾಕಿ ಜಯದ ಭೇರಿ !*
*ಯಾರು ಗೆದ್ದರೂನು ಕೊನೆಗೆ...*
*ರಸ್ತೆಯಿಲ್ಲ; ದೀಪವಿಲ್ಲ; ಕುಡಿವ ನೀರು ಮೊದಲೇ ಇಲ್ಲ*
*ಮಲಗಿದ ರೈತ ಏಳಲೇ ಇಲ್ಲ.. ಬೆವರಿಗೆ ಬೆಲೆಯೂ ಸಿಗಲೇ ಇಲ್ಲ*
*''ರಾಮ ರಾಜ್ಯ'' ಘೋಷಣೆ*
*ಹಸ್ತಸಾಮುದ್ರಿಕೆ ಗಿಣಿ ಚಿಂತನೆ !*
*ನಿಜದ ಬದುಕು ಯಾತನೆ*

■ ***ಪ್ರೊ॥ ದೊಡ್ಡರಂಗೇಗೌಡ***

ಮುಖಪುಟದ ಚಿತ್ರ ಸೊಗಸಾಗಿದೆ ಒಳಪುಟದಲ್ಲಿನ ರಘೂತ್ತಮ ಪುಟ್ಟಿಯವರ ಚಿತ್ರಗಳು ಬಹಳ ಚೆನ್ನಾಗಿವೆ. ವಿಭಾ ಹಾಗೂ ಗವಿಸಿದ್ದ ಎನ್ ಬಳ್ಳಾರಿಯವರ ಕವನ ಓದಿ ಕೊನೆಯಲ್ಲಿ ಅವರಿಬ್ಬರು ಗತಿಸಿದ ವಿಷಯ ತಿಳಿದು ತುಂಬಾ ದುಃಖವಾಯಿತು.

ಪಾಂಡವಪುರ **ಅ. ಮೃತ್ಯುಂಜಯ**

ಎಸ್. ಬಿ. ಜೋಗುರ ಅವರ 'ಕೊಂಡು ತಂದ ಹೆಂಡತಿಯರು' ಲೇಖನ ಪ್ರಸ್ತುತ ಸಂದರ್ಭಕ್ಕೆ ಹಿಡಿದ ಕನ್ನಡಿಯಾಗಿದೆ. ಪುರುಷ - ಸ್ತ್ರೀ ಅನುಪಾತದಲ್ಲಿನ ವ್ಯತ್ಯಾಸಕ್ಕೆ ಸಾಮಾಜಿಕ ಪಾತಕಗಳೇ ಕಾರಣವಾಗಿದ್ದಲ್ಲಿ ಮಹಿಳೆಯ ಮೇಲಿನ ದೌರ್ಜನ್ಯವೂ ಪ್ರಧಾನಪಾತ್ರ ವಹಿಸುತ್ತದೆ. ಹಿಂದೆ ಗಂಡನಿಲ್ಲದ ವಿಧವೆಯನ್ನು ವರಿಸುವ ಅಥವಾ ಕೂಡಿಕೆ ಮಾಡಿಕೊಳ್ಳುವ ಪದ್ಧತಿ ಚಾಲ್ತಿಯಲ್ಲಿತ್ತು, ಕ್ರಮೇಣ ಇದು ಕಡಿಮೆಯಾಗುತ್ತಾಬಂದಿದೆ. ಸಮಾಜ ವಿಧವಾ ವಿವಾಹಕ್ಕೆ ಹೆಚ್ಚು ಮಾನ್ಯತೆ ನೀಡಿ, ವಿಧವೆಯನ್ನು ವಿವಾಹವಾಗುವ ಗಂಡಿಗೆ ಬೆಂಬಲ, ನೈತಿಕ ಸ್ಥೈರ್ಯ ನೀಡುವಂತಾಗಬೇಕು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಕೃಷಿಪತ್ರಿಕೋದ್ಯಮ ಪ್ರಶಸ್ತಿಗೆ ಆಹ್ವಾನ

ಧಾರವಾಡದ ಪರ್ಯಾಯ ಕೃಷಿಮಾಧ್ಯಮ ಕೇಂದ್ರ ೨೦೦೪ನೇ ಸಾಲಿನ ರಾಜ್ಯಮಟ್ಟದ ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗೆ ಪ್ರವೇಶಗಳನ್ನು ಆಹ್ವಾನಿಸಿದೆ. ಎರಡು ವಿಭಾಗಗಳಲ್ಲಿ ಪ್ರಶಸ್ತಿ ನೀಡಲಾಗುತ್ತಿದೆ. ಮೊದಲನೆಯದ್ದು ಕೃಷಿಕರೇ ಬರೆದ ಲೇಖನಗಳು ಹಾಗೂ ಎರಡನೆಯದ್ದು ಮುಕ್ತ ವಿಭಾಗವಾಗಿದ್ದು ಇದರಲ್ಲಿ ಎಲ್ಲರು ಭಾಗವಹಿಸಬಹುದಾಗಿದೆ. ಕೃಷಿಕರ ಅಗತ್ಯಗಳನ್ನಾಧಾರಿಸಿದ, ಅವರ ನೋವು-ನಲಿವುಗಳ ಮೇಲೆ ಬೆಳಕು ಚೆಲ್ಲುವ, ಅವರ ಸಮಸ್ಯೆಗಳ ಬಗ್ಗೆ ಜನಾಭಿಪ್ರಾಯ ಮೂಡಿಸುವ ವಸ್ತುನಿಷ್ಠ ಹಾಗೂ ವಿಚಾರ ಪೂರ್ಣ ಲೇಖನಗಳು ಪ್ರಶಸ್ತಿಗೆ ಅರ್ಹವಾಗುತ್ತವೆ.

ಆಸಕ್ತರು ಸೆಪ್ಟಂಬರ್ ೨೦೦೩ರಿಂದ ಆಗಸ್ಟ್ ೨೦೦೪ರ ನಡುವೆ ಯಾವುದೇ ಪತ್ರಿಕೆ ಅಥವಾ ನಿಯತ ಕಾಲಿಕದಲ್ಲಿ ಪ್ರಕಟಗೊಂಡ ಕೃಷಿಕಪರ ಬರಹವನ್ನು ಕಳುಹಿಸಿಕೊಡಲು ಕೋರಲಾಗಿದೆ. ಪ್ರವೇಶದೊಂದಿಗೆ ಐದು ರೂಪಾಯಿ ಸ್ಟಾಂಪ್ ಹಚ್ಚಿದ್ದ ಸ್ವವಿಳಾಸ ಬರೆದ ಉದ್ದನೆಯ ಲಕೋಟೆ ಇರಿಸಲು ಕೋರಿಕೆ. ಕೊನೆಯ ದಿನಾಂಕ - ಸೆಪ್ಟೆಂಬರ್ ೫, ೨೦೦೪.

ಇದೇ ಕೇಂದ್ರವು ಕೃಷಿ ಪತ್ರಿಕೋದ್ಯಮ ಡಿಪ್ಲೊಮಾಗೆ ಒಂದು ವರ್ಷದ ತರಬೇತಿ ನೀಡುತ್ತದೆ. ಅಕ್ಟೋಬರ್‌ನಲ್ಲಿ ಆರಂಭ. ೨೦ ರೂ. ಅಂಚೆ ಚೀಟಿಯೊಂದಿಗೆ ಆಸಕ್ತರು ಪತ್ರ ಬರೆಯಲು ಕೋರಿದೆ.

ವಿಳಾಸ : **ಅನಿತಾ ಪೈಲೂರು, ಪರ್ಯಾಯ ಕೃಷಿಮಾಧ್ಯಮ ಕೇಂದ್ರ, ಕೃಷ್ಣಾಲಯ, ೧ನೇ ಮುಖ್ಯರಸ್ತೆ ೪ನೇ ಅಡ್ಡರಸ್ತೆ ನಾರಾಯಣಪುರ, ಧಾರವಾಡ - ೫೮೦ ೦೦೮**

ಸನಾತನ ಧರ್ಮವಾದ ಹಿಂದೂಧರ್ಮದ ಬಗ್ಗೆ ವಿನೂತನವಾಗಿ ಚರ್ಚಿಸಿದ್ದಾರೆ ರವೀಂದ್ರ ಹಳಿಂಗಳಿ ''ಬದುಕಿನಲ್ಲಿ ಧರ್ಮದ ಪಾತ್ರ''ದಲ್ಲಿ, ಅವರ ಹೋಲಿಕೆ, ಇತಿಹಾಸದ ಉಲ್ಲೇಖನಗಳೊಂದಿಗೆ ಇತರೇ ಧರ್ಮಗಳ ಬಗ್ಗೆ ವಿಶ್ಲೇಷಣೆ ಸೊಗಸಾಗಿದೆ. 'ಧರ್ಮಾಂಧತೆ ಫ್ಯಾಸಿಸಂ ಆಗಿ ಮಾನವ ಕುಲವನ್ನು ಕಬಳಿಸಲು ಯತ್ನಿಸುತ್ತಿದೆ' ಎನ್ನುವ ವಾಸ್ತವಾಂಶ ಒಪ್ಪಲೇಬೇಕು.

ಬೆಂಗಳೂರು **ಸೆ. ಲ. ರಾಮಮೂರ್ತಿ**

**ವೈಜ್ಞಾನಿಕ ನೆಲೆಗಳ ಮೇಲೆ ಮೌಢ್ಯದ ದಾಳಿ**

ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವ ಸ್ಥಾನದಲ್ಲಿ ಮತ್ತು ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಅಧ್ಯಕ್ಷಸ್ಥಾನದಲ್ಲಿ ಸಂಘ ಪರಿವಾರದವರು ಆಸೀನರಾದ ಮೂರು-ನಾಲ್ಕು ವರ್ಷಗಳಿಂದೀಚೆಗೆ 'ವೈಜ್ಞಾನಿಕ ನೆಲೆಗಳ ಮೇಲೆ ಮೌಢ್ಯದ ದಾಳಿ' ಯಾವ ಯಾವ ರೂಪದಲ್ಲಿ ಆಗುತ್ತಿದೆ ಎಂಬುದನ್ನು ಪ್ರೊ. ಜಿ. ಆರ್. ಲಕ್ಷ್ಮಣರಾವ್ ಅವರು ಸಾಕ್ಷ್ಯಾಧಾರಗಳಿಂದ ವಿಶದ ಪಡಿಸಿದ್ದಾರೆ.

ಮಾಧ್ಯಮಗಳಲ್ಲಿ ಮಿಂಚುತ್ತಿರುವ ರವಿಶಂಕರ್ ಅವರ ಬದುಕಿನ ಕಲೆ, ಸಿದ್ಧಿ ಸಮಾಧಿಯೋಗ ಮತ್ತು ಸುದರ್ಶನಕ್ರಿಯೆಗಳು ಸರ್ವರೋಗ ನಿವಾರಕ ಎಂಬುದು ಒಂದು ಕಡೆಯಾದರೆ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಅಧ್ಯಕ್ಷರು 'ವಿಭೂತಿ'ಯನ್ನು ಮತ್ತು ನ್ಯಾಷನಲ್ ಏರೋಸ್ಪೇಸ್ ಪ್ರಯೋಗಾಲಯದ ವಿಜ್ಞಾನಿಗಳ ಕನ್ನಡ ಸಾಂಸ್ಕೃತಿಕ ಸಂಘ ಪ್ರಕಟಿಸುವ 'ಕಣಾದ' ಪತ್ರಿಕೆಯಲ್ಲಿ ಇಬ್ಬರು ವಿಜ್ಞಾನಿ-ಡಾಕ್ಟರುಗಳು ಒಂದು ಲೇಖನದಲ್ಲಿ 'ರುದ್ರಾಕ್ಷಿ'ಯನ್ನು ಸರ್ವರೋಗ ಪರಿಹಾರಕ ಎಂದು ಪ್ರತಿಪಾದಿಸಿರುವುದು ವೈಜ್ಞಾನಿಕ ಮುಖವಾಡ ಧರಿಸಿದ ಮೌಢ್ಯ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ದಾವಣಗೆರೆ **ಬಿ. ವಿ. ವೀರಭದ್ರಪ್ಪ**

**ಯುವ ಪ್ರಪಂಚ** ಯುವ ಬರಹಗಾರರಿಗೆ ಜಾಗತೀಕರಣ ಕುರಿತಂತೆ ಒಂದು ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಿದೆ. ಆಯ್ಕೆಯಾದ ಯುವ ಬರಹಗಾರರಿಗೆ ಸೂಕ್ತ ಬಹುಮಾನಗಳಿವೆ ಮತ್ತು ಲೇಖನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾಗುವದು. ಆಸಕ್ತರು ಲೇಖನವನ್ನು ೩೦-೦೬-೨೦೦೪ರೊಳಗೆ **ನಂ. ೬೬೧/ಎ, ೪ನೇ ಮುಖ್ಯರಸ್ತೆ, ಪೈಪ್‌ಲೈನ್, ಶ್ರೀನಗರ, ಬೆಂಗಳೂರು -೫೬೦ ೦೫೦** ಇವರಿಗೆ ಕಳಿಸಬೇಕು.

***(೩ನೇ ಪುಟದಿಂದ .... ಈ ತಿಂಗಳು)***

ಅಪಥ್ಯವಾದದ್ದು ಹೇಗೆಂಬುದನ್ನೂ ಅವರು ಸಂಶೋಧಿಸಬಹುದು.

ಕೇಂದ್ರದಲ್ಲಿ ಕಾಂಗ್ರೆಸ್ ನೇತೃತ್ವದ ಸಮ್ಮಿಶ್ರ ಸರ್ಕಾರದಲ್ಲಿ ಪಾಲ್ಗೊಳ್ಳಲು ಕ್ರಾಂತಿಕಾರಿ ಎಡಪಕ್ಷಗಳು ನಿರಾಕರಿಸಿವೆ. ಅವರದ್ದೇನಿದ್ದರೂ ಹೊರಗಡೆಯಿಂದ ಬೆಂಬಲವಂತೆ. ಬರ್ಧನ್ ಪಕ್ಷ ಸರ್ಕಾರ ಸೇರಲು ಸಿದ್ಧವಿತ್ತು. ಆದರೆ ಸುರ್ಜಿತ್ ಪಕ್ಷ ಹಾಗಲ್ಲ, ಆದ್ದರಿಂದ ಎಲ್ಲರೂ ಹೊರಗುಳಿಯುತ್ತಾರೆ, ತಮ್ಮ ಸೈದ್ಧಾಂತಿಕ ಮಡಿವಂತಿಕೆಯನ್ನು ಜೋಪಾನವಾಗಿ ರಕ್ಷಿಸಿಕೊಳ್ಳುತ್ತಾರೆ. ಮನಮೋಹಕ ಸಿಂಗರ ಯಾವುದೇ ಆರ್ಥಿಕ ನೀತಿಯನ್ನು ವಿರೋಧಿಸಿ ಅವಿಶ್ವಾಸ ಪ್ರಕಟಿಸುವ ಮಾತು ದೂರವೇ ಉಳಿಯಿತು. ಹೇಗೂ ಆ ನೀತಿಗಳಿಗೆ ವಾಜಪೇಯಿ ಬೆಂಬಲವಿರುತ್ತದೆ. ಫ್ಯಾಸಿಸ್ಟರ ವಿರುದ್ಧ ಸೆಣಸಲು ಸರ್ವಾಂಗೀಣವಾದ ಐಕ್ಯತಾ ಬಣವಿರಬೇಕೆಂದು ಡಿಮಿಟ್ರೋವ್ ಪ್ರತಿಪಾದಿಸಿದ್ದುದನ್ನು ಎಡಪಕ್ಷಗಳು ಉಚ್ಚರಿಸುತ್ತವೆ. ಆದರೆ ಈಗ ಅದು ಕೇವಲ ಮಂತ್ರೋಚ್ಚಾರಣೆಯಾಯಿತು. ತನ್ನ ಮೂರು ಕೋಟೆಗಳಾಚೆಯೂ ಭಾರತ ದೇಶವಿದೆ, ಅಲ್ಲಿಗೂ ಎಡಪಕ್ಷಗಳು ತಮ್ಮನ್ನು ವಿಸ್ತರಿಸಿಕೊಳ್ಳಬೇಕು, ಸಮ್ಮಿಶ್ರ ಸರ್ಕಾರ ಸೇರುವುದು ಅದಕ್ಕೂ ಇಂಬು ಕೊಡುತ್ತದೆ ಮತ್ತು ಮೂಲಭೂತವಾಗಿ ಫ್ಯಾಸಿಸ್ಟರ ಕರಾಳತೆಯನ್ನೆದುರಿಸುವ ಕರ್ತವ್ಯದಿಂದ ಕಿಂಚಿತ್ತೂ ವಿಮುಖರಾಗುವಂತಿಲ್ಲ ಎಂಬ ತಿಳುವಳಿಕೆಯು ಎಡಪಕ್ಷಗಳ ಸರ್ವಜ್ಞರಿಗೆ ಇಲ್ಲವೆಂದು ಹೇಳಲಾದೀತೆ! ಅಧಿಕಾರವನ್ನು ಹಂಚಿಕೊಳ್ಳಲು ಸಿದ್ಧವಿಲ್ಲದವರಿಗೆ, ಸರ್ಕಾರದಲ್ಲಿ ಪಾಲ್ಗೊಂಡು ಸಾರ್ವಜನಿಕರ ಪರವಾಗಿ ಮಧ್ಯಪ್ರವೇಶ ಮಾಡದಿರುವುದಕ್ಕೆ ಸೈದ್ಧಾಂತಿಕ ಗುರಾಣಿಗಳನ್ನು ಬಳಸುವವರಿಗೆ, ನಾಳೆ ಮೂರು ಕೋಟೆಗಳಲ್ಲಿ ಕೂಡ ಮತದಾರರು ಪ್ರಶ್ನೆ ಕೇಳಿಯಾರು : ಫ್ಯಾಸಿಸ್ಟರನ್ನು ಸೋಲಿಸಿರೆಂದು ನಮಗೆ ಪ್ರೇರಣೆ ನೀಡಿದ ನೀವೇಕೆ ಹೀಗೆ ಹಿಂದೇಟು ಹಾಕಿದಿರಿ, ಎಂದು. ಉದ್ದಾಮ ಪಾಂಡಿತ್ಯ, ಮಹದ್ಗ್ರಂಥಗಳು ಮತ್ತು ಕಾರ್ಯಕ್ರಮ ಸೂಚಿಗಳು ಅದಕ್ಕೆ ಏನುತ್ತರ ನೀಡುತ್ತವೆಂಬುದು ಪಾಮರರಿಗೆ ತಿಳಿಯುವುದಿಲ್ಲವೋ ಏನೋ!

# ಚುನಾವಣೆಯ ಫಲಶ್ರುತಿ

**ಚು**ನಾವಣಾ ಪೂರ್ವ ಸಮೀಕ್ಷೆಗಳೆಲ್ಲ ತಲೆಕೆಳಗಾಗಿವೆ. ಆರು ವರ್ಷಗಳ ಸಂಘ ಪರಿವಾರದ ಆಟಾಟೋಪ, ಅಹಂಕಾರಗಳೆಲ್ಲ ಮಣ್ಣು ಮುಕ್ಕಿವೆ. ಈ ಆಟಾಟೋಪಗಳಿಗೆ ಸೊಪ್ಪು ಹಾಕಿ ಮತ್ತೆ ಅಧಿಕಾರದಲ್ಲಿ ಕೂಡಿಸಿದ್ದರೆ ತಮ್ಮ ನಿಯಂತ್ರಕ ಶಕ್ತಿಗಳಾದ ಆರ್.ಎಸ್.ಎಸ್, ಭಜರಂಗದಳ, ವಿಎಚ್‌ಪಿಗಳ ಜೊತೆಗೂಡಿ ಮತ್ತೂ ಎಷ್ಟು ಅನಾಹುತ ಮಾಡಲು ಸಿದ್ಧರಿದ್ದರೋ ಏನೋ ಈಗ ಊಹಿಸಲೂ ಸಾಧ್ಯವಿಲ್ಲ. ಹಿಂದು ರಾಷ್ಟ್ರ ಕಲ್ಪನೆ ಮತ್ತು ಪ್ರಜಾಪ್ರಭುತ್ವ ಒಟ್ಟಿಗೆ ಸಾಧ್ಯವಿಲ್ಲ ಎಂಬ ಬಹು ಸರಳ ವಿವೇಕ ಐವತ್ತು ವರ್ಷಗಳಿಗೂ ಮೀರಿ ರಾಜಕಾರಣದಲ್ಲಿರುವ ವಾಜಪೇಯಿಯಂಥ ವ್ಯಕ್ತಿಗೂ ತಿಳಿಯದೇ ಹೋದದ್ದು ಅಚ್ಚರಿಯೇ ಸರಿ. ಮತ್ತು ಪ್ರಜಾಪ್ರಭುತ್ವವನ್ನು ತೊರೆದರೆ ಈ ದೇಶ ಒಂದು ಸಂಯುಕ್ತ ಸಂಸಂಜಕ ಯೂನಿಟ್ ಆಗಿ ಉಳಿಯಲು ಸಾಧ್ಯವಿಲ್ಲ ಎಂಬುದನ್ನು ಈ ದೇಶದ ಸಾಮಾನ್ಯ ಜನತೆ ಅರ್ಥ ಮಾಡಿಕೊಂಡಷ್ಟು ಸ್ಪಷ್ಟವಾಗಿ ಈ ರಾಜಕೀಯ ಧುರೀಣರುಗಳು ಅರ್ಥಮಾಡಿಕೊಳ್ಳದೇ ಹೋಗಿರುವುದು ಅವರ ವೈಯಕ್ತಿಕ ದುರಂತಗಳಷ್ಟೆ.

ಕಾಂಗ್ರೆಸನ್ನು ತನ್ನ ಮಿತ್ರ ಪಕ್ಷಗಳ ಜೊತೆಗೂಡಿಸಿ ಅಧಿಕಾರಕ್ಕೆ ತರಲಾಗಿದೆ ಎಂದಾಕ್ಷಣ ಈ ದೇಶ ಇಂದ್ರಲೋಕದ ಹೊಸ್ತಿಲಿಗೇ ಬಂದುಬಿಟ್ಟಿತೆಂದಲ್ಲ. ಕಾಂಗ್ರೆಸ್ ಪಕ್ಷದ ಕಾರ್ಯ ವೈಖರಿ, ಕಾಂಗ್ರೆಸ್ಸಿಗರ ರಾಜಕಾರಣ ಸಂಸ್ಕೃತಿ ಯಾರಿಗೇನೂ ಹೊಸದಲ್ಲ. ನೆಹರೂ ಮನೆತನದ ಅಂಗಳದಲ್ಲಿ ಸುಂಡಿಲಿಗಳ ಹಾಗೆ ಕೀಚೀ ಶಬ್ದ ಮಾಡುತ್ತ ಸುಳಿದಾಡುತ್ತ, ಅಂಗಳ ಬಿಟ್ಟು ಹೊರಗೆ ಬಂದ ಕೂಡಲೇ ಭುಜವಗಲಿಸಿ, ತಲೆ ನಿಮಿರಿಸಿ, ದಾಪುಗಾಲು ಹಾಕುತ್ತ ಆಕಾಶದತ್ತ ಕಣ್ಣು ನೆಟ್ಟು ನೆಲದ ಮೇಲೆ ಸುಳಿದಾಡುವ ಮನಷ್ಯರೆಲ್ಲ ತಮ್ಮ ಗುರಿ ಸಾಧನೆಗೆ ಅಡ್ಡವಾಗುವ ಕಲ್ಲು ಮುಳ್ಳುಗಳಂತೆ ಮಾತ್ರ ಕಾಣುತ್ತ ಉದಾಸೀನ, ಸಿನಿಕತನಗಳಿಂದ ಕಾಣುವ ಮಂದಿಯೇ ನೂರಕ್ಕೆ ತೊಂಬತ್ತು ಮಂದಿ ಈ ನಾಯಕರುಗಳು. ಈ ದೇಶವನ್ನು ಆಳುವುದಕ್ಕೇ ತಾವು ಜನ್ಮ ತಾಳಿರುವ ಹಾಗೆ ಬೀಗುವ ಮನೋಭಾವ ಎಂದಿನಿಂದಲೋ ಕರಗತವಾಗಿಬಿಟ್ಟಿದೆ.

ಆದ್ದರಿಂದ ಈ ಪಕ್ಷ ಅಧಿಕಾರಕ್ಕೆ ಬಂದಕೂಡಲೇ ಸ್ವರ್ಗ ಮೂರೇಗೇಣು ಎಂದು ಯಾರೂ ಭಾವಿಸಿಲ್ಲ. ಹಾಗೆ ನೋಡಹೋದರೆ ಯಾವ ಪಕ್ಷವು ಅಧಿಕಾರಕ್ಕೆ ಬಂದರೂ ಅದು ದೇವಮಾನವರಿಂದ ಕೂಡಿದ ಪಕ್ಷ ಎಂದು ತಿಳಿಯುವುದು ಪ್ರಜಾಪ್ರಭುತ್ವದಲ್ಲಿ ನಾವು ಮಾಡಬಹುದಾದ ಮೊದಲನೆಯ ಮತ್ತು ಘೋರ ಅಪರಾಧ. ಆದರೆ ಈ ಬಾರಿ ಕೊಂಚ ಆಸೆಗೆ ಆಸ್ಪದವಾಗುವಂತೆ ಈ ಕಾಂಗ್ರೆಸ್ ಪಕ್ಷಕ್ಕೆ ಬೆಂಬಲ ಸೂಚಿಸಿರುವ ಪಕ್ಷಗಳು ಹಲವಾರು ಇವೆ. ಇವುಗಳಲ್ಲಿ ಪ್ರಮುಖವಾಗಿ ಎಡಪಕ್ಷಗಳಿವೆ ಹಾಗೂ ನುರಿತ ರಾಜಕಾರಣಿಗಳನ್ನು ಹೊಂದಿದ ಡಿ.ಎಂ.ಕೆ, ಎಸ್.ಪಿ, ಎನ್.ಸಿ.ಪಿ ಪಕ್ಷಗಳಿವೆ. ಆದ್ದರಿಂದಲೇ ಈ ಸಲ ತುಸು ಹೆಚ್ಚು ಆಶಾವಾದಿಗಳಾಗಲು ಸಾಧ್ಯವಿದೆ.

ಇದೇ ಸಂದರ್ಭದಲ್ಲಿ ನಾವು ಪ್ರಜೆಗಳು ಈ ಪ್ರಜಾಪ್ರಭುತ್ವದ ಐವತ್ತಕ್ಕೂ ಮೀರಿ ವರ್ಷಗಳ ಅನುಭವ ಪಡೆದ ಮೇಲೆ ಜವಾಬ್ದಾರಿಗಳ ಕುರಿತಾಗಿಯೂ ಗಂಭೀರವಾಗಿ, ತುರ್ತಾಗಿ ಚಿಂತಿಸಬೇಕಾಗಿದೆ. ವೀಕ್ಷಕರಾಗಿ ಮಾತ್ರ ಅಥವಾ ದೂರ ನಿಂತು ಟೀಕೆ ಮಾಡುವ, ಗೊಣಗುವ ನಮ್ಮ ಇಂದಿನವರೆವಿಗಿನ ವರ್ತನೆಗಳನ್ನು ನಾವು ಕೈ ಬಿಡಬೇಕು. ಸದಾ ಎಚ್ಚರದ ಸ್ಥಿತಿಯಲ್ಲಿರುವುದನ್ನು ನಾವು ಕಲಿಯಬೇಕು. ಮತ್ತು ಅದಕ್ಕಿಂತ ಮುಖ್ಯವಾಗಿ ಯಾವುದೇ ರಾಜಕೀಯ ಪಕ್ಷ ಅಧಿಕಾರ ಪಡೆಯಲಿ ನಾವು ಮಾತ್ರ ಎಂದಿಗೂ ವಿರೋಧ ಪಕ್ಷದಲ್ಲಿರಬೇಕು ಎಂಬ ಸತ್ಯವನ್ನು ನಾವು ನಮ್ಮ ರಾಷ್ಟ್ರೀಯ ಬದುಕಿನಲ್ಲಿ ಮೈಗೂಡಿಸಿಕೊಳ್ಳಬೇಕು.

ವೀಕ್ಷಕರಾಗಿ ಮಾತ್ರ ಅಥವಾ ದೂರ ನಿಂತು ಟೀಕೆ ಮಾಡುವ, ಗೊಣಗುವ ನಮ್ಮ ಇಂದಿನವರೆವಿಗಿನ ವರ್ತನೆಗಳನ್ನು ನಾವು ಕೈ ಬಿಡಬೇಕು. ಸದಾ ಎಚ್ಚರದ ಸ್ಥಿತಿಯಲ್ಲಿರುವುದನ್ನು ನಾವು ಕಲಿಯಬೇಕು. ಮತ್ತು ಅದಕ್ಕಿಂತ ಮುಖ್ಯವಾಗಿ ಯಾವುದೇ ರಾಜಕೀಯ ಪಕ್ಷ ಅಧಿಕಾರ ಪಡೆಯಲಿ ನಾವು ಮಾತ್ರ ಎಂದಿಗೂ ವಿರೋಧ ಪಕ್ಷದಲ್ಲಿರಬೇಕು ಎಂಬ ಸತ್ಯವನ್ನು ನಾವು ನಮ್ಮ ರಾಷ್ಟ್ರೀಯ ಬದುಕಿನಲ್ಲಿ ಮೈಗೂಡಿಸಿಕೊಳ್ಳಬೇಕು.

**ಜಿ. ಕೆ. ಗೋವಿಂದರಾವ್**

ಮತ್ತೆ ಕನಸು ಕಾಣಲು, ಹೊಸ ನಾಳೆಗಳಿಗಾಗಿ ಕಾಯಲು ಈ ಚುನಾವಣೆ ಅನುವು ಮಾಡಿಕೊಟ್ಟಿದೆ. ಅದನ್ನು ಉಳಿಸಿಕೊಳ್ಳುವುದು – ನಮ್ಮ ಮೊಮ್ಮಕ್ಕಳ ಹಿತಚಿಂತನೆಯಿಂದ – ಅತ್ಯಂತ ಅವಶ್ಯಕವಾದದ್ದು.

* * *

ಈ ಚುನಾವಣೆ ಕಲಿಸಿದ ಮತ್ತೊಂದು ಮಹತ್ತರ ಪಾಠವಿದೆ. ಅತ್ಯಂತ ಗಹನವೂ ಪ್ರಮುಖವೂ ಆದ ಪಾಠ ಇದು. ಈ ಪಾಠ ಬಹು ನೇರವಾಗಿ ಸಶಸ್ತ್ರ ಹೋರಾಟದಿಂದ ಮಾತ್ರ ಈ ದೇಶಕ್ಕೆ ಮೋಕ್ಷ ಎಂದು ನಂಬಿದವರಿಗೆ, ಹಿಂಸೆ ಸಾರ್ವಜನಿಕ ಬದುಕಿನಲ್ಲಿ ಅನಿವಾರ್ಯ ಎಂದು ವಾದಿಸುವವರಿಗೆ ವಿಶೇಷವಾದದ್ದು ಹೌದಾದರೂ, ಈ ವಾದದಲ್ಲಿ ನಂಬಿದ, ಆದರೆ ಅದರ ಕುರಿತಾಗಿ ಏನೂ ಮಾಡದೆ ಮೂಕ ಪ್ರೇಕ್ಷಕರಾಗಿ ಇರುವ ನಮ್ಮಂಥವರಿಗೂ ಮುಖ್ಯವಾದುದು.

ಸಶಸ್ತ್ರ ಹೋರಾಟವೆಂದರೆ ರಕ್ತಪಾತ. ರಕ್ತ ಸುರಿಸುವುದು ಈ ಹೋರಾಟಗಾರರು ನ್ಯಾಯ ಮತ್ತು ಆರ್ಥಿಕ ಸಮಾನತೆಗಳನ್ನು ಸ್ಥಾಪಿಸುವುದಕ್ಕಾಗಿ ಬಳಸುವ ಮಾರ್ಗ. ಹಿಂಸೆಯನ್ನು ಬಳಸದೇ ಈ ದೇಶದಲ್ಲಿ ಸಮಾನತೆಯನ್ನು ಸಾಧಿಸುವುದು ಸಾಧ್ಯವಿಲ್ಲ ಎಂದು ಅವರ ನಂಬಿಕೆ. ಇದಕ್ಕೆ ಸಮರ್ಥನೆಯಾಗಿ ಐವತ್ತು ವರ್ಷಗಳ ಈ ದೇಶದ ರಾಜಕೀಯ ವ್ಯವಸ್ಥೆ ಹಾಗೂ ರಾಜಕಾರಣಿಗಳ ನಡತೆ ಇವುಗಳನ್ನು ಮುಂದುಮಾಡುತ್ತಾರೆ. ಜಮೀನ್ದಾರಿ ಪದ್ಧತಿಯ ದೇಶದಲ್ಲಿ ರಾಜಕಾರಣಿಗಳು ಪಾಳೇಗಾರರ ಹಾಗೆ ನಡೆದುಕೊಳ್ಳುತ್ತಾರೆ. ಕ್ರೂರಿಗಳೂ, ಭ್ರಷ್ಟರೂ ಆಗಿರುತ್ತಾರೆ. ಯಾವುದೇ ವ್ಯವಸ್ಥೆ ಬರಲಿ – ಕಾಂಗ್ರೆಸ್ಸಾಗಲಿ, ಬಿ.ಜೆ.ಪಿಯಾಗಲಿ ಅಥವಾ ಇನ್ನಾವುದೇ ಆಗಲಿ – ಎಲ್ಲ ಪಕ್ಷಗಳೂ ಅಧಿಕಾರಕ್ಕೆ ಬಂದ ಕೂಡಲೆ ನಡೆದುಕೊಳ್ಳುವ ಮಾರ್ಗ ಒಂದೇ. ಗ್ರಾಮಾಂತರ ಪ್ರದೇಶಗಳಲ್ಲಿ ಭೂರಹಿತ ಕೂಲಿಕಾರರ ಪಾಡು, ಹೆಣ್ಣುಮಕ್ಕಳ ಸ್ಥಿತಿಗತಿ, ದಲಿತರ ಮತ್ತು ಇನ್ನಿತರ ಕೆಳವರ್ಗಗಳ ಮೂಕ ಸಂಕಟ, ನೋವು, ನಗರ ಪ್ರದೇಶಗಳ ವಿದ್ಯಾವಂತ ಮಧ್ಯಮವರ್ಗದ ಸಂತೃಪ್ತ ಜೀವಿಗಳಿಗೆ ಅರ್ಥವಾಗದಿರುವುದಷ್ಟೇ ಅಲ್ಲ; ಈ ಎಲ್ಲ ವಿಷಯಗಳ ಕುರಿತಾಗಿ ಇವರುಗಳಿಗೆ ತಿರಸ್ಕಾರ ಮತ್ತು ಉದಾಸೀನ ಕೂಡ. ಹಾಗಾಗಿಯೇ ಅಹಿಂಸೆಯ ಕುರಿತಾಗಿ ಮಾತನಾಡುವುದು. ಪ್ರಜಾಪ್ರಭುತ್ವದ ಪ್ರಕ್ರಿಯೆಯಲ್ಲಿ ನಂಬಿಕೆಯಿಡಬೇಕೆಂದು 'ಉದ್ದುದ್ದ ಭಾಷಣ ಮಾಡುವುದು' – ತಮ್ಮ ಮಾಹೆಮಾನಾ ಸಂಬಳ ಸಾರಿಗೆ ಸವಲತ್ತುಗಳ ಅನುಕೂಲಗಳಲ್ಲಿ ಸುತ್ತಲ ಸಮಾಜದ ಸ್ಥಿತಿಯನ್ನು ಗಣನೆಗೂ ತೆಗೆದುಕೊಳ್ಳದಷ್ಟು ತಾತ್ಸಾರ ತಾಳುತ್ತಾರೆ. ಅಹಿಂಸಾವಾದಿಗಳು ಜಾಣ ಮಾತುಗಾರರು, ಕ್ರಿಯಾಶೀಲತೆ ಕಳೆದುಕೊಂಡ ನೀರಸರು – ಎಂದೆಲ್ಲಾ ವಾದ ಮಾಡುತ್ತಾರೆ. ಈ ವಾದಗಳಿಗೆಲ್ಲ ಉತ್ತರ ಕೊಡುತ್ತ ಹೋದರೆ ಒಂದು ದೀರ್ಘ ಲೇಖನವಾಗಿಬಿಡುತ್ತದೆ. ಆದರೆ ಸಂಕ್ಷಿಪ್ತವಾಗಿ ಒಂದೆರಡು ಮಾತುಗಳನ್ನು ಹೇಳಲು ಬಯಸುತ್ತೇನೆ.

ಅಹಿಂಸಾವಾದವೆಂದರೆ ಮಾತಿನಲ್ಲಿ ನಂಬಿಕೆ ಇಡುವುದು ಎಂದೇ ಅರ್ಥ.

ಪ್ರಜಾಪ್ರಭುತ್ವದಲ್ಲಿ ವಿಶ್ವಾಸವೆಂದರೆ ಮಾತು, ಚರ್ಚೆ, ವಾದ, ವಾಗ್ವಾದ ಇವುಗಳನ್ನು ನೆಚ್ಚಿ ಆ ಬುನಾದಿಯ ಮೇಲೆ ಸಮಾಜ ಕಟ್ಟುವುದು ಎಂದು ಅರ್ಥ. ಎಂದೇ ನಮ್ಮ ಸಂಸತ್ತು ಹಾಗೂ ವಿಧಾನಸಭೆಗಳು ಇರುವುದು. ಅದಕ್ಕಾಗಿಯೇ ವಿರೋಧಪಕ್ಷ ಎಂಬುದು ಈ ಸಂಸತ್ತಿನ ಅವಿಭಾಜ್ಯ ಅಂಗವಾಗಿರುವುದು. ಮಾತು, ವಿಚಾರ ವಿನಿಮಯ, ಇವುಗಳು ಸಶಸ್ತ್ರ ಹೋರಾಟಕ್ಕೆ ಹೋಲಿಸಿದಾಗ ನಿರ್ಜೀವವಾಗಿ ಕಾಣುವುದು ಸಹಜ. ಮಾತು, ಮಾತು, ಮಾತುಗಳ ಜಾಲದಲ್ಲಿ ಸಿಲುಕಿ ತಮ್ಮನ್ನೇ ಮರೆತುಬಿಡುವ ಮತ್ತು ಆಂತರಿಕವಾಗಿ ಜೋಭದ್ರತನ ಬೆಳೆಸಿಕೊಂಡು ಬಿಡುವ ಜನಗಳ ಹಾಗೆ ಕಾಣಬಹುದು. ಹಾಗೆ ಹಲವು ಮಂದಿ ಆಗಿ ಬಿಡುವುದೂ ಸಾಧ್ಯ. ಸಶಸ್ತ್ರ ಹೋರಾಟವೆಂದರೆ

ನಿರಂತರ 'ಕ್ರಿಯಾಶೀಲತೆ'. ಸದಾ ಎಚ್ಚರ, ಸಂಪೂರ್ಣ 'ಶಿಸ್ತು' ಹಾಗೂ ಚಿತ್ತೈಕಾಗ್ರತೆ ಎಂದೆಲ್ಲಾ ನಮಗೆ ಕಂಡು ನಮ್ಮನ್ನು ಆಕರ್ಷಿಸಿಬಿಡುತ್ತವೆ – ವಿಶೇಷವಾಗಿ ಯುವಕ ಯುವತಿಯರನ್ನು.

ಈ ಸಮಾಜದಲ್ಲಿ ಅಸಮಾನತೆ, ಶೋಷಣೆಗಳ ಜೊತೆ ಜೊತೆಗೆ ಮುಖಾಮುಖಿಯಾಗಿ ಇವುಗಳನ್ನು ನಿವಾರಿಸಿ ಒಂದು ಆರೋಗ್ಯಕರ, ಆರ್ಥಿಕ ಸಾಮಾಜಿಕ ನ್ಯಾಯದ ಮೇಲೆ ಒಂದು ಸಮಾಜ ಕಟ್ಟುವ ಪ್ರಯತ್ನ ಈ ಐವತ್ತಕ್ಕೂ ಮೀರಿದ ವರ್ಷಗಳಲ್ಲಿ ಈ ದೇಶದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಸಾಧಿಸಲಿಲ್ಲ ಎಂಬುದು ಬಹು ಮುಖ್ಯವಾದ ದೂರು. ಬದಲಾಗಿ ಪ್ರಜಾಪ್ರಭುತ್ವದ ಸವಲತ್ತುಗಳನ್ನೇ ದುರ್ಬಳಕೆ ಮಾಡುತ್ತ ಶೋಷಕರು, ಭ್ರಷ್ಟರು, ರಾಜಕಾರಣದಲ್ಲಿ ರಾಕ್ಷಸರೂ ಆಗಿ ಬೆಳೆದುನಿಂತಿರುವ ಶಕ್ತಿಗಳ ಕೈಗಳಲ್ಲಿ ಈ ಸಮಾಜ ನಲುಗಿಹೋಗಿದೆ ಎಂಬುದೂ ಕೂಡ ಒಪ್ಪಲೇ ಬೇಕಾದ ವಾದ.

ಆದರೆ ಇದಕ್ಕೆ ಉತ್ತರ ಹಿಂಸೆಯೆ? ಅಥವಾ ನಮ್ಮ ಸಮಾಜದ ಸಾವಿರಾರು ವರ್ಷಗಳ ಚರಿತ್ರೆಯ ನಿಜವಾದ ವ್ಯಾಖ್ಯಾನದಿಂದ, ಅಷ್ಟರಮಟ್ಟಿಗೆ ನಮ್ಮ ಪ್ರಜ್ಞೆಗಳನ್ನು ವಿಸ್ತಾರಗೊಳಿಸಿಕೊಂಡು ಈ ಸಮಸ್ಯೆಗಳಿಗೆ ಸರಿದಾರಿ ಕಂಡುಕೊಳ್ಳುವುದು ಮಾರ್ಗವೆ?

ಉಚ್ಚ-ನೀಚರೆಂದು ಈ ಸಮಾಜವನ್ನು ಒಡೆಯಲಾಗಿದೆ. ಬಡವ-ಬಲ್ಲಿದ, ಗ್ರಾಮಸ್ಥ-ಪಟ್ಟಣಿಗ, ಹೆಣ್ಣು-ಗಂಡು ಎಂದೆಲ್ಲ ನೂರು ರೀತಿ ಛಿದ್ರಮಾಡಲಾಗಿದೆ. ಕೇವಲ ೫-೧೦ ಜನಗಳ ಕೈಯಲ್ಲಿ ಮಿಕ್ಕ ೯೦-೯೫ ಜನರ ಭವಿಷ್ಯ, ಸುಖ ಸಂತೋಷಗಳು ನಿರ್ಣಯವಾಗುವ ವ್ಯವಸ್ಥೆ ನಮ್ಮ ದೇಶದಲ್ಲಿ ವೈದಿಕ ಕಾಲದಿಂದಲೂ ಜಾರಿಯಲ್ಲಿದೆ. ಮತ್ತೆ ಈ ಕಾರಣಗಳಿಂದಾಗಿಯೇ ನಮ್ಮ ಮೇಲೆ ಕಾಲದಿಂದ ಕಾಲಕ್ಕೆ ಹೊರಗಿನ ಶಕ್ತಿಗಳು ಆಕ್ರಮಣ ನಡೆಸಿವೆ. ನೂರಕ್ಕೆ ತೊಂಬತ್ತೈದು ಜನ ಎರಡು ರೀತಿಯ ತುಳಿತಕ್ಕೆ ಒಳಗಾಗಿದ್ದಾರೆ. ಒಂದು ಒಳಗಿನ ಶಕ್ತಿಗಳು – ಜಾತಿ, ಮತ, ಮೇಲು-ಕೀಳು ಎಂಬ ಲೆಕ್ಕದಲ್ಲಿ ತುಳಿಯುವುದು; ಹಾಗೂ ಹೊರಗಿನ ಶಕ್ತಿಗಳು ಮಿಕ್ಕ ಅಳಿದುಳಿದ ಸ್ವಾತಂತ್ರ್ಯವನ್ನೂ ಕಸಿದುಕೊಂಡು ತುಳಿಯುವುದು. ಇಂಥ ಸಮಾಜ ಒಮ್ಮಿಂದೊಮ್ಮೆಗೆ ಒಂದು ರಾಷ್ಟ್ರವಾಗಿ ರೂಪುಗೊಳ್ಳುತ್ತದೆ. ಒಂದು ಧ್ವಜ, ಒಂದು ಸಂವಿಧಾನ, ಒಂದು ಧ್ಯೇಯ ಇವುಗಳ ಅಡಿಯಲ್ಲಿ ಬರುತ್ತದೆ. ಒಮ್ಮಿಂದೊಮ್ಮೆಗೇ ಸ್ವತಂತ್ರವಾಗುತ್ತದೆ. ಸಮಾನತೆಯ ಸಾಧ್ಯತೆಗಳನ್ನು ಕನಸುಕಾಣುತ್ತದೆ. ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ ತನ್ನ ಹಕ್ಕು ಚಲಾಯಿಸುವ ಹೊಸ ಶಕ್ತಿ ಪಡೆಯುತ್ತಾನೆ. ತನ್ನ ಆತ್ಮವಿಶ್ವಾಸ ಘನತೆ ಇದ್ದಕ್ಕಿದ್ದಂತೆ ಗರಿಗೆದರಿ ಸ್ವಚ್ಛಂದವಾದ ಅನುಭವವಾಗುತ್ತದೆ. ನಿಜ, ಇಷ್ಟೆಲ್ಲ ಕನಸುಗಳೂ ಸರಾಗವಾಗಿ, ಸುಗಮವಾಗಿ ಆದರ್ಶದ ಮಾರ್ಗದಲ್ಲಿ ನಡೆದು ಹೋಗಿಬಿಟ್ಟಿದ್ದರೆ ಈ ರಾಷ್ಟ್ರ ನಿಜಕ್ಕೂ ಎಲ್ಲ ಅರ್ಥದಲ್ಲಿಯೂ ಜಗತ್ತಿನ ಬಹು ದೊಡ್ಡ ಪ್ರಜಾಪ್ರಭುತ್ವವಾಗಿಬಿಡುತ್ತಿತ್ತು. ಆದರೆ ವಾಸ್ತವದಲ್ಲಿ ಹಾಗೆ ಆಗಲಿಲ್ಲ. ವಾಸ್ತವದಲ್ಲಿ ಯಾವ ಕನಸೂ ಅಷ್ಟು ಸುಂದರವಾಗಿ ಮೈದಾಳುವುದಿಲ್ಲ. ಕಾರಣ ಬಹು ಸ್ಪಷ್ಟ – ನಾವು ಕೇವಲ ಮನುಷ್ಯರು, ಅದಕ್ಕಾಗಿ. ಅಧಿಕಾರ, ಐಶ್ವರ್ಯ, ಪ್ರಭಾವ ಇವುಗಳು ಏನೆಂದೇ ತಿಳಿಯದಿದ್ದ ನೂರಕ್ಕೆ ೯೫ ಜನ ರಾತ್ರೋರಾತ್ರಿ ಸ್ವತಂತ್ರರಾದಾಗ, ಇದ್ದಕ್ಕಿದ್ದಂತೆ ಚುನಾವಣೆಗಳಿಗೆ ನಿಂತು ಗೆದ್ದು ಅಧಿಕಾರ ಪಡೆದಾಗ, ಆ ಅಧಿಕಾರದ ವ್ಯಾಪ್ತಿಯಿಂದ ಕೊಂಚ ಸ್ತಿಮಿತ ಕಳೆದುಕೊಂಡು ಹೊಸ ಸಂದರ್ಭದ ದುರ್ಲಾಭಗಳನ್ನು ಪಡೆದುಕೊಳ್ಳಲು ಆರಂಭಿಸಿದರೆ ನಾವು ಅಷ್ಟೊಂದು ಶಾಕ್ ಆಗಬೇಕಾದ ಅವಶ್ಯಕತೆಯಿದೆಯೆ? ಪ್ರಜಾಪ್ರಭುತ್ವದಲ್ಲಿ ದೇವತೆಗಳನ್ನು ನಿರೀಕ್ಷಿಸುವುದೂ, ಪರಿಪೂರ್ಣರಲ್ಲದವರು ಅಧಿಕಾರ ಬಯಸಬಾರದು ಎಂದು ತೀರ್ಮಾನಿಸುವುದೂ ಕೂಡ ಅಪ್ರಬುದ್ಧತೆಯ ಲಕ್ಷಣ.

ಹೀಗೆಂದಾಕ್ಷಣ ಈ ರೀತಿ ಸ್ತಿಮಿತ ಕಳೆದುಕೊಂಡವರನ್ನು ಸೈರಿಸಿಕೊಂಡು, ಅವರ ಪಾಡಿಗೆ ಅವರನ್ನು ಬಿಟ್ಟು, 'ರಾಜಕಾರಣವೇ ಹೊಲಸು' ಎಂದು ತೀರ್ಮಾನಿಸಿ ನಮ್ಮ ನಮ್ಮದೇ ಸಣ್ಣಪುಟ್ಟ ಸ್ವಾರ್ಥಗಳಲ್ಲಿ ಭ್ರಷ್ಟತನಗಳಲ್ಲಿ ಮುಳುಗಿಬಿಡುವುದು ಉತ್ತರವಲ್ಲ. ಸುಶಿಕ್ಷಿತರು, ಸಮಾಜದ ಕುರಿತಾಗಿ ಕಳಕಳಿಯನ್ನು ಉಳಿಸಿಕೊಂಡವರು, ಯಾವ ರೀತಿಯ ಸ್ವಂತ ಲಾಭಗಳಿಗೂ ಆಸೆ ಪಡದವರು ಆದ ಮಂದಿ ಸಮಾಜದಲ್ಲಿ ಈ ಬೆಳವಣಿಗೆಗಳ ಕುರಿತಾಗಿ ಜನಗಳನ್ನು ಎಚ್ಚರಿಸುತ್ತ, ಅವರನ್ನು ಸದಾ ಜಾಗ್ರತಾವಸ್ಥೆಯಲ್ಲಿ ಇಟ್ಟಿರುವ ಜವಾಬ್ದಾರಿಯನ್ನು ಹೊರಬೇಕು. ನಮ್ಮ ಶಿಕ್ಷಣ, ನಮ್ಮ ಮಾಧ್ಯಮಗಳು ಹಾಗೂ ಸಾರ್ವಜನಿಕ ರೊಡನೆ ಸಂಪರ್ಕ ಎಲ್ಲವೂ ಈ ನಿಟ್ಟಿನಲ್ಲಿ ಯೋಜಿಸಬೇಕು. ಅನಿರೀಕ್ಷಿತವಾಗಿ ಅಧಿಕಾರ ಸಿಕ್ಕ ಜನಕ್ಕೆ ಕೊಂಚ ಸ್ತಿಮಿತ ತಪ್ಪಿದರೆ ಅಷ್ಟೇ ಮಟ್ಟಿಗೆ, ಆದರೆ ಬೇರೆ ಅರ್ಥದಲ್ಲಿ ಈ ಸಮಾಜದ ಸುಶಿಕ್ಷಿತರೂ, ಮಧ್ಯಮವರ್ಗದವರೂ ಕೂಡ ಸ್ತಿಮಿತ ತಪ್ಪಿದ್ದಾರೆ.




ಈಗ ಕೂಡ ಸಮಯ ಮೀರಿಲ್ಲ. ಒಂದು ನಾಡಿನ ಇತಿಹಾಸದಲ್ಲಿ ಐವತ್ತು ವರ್ಷಗಳೇನೂ ಅಷ್ಟೊಂದು ದೀರ್ಘಾವಧಿಯದಲ್ಲ. ತಪ್ಪು ಹೆಜ್ಜೆಗಳನ್ನಿಟ್ಟು ಆರಂಭಿಸಿದೆವು. ಆದರೆ ಆ ತಪ್ಪುಗಳನ್ನು ಈಗ ಕೂಡ ನಾವು ಸರಿಪಡಿಸಿಕೊಳ್ಳುವ ಅವಕಾಶವಿದೆ.

ಈ ರೀತಿಯ ನಂಬಿಕೆಯನ್ನು ನಮ್ಮಲ್ಲಿ ಪದೇಪದೇ ಹುಟ್ಟಿಸುತ್ತಿರುವುದು ಮತ್ತು ಜೀವಂತವಾಗಿ ಇಟ್ಟಿರುವುದು ನಮ್ಮ ಸಾಮಾನ್ಯ ಜನ; ಬಡವರು, ಅನಕ್ಷರಸ್ಥರು.

ಅವರ ನಂಬಿಕೆಯಿಂದ ನಾವೂ ಕಲಿಯೋಣ.

'ಯಾವ ಪಕ್ಷ ಬಂದರೂ ಒಂದೇ' ಎಂಬ ವೇದಾಂತ ಮಾತನಾಡುವವರು 'ಯಾವ ಪಕ್ಷ ಬಂದರೂ ನಾವು ಮಾತ್ರ ಹೀಗೆಯೇ' ಎಂಬ ತಮ್ಮ ಕುರಿತಾದ ಅರಿವನ್ನು ಉಳಿಸಿಕೊಳ್ಳಬೇಕು.

'ಹಿಂಸೆ' ಪೌರುಷದ ಲಕ್ಷಣವಲ್ಲ. ಜೀವಪ್ರೇಮದ ದ್ಯೋತಕವಲ್ಲ. ಸಿನಿಕತನದ ಲಕ್ಷಣ. ಹತಾಶೆಯ ಸಂಕೇತ. ರಕ್ತ ಸುರಿಸಿ ನ್ಯಾಯ ಸ್ಥಾಪಿಸುತ್ತೇನೆ ಎಂಬುದು ಮಾನವೀಯ ಕಲ್ಪನೆಯೇ ಆಗಲಾರದು.

ಸಶಸ್ತ್ರ ಹೋರಾಟ ವೀರಾಗ್ರಣಿಗಳ ದೇಶಪ್ರೇಮದ ಚಿಹ್ನೆಯಲ್ಲ. 'ದೇಶಕ್ಕಾಗಿ ಪ್ರಾಣತ್ಯಾಗ ಮಾಡಲೂ ಸಿದ್ಧನಿದ್ದೇನೆ' ಎಂಬುದೊಂದು ಅತ್ಯಂತ ಬಾಲಿಶ ರೊಮ್ಯಾಂಟಿಕ್ ಭಾವ. ದೇಶಕ್ಕಾಗಿ ಪ್ರಾಣತ್ಯಾಗ ಮಾಡುವುದು ಬಹು ಉದಾತ್ತ ನಿಲುವು ನಿಜ, ಆದರೆ ಈ ಹಿಂಸಾವಾದಿಗಳಲ್ಲಿ ಪ್ರಾಣತ್ಯಾಗ ಮಡುವುದಕ್ಕಿಂತ ಇತರರ ಪ್ರಾಣಹಾನಿ, ಆಸ್ತಿಹಾನಿ ಮಾಡುವುದರಲ್ಲಿ ಹೆಚ್ಚು ಶ್ರದ್ಧೆ ಹಾಗೂ ನಂಬಿಕೆಗಳು ಸ್ಪಷ್ಟವಾಗಿ ಕಾಣುತ್ತವೆ. ಪ್ರಜಾಪ್ರಭುತ್ವದಲ್ಲಿ ಕೋಮುವಾದ ಎಷ್ಟು ಅಪಾಯಕಾರಿಯೋ ಅಷ್ಟೇ ಅಪಾಯಕಾರಿ ಹಿಂಸಾವಾದ. ಪ್ರಜೆಗಳಿಂದ ಪರವಾನಗಿ ಪಡೆದ ಸರಕಾರ ದೇಶದ ಸುಭದ್ರತೆಗಾಗಿ ಪೊಲೀಸ್ ಮಿಲಿಟರಿಗಳಿಗೆ ಅಸ್ತ್ರಗಳನ್ನು ತಾನೇ ಒದಗಿಸಿರುತ್ತದೆ. ಹಿಂಸಾವಾದಿಗಳು, ಸಶಸ್ತ್ರ ಹೋರಾಟಗಾರರ ಅಸ್ತ್ರಗಳನ್ನು ಕೂಡಿಸಿಕೊಳ್ಳುವುದು ಕಾನೂನು ವಿರೋಧಿ ಕ್ರಿಯೆ. ಪರವಾನಗಿ ಪಡೆದ ಪೊಲೀಸ್ ಮಿಲಿಟರಿ, ಪರವಾನಗಿ ಇಲ್ಲದವರ ಮೇಲೆ ಅಸ್ತ್ರಪ್ರಯೋಗ ಮಾಡಿದರೆ ಸಾರ್ವಜನಿಕ ಸಹಾನುಭೂತಿ ಸರಕಾರದ ಪರವಾಗಿರುತ್ತದೆ. ಹಿಂಸೆ ಹಿಂಸೆಯನ್ನು ಮಾತ್ರ ಹುಟ್ಟುಹಾಕಬಹುದೇ ಹೊರತು ಶಾಂತಿ, ನ್ಯಾಯಗಳನ್ನು ಸ್ಥಾಪಿಸಲು ಸಾಧ್ಯವಿಲ್ಲ.

ಹಿಂಸೆಯಲ್ಲಿ ನೇರವಾಗಿ ಭಾಗವಹಿಸುವ ಭೂಗತ ಶಕ್ತಿಗಳು ಒಂದು ಕಡೆಯಾದರೆ ಅವರುಗಳ ಕುರಿತಾಗಿ ಸಹಾನುಭೂತಿ ತೋರುವ, ದಿನನಿತ್ಯದ ಬದುಕಿನಲ್ಲಿ ಬೇರೆಲ್ಲರಂತೆ ಬದುಕುವ ಅನೇಕರೂ ಇರುತ್ತಾರೆ. ಗುಪ್ತವಾಗಿ ಈ ಸಶಸ್ತ್ರ ಹೋರಾಟಗಾರರ ಧೋರಣೆ, ಕ್ರಿಯೆಗಳನ್ನು ಸಮರ್ಥಿಸುತ್ತಿರುತ್ತಾರೆ. ಅವರಿಗೆ ನನ್ನದೊಂದು ಸೂಚನೆ – ಪ್ರಜಾಪ್ರಭುತ್ವದಲ್ಲಿ ಸಾಧ್ಯವಾಗುವ ನಾಗರಿಕ ಹಕ್ಕುಗಳೆಲ್ಲದರ ಪ್ರಯೋಜನ ಪಡೆಯುತ್ತ – ಉದಾಹರಣೆಗೆ ಧರಣಿ, ಮೆರವಣಿಗೆ, ಪ್ರತಿಭಟನಾಸಭೆ, ಪತ್ರಿಕಾ ಹೇಳಿಕೆಗಳು – ಜೊತೆಜೊತೆಗೇ ಇಡೀ ವ್ಯವಸ್ಥೆಯನ್ನೇ ಹಿಂಸಾಮಾರ್ಗದಲ್ಲಿ ಪಲ್ಲಟಗೊಳಿಸಲು ಯತ್ನಿಸುತ್ತಿರುವ ಶಕ್ತಿಗಳಿಗೆ ನೈತಿಕ ಕುಮ್ಮಕ್ಕು ನೀಡುವುದು ನಾಗರಿಕ ಋಜುತ್ವವಲ್ಲ. ಎರಡೂ ಲೋಕಗಳ ಅತ್ಯುತ್ತಮ ಲಾಭಪಡೆಯ ಹೋಗುವುದು ತಪ್ಪು.

ಈ ಚುನಾವಣೆಗಳಲ್ಲಿ ಕೋಮುಶಕ್ತಿಗಳನ್ನಷ್ಟೇ ಅಲ್ಲ, ಜಮೀನ್ದಾರೀ ಪದ್ಧತಿಯ ರಾಜಕೀಯ ಮಾಡುತ್ತಿದ್ದ ಚಂದ್ರಬಾಬು ನಾಯುಡು, ನಗರಕೇಂದ್ರಿತ ರಾಜ್ಯಭಾರ ಮಾಡುತ್ತಿದ್ದ ಕೃಷ್ಣ ಅವರುಗಳು ಕೂಡ ಮಣ್ಣು ಮುಕ್ಕಿದ್ದಾರೆ. ನೂರು ವರ್ಷ ಸಶಸ್ತ್ರ ಹೋರಾಟ ನಡೆಸಿದರೂ ಚಂದ್ರಬಾಬು ನಾಯುಡು ಅಂಥವರನ್ನೂ, ವಾಜಪೇಯಿ ಅದ್ವಾನಿ ಅಂಥವರನ್ನೂ ಕೆಳಗಿಳಿಸಲು ಸಾಧ್ಯವಿಲ್ಲ ಎಂಬುದನ್ನು ಅರಿಯಬೇಕು.

ಎಂದೇ ನನ್ನ ದೃಷ್ಟಿಯಲ್ಲಿ ಪ್ರಜಾಪ್ರಭುತ್ವವೊಂದು ಕೇವಲ ರಾಜಕೀಯ ವ್ಯವಸ್ಥೆ ಅಲ್ಲ. ಅದೊಂದು ಧರ್ಮ. ಭಾರತದಂಥ ರಾಷ್ಟ್ರಕ್ಕೆ ಒಪ್ಪುವ ಒಂದೇ ರಾಜಕೀಯ ನೀತಿ. ಮನುಷ್ಯ ಸೃಷ್ಟಿಸಿದ ಕಲೆ, ಸಂಗೀತ, ಕಾವ್ಯ ಎಲ್ಲವೂ ಕೂಡ ಈ ಸತ್ಯಕ್ಕೆ ಪುಷ್ಟಿ ನೀಡುವ ಸಾಧನಗಳೇ.

**ಜಿ. ಕೆ. ಗೋವಿಂದರಾವ್**
೧೬೧-ಎ, ೩೬ 'ಎ' ಕ್ರಾಸ್, ಜಯನಗರ ೭ನೇ ಬ್ಲಾಕ್,
ಬೆಂಗಳೂರು-೮೨

# ಕನ್ನಡ ಏಕೆ ಉಳಿಯಬೇಕು?

**ಕನ್ನಡ ಉಳಿಯಲೇಬೇಕು – ಅಭಿಮಾನಕ್ಕಾಗಿ ಅಲ್ಲ, ಲೌಕಿಕವಾದ ಹಿತಕ್ಕಾಗಿಯೇ ಉಳಿಯಬೇಕಾಗಿದೆ. ಅದು ಉಳಿಯುವುದಿಲ್ಲವೆಂದರೆ ಕನ್ನಡ ಮಾತ್ರ ಸಾಯುವುದಿಲ್ಲ, ನಾವೇ ಸಾಯಬೇಕಾಗುತ್ತದೆ. ಅದು ಹೇಗೆ? ಮತ್ತು ಯಾಕೆ?**

**ಜಾ**ಗತೀಕರಣದ ಪ್ರಕ್ರಿಯೆಯಿಂದಾಗಿ ಜಗತ್ತಿನಲ್ಲಿ ಹತ್ತಾರು ಭಾಷೆಗಳು ನಿರ್ಮೂಲವಾಗಲಿವೆಯೆಂದೂ ಅವುಗಳಲ್ಲಿ ಕನ್ನಡವೂ ಒಂದೆಂದೂ ಹೇಳಲಾಗುತ್ತದೆ. ಇಂದಿನ ಕರ್ನಾಟಕದ ಮಕ್ಕಳ ಪಾಲಕರ ಇಂಗ್ಲಿಷ್ ಮೋಹಕ್ಕೆ ಕವಲೊಡೆದ ಇಂಗ್ಲಿಷ್ ಕಾನ್ವೆಂಟುಗಳ ಹೆಚ್ಚಳವನ್ನೋ ಅಥವಾ ಇಂಗ್ಲಿಷ್ ಕಾನ್ವೆಂಟ್‌ಗಳು ಬೀಸಿದ ಬಲೆಗೆ ಮತ್ತು ಜಾಗತೀಕರಣದ ಮೋಹದ ಬಲೆಗೆ ಬಿದ್ದ ಪಾಲಕರ ಸ್ಥಿತಿಯನ್ನೋ ಗಮನಿಸಿದಾಗ ಕನ್ನಡ ಭಾಷೆ ನಾಶವಾಗಲಿರುವ ಭಾಷೆಗಳ ಯಾದಿಯಲ್ಲಿದೆ ಎಂದರೆ ಅಲ್ಲಗಳೆಯುವುದು ಕಷ್ಟವಾಗುತ್ತಿದೆ.

ಆದರೆ ಈ ವಿಷಯದಲ್ಲಿ ಪಾಲಕರನ್ನು ಆದ್ಯಂತವಾಗಿ ತಪ್ಪುಗಾರರೆಂದೆಣಿಸುವುದು ಸರಿ ಎಂದೆನಿಸದು. ಈ ಇಂಗ್ಲಿಷ್ ಮೋಹದ ಹಿಂದೆ ಏನೂ ಕಾರಣ ಇಲ್ಲದೆ ಇರುವಷ್ಟು ಬೆಪ್ಪರು ಎಂದು ಎಲ್ಲೋ ಒಬ್ಬಿಬ್ಬರಿಗೆ ಹೇಳಬಹುದೇ ಹೊರತು ಇಷ್ಟೊಂದು ಜನರನ್ನು ಹಾಗೆ ಎಣಿಸುವುದಕ್ಕಾಗುವುದಿಲ್ಲ. ಯಾಕೆಂದರೆ ಪ್ರತಿಯೊಬ್ಬರೂ ೧. ತಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣ ಸಿಕ್ಕಬೇಕು ೨. ತಮ್ಮ ಮಕ್ಕಳಿಗೆ ಉದ್ಯೋಗ ಸಿಕ್ಕುವುದು ಇಂಗ್ಲಿಷ್ ಕಲಿತಾಗ ಮಾತ್ರ, ಇಲ್ಲಿಯ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತಾಗ ಮಾತ್ರ ಎಂದು ಗ್ರಹಿಸುತ್ತಾರೆ. ಇದು ತಪ್ಪೇ? ತಮ್ಮ ಮಕ್ಕಳ ಉತ್ಕರ್ಷವನ್ನು ಬಯಸುವುದು ಹೇಗೆ ತಪ್ಪಾಗುತ್ತದೆ? ಆದ್ದರಿಂದಲೇ ಕನ್ನಡದ ಬಗ್ಗೆ ಎಷ್ಟೇ ಆವೇಶಭರಿತ ಭಾಷಣ ಮಾಡಿದರೂ, ಅಭಿಮಾನದ ಹಾಡು ಹಾಡಿದರೂ ಜನಗಳು ಜಪ್ಪೆನ್ನುವುದಿಲ್ಲ. ಅಂದರೆ ಇಂಗ್ಲಿಷಿನ ಹಿಂದೆ ಲೌಕಿಕ ಲಾಭದ ಶಕ್ತಿ ಇರುವುದೇ ಈ ಮೋಹಕ್ಕೆ ಕಾರಣವಾಗಿರುವುದನ್ನು ಗುರುತಿಸಬಹುದಾಗಿದೆ. ಹಾಗಾದರೆ ಅವರ ಆಕಾಂಕ್ಷೆಯೆಲ್ಲ ಇಂಗ್ಲಿಷಿನಿಂದ ಪೂರೈಸುತ್ತದೆಯೇ ಎನ್ನುವುದು ಬೇರೆ. ಆದರೆ ಅದರ ಒಂದು ಸಾಧ್ಯತೆಯನ್ನು ಅಲ್ಲಗಳೆಯುವುದು ಹೇಗೆ? ಆದ್ದರಿಂದ ಈ ಲೌಕಿಕದ ಪೂರೈಕೆಯ ಸಾಧ್ಯತೆಯ ಬಗೆಗೆ ಉತ್ತರಿಸಬೇಕಾಗುತ್ತದೆ. ಈ ಪ್ರಶ್ನೆಗಳಿಗೆ ಉತ್ತರಿಸಲಾಗದಿದ್ದರೆ ಕನ್ನಡ (ಕರ್ನಾಟಕದಲ್ಲಿ ಕನ್ನಡ. ಉಳಿದ ರಾಜ್ಯದಲ್ಲಿ ಆಯಾ ಭಾಷೆ) ಸತ್ತುಹೋದರೆ ಯಾಕೆ ವ್ಯಥಿಸಬೇಕು? ಆದರೆ ಸಮಸ್ಯೆ ಇಷ್ಟು ಸುಲಭದ್ದಾಗಿಲ್ಲ. ಕನ್ನಡ

**ಡಾ|| ಆರ್. ವಿ. ಭಂಡಾರಿ**

ಉಳಿಯಲೇಬೇಕು-ಅಭಿಮಾನಕ್ಕಾಗಿ ಅಲ್ಲ, ಲೌಕಿಕವಾದ ಹಿತಕ್ಕಾಗಿಯೇ ಉಳಿಯಬೇಕಾಗಿದೆ. ಅದು ಉಳಿಯುವುದಿಲ್ಲವೆಂದರೆ ಕನ್ನಡ ಮಾತ್ರ ಸಾಯುವುದಿಲ್ಲ, ನಾವೇ ಸಾಯಬೇಕಾಗುತ್ತದೆ. ಅದು ಹೇಗೆ? ಮತ್ತು ಯಾಕೆ?

ಸ್ವಾತಂತ್ರ್ಯ ಹೋರಾಟದಲ್ಲಿ ಗಾಂಧೀಜಿ ಪ್ರವೇಶವಾಗುವ ಸಂದರ್ಭ. ಅವರು ಕೊಲಕೊತ್ತಾದಲ್ಲಿ ನಡೆಯುವ ಒಂದು ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನಕ್ಕೆ ಹೋಗುತ್ತಾರೆ. ಆಗ ಮುಖ್ಯಸ್ಥಾನದಲ್ಲಿದ್ದವರು ಮೋತಿಲಾಲ ನೆಹರು ತಲೆಮಾರಿನವರು. ಭಾಷಣಗಳು ಶುರುವಾಗುತ್ತವೆ. ಎಲ್ಲರೂ ಇಂಗ್ಲಿಷಿನಲ್ಲಿ ಮಾತಾಡುತ್ತಾರೆ. ಕೊನೆಗೆ, 'ಪಾಪ! ದಕ್ಷಿಣ ಆಫ್ರಿಕಾದಿಂದ ಬಂದಿದ್ದಾನೆ ಗಾಂಧಿ', ಎಂದು ಅವರಿಗೆ ಒಂದು ಅವಕಾಶವನ್ನು ಕೊಡಲಾಗುತ್ತದೆ. ಗಾಂಧಿ ಸಾವಕಾಶವಾಗಿ ತಮ್ಮ ಭಾಷಣವನ್ನು ಹಿಂದಿಯಲ್ಲಿ ಶುರು ಮಾಡುತ್ತಾರೆ. ಅಲ್ಲಿರುವ ಮುಖ್ಯ ನೇತಾರರೆಲ್ಲ ಸಿಡಿಮಿಡಿಗೊಳ್ಳುತ್ತಾರೆ. ಆದರೆ ಗಾಂಧೀಜಿ ಸ್ವಾತಂತ್ರ್ಯ ಹೋರಾಟದ ಅಗತ್ಯತೆಯನ್ನು ಸಾಮಾನ್ಯ ಕಾರ್ಯಕರ್ತರಿಗೂ ಮನವರಿಕೆ ಮಾಡಿಕೊಡುವುದರಲ್ಲಿ ಯಶಸ್ವಿಯಾಗುತ್ತಾರೆ. ಆಗ ಸ್ವಾತಂತ್ರ್ಯ ಹೋರಾಟಕ್ಕೆ ಮರುಹುಟ್ಟು ಬಂದಂತಾಯಿತು. ಮುಂದೆ ಅದೇ ಪರಿಪಾಠವಾಯಿತು. ಹೀಗೆ ಗಾಂಧೀಜಿ ಜನಭಾಷೆಯ ಉಪಯೋಗದ ಮುಖಾಂತರ ದೇಶದ ಅಂಚಿನ ಜನರನ್ನು ಆಂದೋಲನದಲ್ಲಿ ಸೇರ್ಪಡೆ ಮಾಡಿಕೊಳ್ಳಲು ಶಕ್ತರಾಗುತ್ತಾರೆ. ನಮ್ಮ ಜಿಲ್ಲೆಯ ಅಂಕೋಲೆ ಉಪ್ಪಿನ ಸತ್ಯಾಗ್ರಹದಲ್ಲಿ ಕರ್ನಾಟಕದ ಬಾರ್ಡೋಲಿ ಎಂದು ಹೆಸರಿನ ಶಕ್ತಿಯನ್ನು ಪಡೆದುಕೊಂಡಿದ್ದು ಗಾಂಧೀಜಿಯನ್ನು ಕನ್ನಡ ಅಥವಾ ಕೊಂಕಣಿ ಅಥವಾ ಉರ್ದುವಿನಲ್ಲಿ ಪರಿಚಯ ಮಾಡಿಕೊಟ್ಟದ್ದರಿಂದ. ಅಂದರೆ ಏನು ಹೇಳಿದಂತಾಯಿತು? ಸ್ವಾತಂತ್ರ್ಯ ಹೋರಾಟ ಜನರ ಹೋರಾಟವಾದುದು, ಅಥವಾ ಸಾಮಾನ್ಯ ಜನಸಮೂಹ ಸಮೂಹವೇ ಸ್ವಾತಂತ್ರ್ಯ ಹೋರಾಟದಂಥ ಕ್ರಾಂತಿಕಾರಕ ಕ್ರಿಯೆಗೆ ತೊಡಗಿದ್ದು, ಯುಗಾಂತವೆನ್ನುವ ರಾಜಕೀಯ ಬದಲಾವಣೆಯನ್ನು ತಂದದ್ದು ಜನಭಾಷೆಯ ಮುಖಾಂತರ. ಆದ್ದರಿಂದ ಜನಪರವಾದ ಯಾವುದೇ ಕ್ರಾಂತಿಕಾರಕವಾದ ಬದಲಾವಣೆ ಆಗಬೇಕೆಂದಿದ್ದರೆ ಅದು ಜನಭಾಷೆಯಲ್ಲೇ ಆಗಬೇಕು. ಆದ್ದರಿಂದ ನಮಗೆ ಕನ್ನಡ ಅಲೌಕಿಕ ಅಭಿಮಾನಕ್ಕಾಗಿಯೇ ಬದುಕಬೇಕಾಗಿಲ್ಲ; ಆದರೆ ಪ್ರಜಾತಂತ್ರ ನೆಲೆನಿಲ್ಲಬೇಕೆಂದರೆ ಮತ್ತು ಜನಪರವಾದ ಬದಲಾವಣೆ ಬೇಕೆಂದರೆ ಕನ್ನಡ ಬದುಕಲೇಬೇಕು. ಆದ್ದರಿಂದ ಕನ್ನಡ ಪರವಾದ ಹೋರಾಟ ಪ್ರಜಾಪ್ರಭುತ್ವದ ಉಳಿವಿನ ಹೋರಾಟದ ಉಸಿರಾಗಿದೆ. ಆದ್ದರಿಂದ ಎಲ್ಲಾ ವರ್ಗದವರಿಗೂ ಕನ್ನಡವನ್ನು ಅಂದರೆ ರಾಜ್ಯ ಭಾಷೆಯನ್ನು ಉಳಿಸಿಕೊಳ್ಳುವುದು ಮುಖ್ಯವಾಗಬೇಕು. ಈ ಹಿನ್ನೆಲೆಯಲ್ಲೆ ಇತರ ಲೌಕಿಕದ ಸಾಧ್ಯತೆಯನ್ನು ಹುಡುಕಬೇಕು.

**ಇದಕ್ಕೆ ಅಡ್ಡಿ ಯಾರು?**

ಸಂಗತಿ ಇಷ್ಟು ಗಂಭೀರವಾಗಿದ್ದರೂ ಅದನ್ನು ಯಾರು ಅಡ್ಡಿಪಡಿಸುತ್ತಾರೆ? ಮಿಸ್ಟರ್ ನೋಬಡಿ ಎಂದು ನಾವು ಹೇಳಿಬಿಡಬಹುದೇನು? ಆದರೆ ಸಂಗತಿ ಅಷ್ಟು ತಮಾಷೆಯಾದುದಲ್ಲ, ಇದಕ್ಕೆ ಅಡ್ಡಿಯಾಗಿರುವ ಮನೋಭಾವದ ಹಿಂದೆ ಇರುವುದು ವರ್ಗ ಸ್ವಭಾವ.

ಸ್ವಾತಂತ್ರ್ಯದ ಮೊದಲ ದಿನಗಳಲ್ಲಿ ಆಳುವ ವರ್ಗಕ್ಕೂ ಜನಸಾಮಾನ್ಯರಿಗೂ ಒಂದು ಸಂಬಂಧ ಸೇತುವೆ ಇತ್ತು. ಆದರೆ ಬರಬರುತ್ತ ಆಳುವವರು ಸಾಮಾನ್ಯರಿಂದ ದೂರ ದೂರವೇ ಹೋದರು. ಇಂದು ರಾಜಕೀಯವಾಗಿ ಆಳುವವರು ಶ್ರೀಮಂತರು ಹಾಗೂ ಮೇಲು ಮಧ್ಯಮ ವರ್ಗದವರಾಗಿದ್ದಾರೆ. ಇದಕ್ಕೆ ಹತ್ತಿರವಾಗಿರುವವರು ಸರಕಾರಿ ನೌಕರರು. ಅಂದರೆ ಆಫೀಸರರು ಮತ್ತಿತರರು. ಸಮಾಜದಲ್ಲಿ ಎಲ್ಲ ಜಾತಿಗಳಲ್ಲೂ ಮಧ್ಯಮ ಮತ್ತು ಮೇಲು ಮಧ್ಯಮ ವರ್ಗ, ಔದ್ಯೋಗಿಕ ವರ್ಗ ಉಂಟಾಗಿವೆ. ಆ ಸ್ಥಾನಕ್ಕಾಗಿ ಪೈಪೋಟಿ ಇದೆ. ಇದು ನಿರಾಕರಣೆಯಲ್ಲ. ಆದರೆ 'ವರ್ಗಸ್ವಭಾವ' ಎಂದರೆ ಈ ಎಲ್ಲರೂ ಒಂದು ಪಟ್ಟಿಯಲ್ಲಿ ಬರುತ್ತಾರೆ ಮತ್ತು ಒಬ್ಬರಿಗೊಬ್ಬರು ಸಹಕರಿಸುತ್ತಾರೆ. ಅವರ ಹಿತಾಸಕ್ತಿ ಹೆಚ್ಚುಕಡಿಮೆ ಒಂದೇ ಆಗಿರುತ್ತದೆ. ಈ ಎಲ್ಲದರ ಪರಿಣಾಮವೇ ಜನಸಾಮಾನ್ಯರನ್ನು ಆಡಳಿತದಿಂದ ದೂರ ಇಡುವುದು. ಜನಸಾಮಾನ್ಯರನ್ನು ದೂರ ಇಡುವುದೆಂದರೆ ಜ್ಞಾನ ಮತ್ತು ಆಡಳಿತದಲ್ಲಿ ಜನಸಾಮಾನ್ಯರನ್ನು ವಂಚಿಸುವುದು. ಹಿಂದೆ ಸಂಸ್ಕೃತ ಈ ಕೆಲಸ ಮಾಡಿತು. ಈಗ ಇಂಗ್ಲಿಷ್ ಅದೇ ಕೆಲಸ ಮಾಡುತ್ತದೆ. ಆದ್ದರಿಂದ ಕನ್ನಡ ಆಡಳಿತಭಾಷೆಯಾಗಲು, ಜ್ಞಾನದ

ಮಾಧ್ಯಮವಾಗಲು ರಾಜಕಾರಣ ಮತ್ತು ಅಧಿಕಾರಶಾಹಿ ಕೂಡಿ ತಡೆಯುತ್ತವೆ. ಏನಾದರೂ ನೆಪ ಸಿಕ್ಕುತ್ತದೆ. ನಮ್ಮ ನೌಕರಶಾಹಿಯೆಂದರೆ ನೆಪಕ್ಕಾದರೂ ರಾಜಕಾರಣಿಗಳು ಜನಪರವಾದ ಕಾರ್ಯಕ್ರಮವನ್ನು ಹಾಕಿದರೂ ಏನಾದರೂ ನೆಪ ಹುಡುಕಿ ಅದನ್ನು ತಡೆಯುವುದೇ ಆಗಿದೆ. ಎಂಥ ಕ್ರಿಯಾಶೀಲ ಕನ್ನಡ ಪ್ರಾಧಿಕಾರದ ಅಧ್ಯಕ್ಷ ಬಂದರೂ ನಮ್ಮ ಆಡಳಿತ ಕೇಂದ್ರ ಕಚೇರಿ (ಸೆಕ್ರೆಟರಿಯೇಟ್)ಯಲ್ಲಿ ಪೂರ್ತಿಯಾಗಿ ಕನ್ನಡ ಆಡಳಿತ ಭಾಷೆಯಾಗಲು ಸಾಧ್ಯವಾಗಿಲ್ಲ.

ಇದೇ ಬಗೆಯಿಂದ ಶ್ರೀಮಂತರು ಕೂಡ. ಹಿಂದೆ ನಮ್ಮ ವರ್ಣಧರ್ಮ ಕೂಡ ಮಾಡಿದ್ದು ಇದೇ ತಾನೆ? ಯಾಕೆಂದರೆ ಈ ದೇಶದ ಮುಖ್ಯ ಸ್ಥಾನವೆಲ್ಲ ಅವರಿಗೆ, ಅವರ ಮಕ್ಕಳು ಮೊಮ್ಮಕ್ಕಳಿಗೇ ಬೇಕು. ಆದ್ದರಿಂದ ಅವರೆಲ್ಲ ಕೂಡಿ ಕನ್ನಡ ಬಡವನಿಗೆ ವೋಟು ಕೊಡಲು ಮಾತ್ರ ಇದ್ದರೆ ಸಾಕು. ಆದರೆ ಪ್ರಜಾಪ್ರಭುತ್ವದ ನಿಯಮ ಬೇರೆ. ''ಜನಭಾಷೆಯ ವಿನಾ ಜನತಾ ಸ್ವರಾಜ್ಯ ಸಾಧ್ಯವೇ ಇಲ್ಲ'' ಎಂದು ಡಾ॥ ರಾಮಮನೋಹರ ಲೋಹಿಯಾ ಹೇಳಿದ ಮಾತು ಪ್ರಜಾಪ್ರಭುತ್ವದ ಕೇಂದ್ರ ತತ್ವವಾಗಿದೆ. ಜನಭಾಷೆ (ಇಲ್ಲಿ ಕನ್ನಡ) ಸತ್ತರೆ ಪ್ರಜಾಪ್ರಭುತ್ವ ಸಾಯುತ್ತದೆ. ಅನಂತರ ಮುಸ್ಲೋನಿಗಳು ತಲೆಯೆತ್ತುತ್ತಾರೆ. ಮತ್ತು 'ಜಾಗತೀಕರಣ' ಅಮೆರಿಕದ ಸಾಮ್ರಾಜ್ಯಶಾಹಿ ಪ್ರಕ್ರಿಯೆಯಾಗಿದೆ. ಹಿಂದೆ ಇಂಗ್ಲಿಷ್ ವಸಾಹತು ಶಾಹಿಯಲ್ಲೇ ಅವರಿಗೆ ಆಡಳಿತ ನಡೆಸಲು, ಇಲ್ಲಿಯ ಸ್ವರೂಪ ಅರಿಯಲಾದರೂ ದೇಶೀಭಾಷೆ ಬೇಕಿತ್ತು. ಆದರೆ ಜಾಗತಿಕ ಸಾಮ್ರಾಜ್ಯಶಾಹಿ ಸ್ಥಾಪಿಸಬಯಸುವ ಅಮೆರಿಕಕ್ಕೆ ದೇಶೀಭಾಷೆಯನ್ನು ಕೊಲ್ಲಬೇಕಾಗಿದೆ. ಇದಕ್ಕೆ ನಮ್ಮ ಆಡಳಿತವರ್ಗ ಯೆಸ್ ಎನ್ನುತ್ತದೆ.

ಹಾಗಾದರೆ ಇಂಗ್ಲಿಷ್ ಕಲಿಯದಿರುವುದೇ ಕನ್ನಡದ ಉಳಿವಿನ ಬಗೆಯೇ ಎಂದು ಕೇಳುವ ಕುಚೋದ್ಯವೂ ಈ ವರ್ಗದಿಂದಲೇ ಕೇಳಿಬರುತ್ತದೆ. ಆದ್ದರಿಂದಲೇ ಅವರು ಕನ್ನಡ ಮಾಧ್ಯಮ ಮತ್ತು ಇಂಗ್ಲಿಷ್ ಮಾಧ್ಯಮವನ್ನು ಒಂದು ಮಾಡುತ್ತಾರೆ. ಜಾಣ ಅಜ್ಞಾನ ಇದು. ಆದರೆ ಇಂಗ್ಲಿಷ್ ಕಲಿಯುವ ಬಗ್ಗೆ ತಕರಾರು ಇಲ್ಲ. ಇಂಗ್ಲಿಷ್ ಒಂದು ಜ್ಞಾನದ ಭಾಷೆ. ಅಲ್ಲದೆ ತ್ರಿಭಾಷಾ ಸೂತ್ರವನ್ನು ನಾವು ಸ್ವೀಕರಿಸಿದ್ದೇವೆ. ಅದು ಅಗತ್ಯ ಮತ್ತು ಸ್ವಾಗತಾರ್ಹ. ಅಂದರೆ ಇಂಗ್ಲಿಷನ್ನು ಒಂದು ಭಾಷೆಯಾಗಿ ಹತ್ತನೆಯ ತರಗತಿಯ ತನಕ ಅಧ್ಯಯನ ಮಾಡಿದಾಗ ಮುಂದಿನ ವಿದ್ಯಾಭ್ಯಾಸ ಇಂಗ್ಲಿಷ್ ಮಾಧ್ಯಮದಲ್ಲೇ ಓದಲು ಕಷ್ಟವೇನೂ ಆಗುವುದಿಲ್ಲ. ಆದರೆ ನಮ್ಮ ಆಡಳಿತ ಮತ್ತು ರಾಜಕೀಯ ಶಕ್ತಿ ಅದನ್ನು ಸುಳ್ಳು ಮಾಡಿತು.

ಐದನೆಯ ತರಗತಿಯಿಂದ ಇಂಗ್ಲಿಷ್ ಒಂದು ಭಾಷೆಯಾಗಿ ಪಠ್ಯಕ್ರಮದಲ್ಲೇನೋ ಸೇರಿತು. ಆದರೆ ಕನ್ನಡ ಶಾಲೆಗಳಲ್ಲಿ ಅದನ್ನು ಸರಿಯಾಗಿ ಕಲಿಸುವ ತಯಾರಿಯನ್ನು ನಮ್ಮ ಸರಕಾರ ಮಾಡಲಿಲ್ಲ. ಇದು ಗ್ರಾಮೀಣ ಪ್ರದೇಶದ ಬಡವರಿಗೆ 'ನೋಡಿಯಪ್ಪಾ ನಿಮಗೂ ಇಂಗ್ಲಿಷ್ ಕೊಟ್ಟಿದ್ದೇವೆ. ಮೇಲೆ ಬನ್ನಿ' ಎಂದಿತೇ ಹೊರತು ಅದನ್ನು ರಾಜಕೀಯ ಇಚ್ಛೆಯಿಂದ ಜಾರಿಗೆ ತರಲಿಲ್ಲ. ಯಾಕೆಂದರೆ ಅವರ ವರ್ಗದ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮ ಶಾಲೆಗಳು ಇದ್ದೇ ಇದ್ದವು. ಈ ಪ್ರಕ್ರಿಯೆಯಿಂದ ಪ್ರಾಥಮಿಕ ಶಾಲೆಯಿಂದ ಇಂಗ್ಲಿಷ್ ಕಲಿತರೂ ಹತ್ತನೆಯ ತರಗತಿಯ ಮಕ್ಕಳಿಗೆ ಒಂದೆರಡು ವಾಕ್ಯಗಳನ್ನು ಇಂಗ್ಲಿಷ್‌ನಲ್ಲಿ ಬರೆಯಲು ಸಾಧ್ಯವಿಲ್ಲ ದಂತಾಯಿತು. ಆದ್ದರಿಂದ ಪಾಲಕರು ಅಂದುಕೊಂಡದ್ದು ಇಂಗ್ಲಿಷ್ ಮಾಧ್ಯಮ ಶಾಲೆಯಲ್ಲಿ ಓದಿದರೆ ಮಾತ್ರ ನಮ್ಮ ಮಕ್ಕಳ ಉದ್ಧಾರ ಸಾಧ್ಯ. ಜಾಗತೀಕರಣದ ಸಂದರ್ಭದಲ್ಲಿ ಈ ನಂಬಿಕೆ ಹಳ್ಳಿಹಳ್ಳಿಗೂ ಹಬ್ಬಿತು.

ಈಗ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಲಹೆಯನ್ನು ಸರಕಾರ ಒಪ್ಪಿಕೊಂಡಿದೆ. ಅಂದರೆ ಬರುವ ವರ್ಷದಿಂದ (ಈಗ ಹಿಂತೆಗೆದುಕೊಂಡು ಆಗಿದೆ) ಪ್ರಾಥಮಿಕ ಒಂದನೆಯ ತರಗತಿಯಿಂದಲೇ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸಲಾಗುತ್ತದೆಂದು. ನಿಜವಾಗಿ ಇದು ಮೂರನೆಯ ತರಗತಿಯಿಂದ ಎಂದಾದರೂ ಆಗಬೇಕಿತ್ತು. ಯಾಕೆಂದರೆ ಗ್ರಾಮೀಣ ಪ್ರದೇಶದಲ್ಲಿ ಒಂದು ಮತ್ತು ಎರಡನೆಯ ತರಗತಿಯಲ್ಲಿ ಕೆಳವರ್ಗ-ಜಾತಿಗಳ ಮಕ್ಕಳು ಹೆಚ್ಚು ಗೈರು ಇರುತ್ತಾರೆ. ಇಂಗ್ಲಿಷ್ ಭಾಷೆಯ ಕಲಿಕೆ ಸತತವಾದ ಹಾಜರಿಯನ್ನು ಬಯಸುತ್ತದೆ. ಅದು ಹಾಗಿರಲಿ, ಒಂದನೆಯ ತರಗತಿಯಿಂದಲೇ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸುವುದನ್ನು ನಾವು ಸ್ವಾಗತಿಸುವ. ಆದರೆ ಅದಕ್ಕೆ ಸರಕಾರ ಯಾವ ತಯಾರಿ ಮಾಡಿದೆ? ಏನೂ ಇಲ್ಲ, ದಿಢೀರನೇ ಜಾರಿಗೊಳಿಸಿ ಮತ್ತೆ ಅದನ್ನು ಅಯಶಸ್ವಿ ಗೊಳಿಸುವುದು ಇದರ ಹಿಂದಿರುವ ಹುನ್ನಾರು. ಯಾಕೆಂದರೆ ಒಂದನೆಯ ವರ್ಗದಿಂದಲೇ ಒಂದು ಭಾಷೆಯನ್ನಾಗಿ ಇಂಗ್ಲಿಷನ್ನು ವೈಜ್ಞಾನಿಕವಾಗಿ, ಪರಿಣಾಮ ಕಾರಿಯಾಗಿ ಕಲಿಸಿದರೆ ಕ್ರಮೇಣ ನೂರಕ್ಕೆ ತೊಂಬತ್ತು ಇಂಗ್ಲಿಷ್ ಮಾಧ್ಯಮ ಶಾಲೆಗಳು ಮುಚ್ಚಿಹೋಗುತ್ತವೆ. ಆದ್ದರಿಂದ ಕಾನ್ವೆಂಟ್ ಲಾಬಿ ರಾಜಕೀಯದ ಹಿಂದೆ ಇದ್ದು, ಅದನ್ನು ಆಗಗೊಡುವುದಿಲ್ಲ. ಹಾಗೆಯೇ ಈ ಲಾಬಿಯ ಪ್ರಭಾವದಿಂದ ಇನ್ನು ಮುಂದಿನ ವರ್ಷಗಳಲ್ಲಿ ಹತ್ತನೆಯ ತರಗತಿಯ ತನಕ ಕನ್ನಡ ಮಾಧ್ಯಮದಲ್ಲಿ ಓದಿದವರಿಗೆ ವೃತ್ತಿ ಶಿಕ್ಷಣದಲ್ಲೂ ಸರಕಾರಿ ನೌಕರಿಯಲ್ಲ. ಬರಗೂರು ವರದಿಯ ಸ್ವೀಕೃತಿಯಿಂದಾಗಿ ಸಿಕ್ಕುವ ೫% ಒಳ ಮೀಸಲಾತಿ ಕೂಡ ತೆಗೆದುಹಾಕಿದರೆ ಆಶ್ಚರ್ಯವೇನೂ ಇಲ್ಲ.

ಕನ್ನಡ ಬದುಕಿಸುವ, ಅರ್ಥಾತ್ ಪ್ರಜಾಪ್ರಭುತ್ವವನ್ನು ಬದುಕಿಸುವ ಆಸಕ್ತಿ ನಮ್ಮ ರಾಜಕಾರಣಕ್ಕೆ ಇರುವುದಾದರೆ ಒಳ ಮೀಸಲಾತಿಯಿಂದ ಲಾಭ ಪಡೆದವರ ಪಟ್ಟಿಯನ್ನು ಪ್ರತಿವರ್ಷ ಬಿಡುಗಡೆ ಮಾಡಬೇಕು. ಇದರಿಂದ ಕನ್ನಡ ಮಾಧ್ಯಮದಲ್ಲಿ ಓದಿದವರಿಗೂ ಸಿಕ್ಕುವ ಲೌಕಿಕ (ಆರ್ಥಿಕ) ಸೌಲಭ್ಯದ ಅರಿವು ಪಾಲಕರಿಗೆ ಮನವರಿಕೆ ಯಾಗುತ್ತದೆ. ಹಾಗೆಯೇ ಸಂಪೂರ್ಣವಾಗಿ ಸರಕಾರಿ ಉಚ್ಚ ಕಾರ್ಯಾಲಯದ, ಕೆಳಹಂತದ ನ್ಯಾಯಾಲಯದ ವ್ಯವಹಾರಗಳಲ್ಲಿ ಕನ್ನಡದ ಬಳಕೆಯಾಗಬೇಕು. ಮೂರನೆಯದಾಗಿ ಎಲ್ಲ ವೃತ್ತಿ ಪರೀಕ್ಷೆಗೂ ಕನ್ನಡ ಪಠ್ಯ ಕಡ್ಡಾಯವಾಗಿದ್ದು ಕನಿಷ್ಠ ಅಂಕ (ಕೇವಲ ಹತ್ತೇ ಆದರೂ) ಪರೀಕ್ಷೆಯಲ್ಲಿ ಪಡೆಯುವುದು ಕಡ್ಡಾಯವಾಗಬೇಕು. ನಾಲ್ಕನೆಯದಾಗಿ ಒಂದು ಭಾಷೆಯಾಗಿ ಇಂಗ್ಲಿಷನ್ನು ಕಲಿಸುವ ಮುನ್ನ ಶಿಕ್ಷಕರ ತರಬೇತಿ ಸಂಸ್ಥೆ (ಡಾಯಟ್) ಸುಸಂಬದ್ಧವಾಗಿ ಪ್ರಾಥಮಿಕ ಶಾಲೆಯ ಶಿಕ್ಷಕರನ್ನು ತರಬೇತುಗೊಳಿಸಬೇಕು. ಇದು ಅಸಾಧ್ಯವಲ್ಲ. ಹೀಗೆ ಮಾಡಿದರೆ ಇಂಗ್ಲಿಷ್ ಇಂಜನಿಯರಿಂಗ್, ಮೆಡಿಕಲ್ ಇತ್ಯಾದಿ ಕಲಿಯುವವರಿಗೆ ಮಾತ್ರವಲ್ಲ ಸಾಹಿತ್ಯಿಕ- ಜ್ಞಾನದ ಭಾಷೆಯಾಗಿ ಕೂಡ ಫಲಕಾರಿಯಾಗುತ್ತದೆ.

ಆದರೆ ಎಂಟನೆಯ ತರಗತಿಯ ತನಕ ಮಾತ್ರ ಶಿಕ್ಷಣ ತನ್ನ ಹೊಣೆ, ಮುಂದಿನ ಶಿಕ್ಷಣ ತನಗೆ ಸಂಬಂಧವಿಲ್ಲ (ದುಡ್ಡಿದ್ದವರು ಮಾತ್ರ ಕಲಿಯಲಿ) ಎಂದು ಕೈತೊಳೆದುಕೊಳ್ಳುವ ಸರಕಾರ ಈ ಎಲ್ಲ ಸಂಗತಿಗಳನ್ನು ನೆರವೇರಿಸುತ್ತದೆಯೇ? ಇದು ಕೇವಲ ಕನ್ನಡ ಸಂಸ್ಕೃತಿ ಮತ್ತು ಅಭಿಮಾನದ ಪ್ರಶ್ನೆಯಾಗಿರದೆ ಪ್ರಜಾಪ್ರಭುತ್ವದ ಅಳಿವು ಉಳಿವಿನ ಪ್ರಶ್ನೆಯಾಗಿದೆ. ಆದ್ದರಿಂದ ಇದು ನಮ್ಮ ಸಂದರ್ಭದಲ್ಲಿ ಮುಖ್ಯವಾದ ಪ್ರಶ್ನೆಯಾಗಬೇಕು.

ಡಾ॥ ಆರ್. ವಿ. ಭಂಡಾರಿ
ಕೆರೆಕೋಣ, ಅಂಚೆ : ಅರೆಅಂಗಡಿ
ಹೊನ್ನಾವರ - ೫೮೧ ೪೩೦

## ವರ್ತಮಾನ



ಸು[illegible] ನಿಸ್ತ್ವ, ಧೂಳಿನ ದಾಳಿ, ಕತ್ತಲೆಯ
ಕಾಡಿಗೆ ಕಾಂಡ ; ಕಣ್ಣ ಕಟ್ಟಿ ಕಾಡಿಗೆ ಬಿಟ್ಟ
ಪಾಡು ; ಬಾನಾಡಿ ಹಾಡು ನಾಪತ್ತೆ ; ನೆತ್ತರ ಜಾಡು
ಸೊನ್ನೆಗೆ ; ನೆನ್ನೆ ಮೊನ್ನೆ ಕಟ್ಟಿದ ಮನೆಗೆ ಆಗಲೇ ಆಪತ್ತು ;
ಅಕ್ಷರಗಳೊದ್ದಾಡುತಿವೆ ಬಿದ್ದು, ರೆಕ್ಕೆ ಪುಕ್ಕ ಕತ್ತರಿಸಿ !
ಎಲ್ಲಿ ನಕ್ಷತ್ರಗಾನ ? ಬರಿಯ ರೋದನ ; ಸೇತು
ತುಂಡರಿಸಿ, ಕಮರಿ ಕಂದರಗಳಾಕಳಿಕೆ ; ಕೊಲ್ಲುತಿದೆ
ಬೆಳಕೆ : ಕೃತ, ವಿಕೃತ ; ದೇಶೋ ವಿಶಾಲ ಅಮೃತ ಪ್ರಾಂತ
ಪಾಷಾಣವಾದ ಪರಿ ! ವಿಷಾಣ, ಪುಚ್ಛಗಳಿದ್ದೂ
ಗೋಚರಿಸದಿವೆ : ಕಾಮರೂಪಿಗಳ ಕಾಷಾಯ
ಧಾರಣೆಗೆ ಶರಣು ಶರಣಾರ್ಥಿ ! ಗುಡಿಯಲಿ ಮೂರ್ತಿ
ಪ್ರಾರ್ಥಿಸುತ್ತಿದೆ ಬಿಡುಗಡೆಗೆ, ಸುಯ್ದು ಹಗಲೂ ರಾತ್ರಿ !

ಓ.ಪಿ.ಕೆ., ಮೈಸೂರು - ೧೨

**ಯಾವ** ಕಾರಣಕ್ಕೋ ತಿಳಿಯದು, ಅಂದು ಊರಲ್ಲಿ ನಿಷೇಧಾಜ್ಞೆ ಜಾರಿ ಮಾಡಲಾಗಿತ್ತು. ಅದೃಷ್ಟಕ್ಕೆ ಬೆಳಿಗ್ಗೆಯಿಂದಲೂ, ಸುಮಾರು ದಿನಗಳಿಂದ ಬರೆಯ ಬೇಕೆಂದಿದ್ದ ಕಥೆಯ ಬಗ್ಗೆ ಆಲೋಚಿಸುತ್ತಿದ್ದೆ. ಬರೆದು ಬರೆದು ಸಾಕಾಗಿ ಎಲ್ಲಾದರೂ ಅಡ್ಡಾಡಲು ಹವಣಿಸುತ್ತಿರುವಾಗಲೇ ಪೊಲೀಸ್ ಇಲಾಖೆಯವರು ಧ್ವನಿವರ್ಧಕದ ಮೂಲಕ ನಿಷೇಧಾಜ್ಞೆ ಜಾರಿ ಮಾಡಲಾಗಿರುವುದರ ಬಗ್ಗೆ ಮತ್ತು ಅದನ್ನು ಉಲ್ಲಂಘಿಸಿದರೆ ಎದುರಿಸಬೇಕಾಗಿರುವ ಪರಿಣಾಮದ ಬಗ್ಗೆ ಎಚ್ಚರಿಸಲಾಗುತ್ತಿರುವುದನ್ನು ಗಮನಿಸಿ ಹೊರಗೆ ಕಾಲಿಡಲೇಬಾರದು, ಇಡೀ ರಾತ್ರಿಯಾದರೂ ಪರವಾಗಿಲ್ಲ ಕಥೆ ಬರೆದು ಮುಗಿಸಲೇಬೇಕೆಂದು ನಿಶ್ಚಯಿಸಿಕೊಂಡೆ. ರಾತ್ರಿ ಹನ್ನೊಂದರ ಸಮಯ; ಅರ್ಧ ಕಥೆ ಬರೆದು ಮುಗಿಸಿರಬೇಕು. ಇಲ್ಲೇ ಹತ್ತಿರದಲ್ಲಿ ಯಾವುದೋ ನಾಟಕ ನಡೆಯುತ್ತಿದೆ ಎನಿಸಿತು – ಸಂಭಾಷಣೆ, ಹಿನ್ನೆಲೆ ಸಂಗೀತ ಅಲೆ ಅಲೆಯಾಗಿ ಬರುತ್ತಿದ್ದವು.

ಇಂಥ ಹೊತ್ತಲ್ಲದ ಹೊತ್ತಿನಲ್ಲಿ ಅದೂ ನಿಷೇಧಾಜ್ಞೆ ಜಾರಿಯಲ್ಲಿರುವಾಗ ನಿಜವಾಗಿಯೂ ನಾಟಕ ನಡೆಯುತ್ತಿದೆಯೋ ಅಥವಾ ಭ್ರಮೆಯೋ ಎಂಬ ಅನುಮಾನ ಉಂಟಾಯಿತು. ಇಲ್ಲ, ನಿಜವಾಗಿಯೂ ನಾಟಕ ನಡೆಯುತ್ತಿದೆ ಎಂದು ಖಾತ್ರಿ ಆಯಿತು. ಬರೆಯುವುದನ್ನು ನಿಲ್ಲಿಸಿ ಬಾಗಿಲಿಗೆ ಬೀಗ ಜಡಿದು ಹೊರಬಂದೆ – ದೀಪಗಳಿಲ್ಲದ ಬೀದಿಗಳಲ್ಲಿ ಕತ್ತಲೆ ಕವಿದಿತ್ತು – ಬೆಳಕಿದ್ದಿದ್ದರೆ ಪೊಲೀಸರ ಕೈಗೆ ಸಿಗುವ ಸಂಭವ ಬೇರೆ. ಕತ್ತಲೆಯಲ್ಲೇ ನಡೆದೆ. ಸ್ವಲ್ಪವೇ ದೂರದಲ್ಲಿ ಯಾರೋ ಇಬ್ಬರು ಪರಸ್ಪರ ಮಾತಾಡಿಕೊಳ್ಳುತ್ತಿದ್ದರು.

'ಕುರಕ್ಷೇತ್ರ ನಾಟಕವಂತೆ !'

'ಪಾರಂಭವಾಗಿಹೋಗಿದೆಯೆ ?'

'ತುಂಬಾನೇ ಹೊತ್ತಾಗಿರಬೇಕು, ಪ್ರಾರಂಭವಾಗಿ.'

ನನ್ನಂತೆಯೇ ಅವರೂ ಸಹ ನಾಟಕ ನೋಡಲು ಹೊರಟಿರಬೇಕು. 'ನಾಟಕ ನಡೆಯುತ್ತಿರುವುದು ಎಲ್ಲಿ? ಯಾವ ದಿಕ್ಕಿನಲ್ಲಿ?' – ಎಂದು ಪ್ರಶ್ನಿಸಿದೆ. ಅವರು ಉತ್ತರಿಸಲಿಲ್ಲ.

ಕತ್ತಲೆಯಲ್ಲಿ ಒಂದೆಡೆ ನಿಂತುಕೊಂಡೆ. ತೇಲಿ ಬರುತ್ತಿರುವ ಸಂಭಾಷಣೆ ಸಂಗೀತದ ದಿಕ್ಕಿನ ಕಡೆ ಗಮನ ಹರಿಸಿದರೆ ಎಲ್ಲಿಂದ ಬರುತ್ತಿತ್ತೆಂದು ಪತ್ತೆ-ಹಚ್ಚಲು ಸಾಧ್ಯವಾಗಲಿಲ್ಲ.

ದಾರಿ ತಪ್ಪಿಸಿಕೊಂಡು ನಿಂತುಕೊಂಡೆ.

ನಾಟಕದ ಸಂಭಾಷಣೆ ಸ್ಪಷ್ಟವಾಗಿ ಕೇಳಿ ಬರುತ್ತಿತ್ತು. – 'ಎಲ್ಲರೂ ದಾರಿ ತಪ್ಪಿದ್ದಾರೆ. ಶ್ರೀ ಕೃಷ್ಣ ಪರಮಾತ್ಮ ಬಂದರೆ ಒಳ್ಳೆಯದು. ಅವನು ಎಲ್ಲರಿಗೂ ಸರಿಯಾದ ನೀತಿ ಹೇಳುತ್ತಾನೆ.'

'ಅವನು ಈಗಲೇ ಬರುವುದಿಲ್ಲ. ಇನ್ನೂ ಸಮಯ ಬೇಕು.'

'ಹಾಗಿದ್ದರೆ ಅಲ್ಲಿಯವರೆಗೆ ಯುದ್ಧ ಮಾಡುತ್ತಲೇ ಇರಬೇಕೇನು ?'

'ಬದುಕಿ ಉಳಿದರೆ ತಾನೇ ಯುದ್ಧ ಮಾಡುವುದು !'

'ಎಲ್ಲರೂ ಮಾರಕಾಸ್ತ್ರಗಳನ್ನು ಹೊಂದಿದ್ದಾರೆ. ಕೇವಲ ಒಂದೇ ದಿನದಲ್ಲಿ ಇಡೀ ಪ್ರಪಂಚವನ್ನೇ ನಾಶ ಮಾಡಲು ಸಾಧ್ಯ !'

'ಯುದ್ಧ ಮಾಡುತ್ತಿರುವುದು ರಾಜ್ಯಕ್ಕಾಗಿ ಅಲ್ಲವೇನು ?'

'ಅಲ್ಲ ಸಾವುಗಳಿಗಾಗಿ.'

'ಇಂಥ ಯುದ್ಧ ಬೇಕಿಲ್ಲ'

'ಆದರೆ ನಮ್ಮ ಮಾತು ಕೇಳುವವರು ಯಾರು ?'

ಸಂಭಾಷಣೆ ನನ್ನ ಕುತೂಹಲವನ್ನು ಕೆರಳಿಸಿತು. ನಾಟಕ ನೋಡಲೇಬೇಕೆಂದು ಮನಸ್ಸು ಹಂಬಲಿಸಿತು. ಒಂದು ವೇಳೆ ಅಲ್ಲಿಗೆ ತಲುಪುವ ಹೊತ್ತಿಗೆ ನಾಟಕ ಮುಗಿದು ಗಂಟುಮೂಟೆ ಕಟ್ಟುತ್ತಿದ್ದರೆ ? ಹೇಗೂ ಸರಿಯೆ, ಸುಮ್ಮನೆ ಯೋಚಿಸುತ್ತ ನಿಂತುಕೊಳ್ಳುವುದಕ್ಕಿಂತ

**ಅದೀಬ್ ಅಖ್ತರ್**



ಬೇಗ ಹೆಜ್ಜೆಯಿಟ್ಟರೆ ವಾಸಿ ಎಂದು ಮುನ್ನಡೆದೆ. ಆದರೆ ಒಂದೆರಡು ಹೆಜ್ಜೆ ಹಾಕಿದ ನಂತರ ನಿಂತುಕೊಂಡೆ – ನಾಟಕ ಎಲ್ಲಿ ನಡೆಯುತ್ತಿದೆಯೆಂದು ತಿಳಿಯದಿರುವಾಗ ಹೋಗುವುದಾದರೂ ಯಾವ ದಿಕ್ಕಿನಲ್ಲಿ? ನಲವತ್ತು ವರ್ಷದಿಂದ ಸುಮ್ಮನೆ ಅಲೆಯುತ್ತಿದ್ದೇನೆ – ಅಷ್ಟು ಬೇಗ ನಲವತ್ತು ವರ್ಷಗಳು ಕಳೆದುಹೋದವೇನು ? ಮೊನ್ನೆ ಮೊನ್ನೆ ಇಲ್ಲಿಗೆ ಬಂದೆ ಎನಿಸುತ್ತೆ!

'ಯುದ್ಧದಲ್ಲಿ ಗೆದ್ದು ಸಿಂಹಾಸನದ ಮೇಲೆ ಕೂರುವವನು ಒಂದು ವೇಳೆ ಯುದ್ಧ ಭೂಮಿಗೆ ಹೋಗಿ ನೋಡಿದರೆ ಅವನಿಗೆ ತಿಳಿಯುತ್ತೆ, ಸಿಂಹಾಸನದ ಮೇಲೆ ಕುಳಿತುಕೊಳ್ಳುವ ತನ್ನ ಆಸೆಯಿಂದಾಗಿ ಎಷ್ಟೊಂದು ಮಂದಿ ಬಲಿಯಾಗಿದ್ದಾರೆ ಎಂದು. ಆದರೆ ಅವನು ಮರೆತು ಸಹ ಯುದ್ಧ ಭೂಮಿಗೆ ಹೋಗುವುದಿಲ್ಲ.'

'ಅವನಿಗೆ ಅವನ ಸಿಂಹಾಸನವೇ ಹೆಚ್ಚಲ್ಲವೇನು ?'

ನನಗೆ ನಾಟಕಗಳೆಂದರೆ ಪಂಚಪ್ರಾಣ. ಮೊದಲಿಂದಲೂ ನಮ್ಮೂರಲ್ಲದೆ ಅಕ್ಕಪಕ್ಕದ ಹಳ್ಳಿಗಳಲ್ಲಿ ನಡೆಯುವ ನಾಟಕಗಳಿಗೆ ತಪ್ಪದೆ ಹೋಗುತ್ತೇನೆ. ಎಲ್ಲ ಕಡೆಯೂ ನಾಟಕ ನಡೆಯುವುದಕ್ಕೆ ಮುನ್ನ ಪ್ರಚಾರ ಮಾಡುತ್ತಾರೆ. ಆದರೆ ಈ ನಾಟಕದ ಬಗ್ಗೆ ಪ್ರಚಾರ ಯಾಕೆ ಮಾಡಿಲ್ಲ– ಈ ಪ್ರಶ್ನೆ ನನ್ನ ಮನಸ್ಸನ್ನು ಕಾಡಿತು.

ಯಾವ ನಾಟಕವನ್ನೂ ನೋಡಲು ತಪ್ಪಿಸಿಕೊಳ್ಳ ಬಾರದೆಂದು ಇಷ್ಟೊಂದು ಮುಂಜಾಗ್ರತೆ ವಹಿಸಿದರೂ ಅವತ್ತಿನ ನಾಟಕ ಏಕೋ ತಪ್ಪಿಹೋಗುತ್ತಿದೆಯೆಂದು ಯೋಚಿಸುತ್ತಿರುವಾಗಲೇ ಹೊಸದೊಂದು ವಿಚಾರ ಹೊಳೆಯಿತು. ನಿಷೇಧಾಜ್ಞೆ ಜಾರಿಯಲ್ಲಿರುವಂಥ ಸಮಯದಲ್ಲಿ ನಾಟಕ ನೋಡಲು ಜನರು ಸೇರಿದ್ದಾರೆಯೋ ಅಥವಾ ಅವರವರೇ ನಾಟಕ ಆಡುತ್ತಿದ್ದಾರೊ ? ಏನಾದರೂ ಸರಿಯೆ, ಮನೆಯಿಂದ ಬೀದಿಗಂತೂ ಇಳಿದಾಗಿದೆ, ನಾಟಕ ನೋಡಲೇಬೇಕು ಎಂದು ತೀರ್ಮಾನಿಸಿ ಹೆಜ್ಜೆಹಾಕಿದೆ. ಸ್ವಲ್ಪ ದೂರದಲ್ಲಿ ಒಂದು ವೇದಿಕೆ ಕಂಡುಬಂತು. ಆದರ ಸಮೀಪ ಹೋದೆ. ಅದು ನಾಟಕದ ವೇದಿಕೆಯಾಗಿರಲಿಲ್ಲ. ಜನರನ್ನು ಸಾಲಾಗಿ ನಿಲ್ಲಿಸಿ ಒಬ್ಬೊಬ್ಬರಾಗಿ ಎಲ್ಲರ ತುಟಿಗಳನ್ನು ಹೊಲಿಯು ತ್ತಿದ್ದರು, ಅವರು ಯಾವತ್ತೂ ಬಾಯಿ ತೆರೆಯದಂತೆ. ತುಟಿಗಳನ್ನು ಹೊಲಿಸಿಕೊಳ್ಳಲು ಎಲ್ಲರೂ ಕಾತುರರಾಗಿರು ವುದನ್ನು ಗಮನಿಸಿ ಅಲ್ಲಿಂದ ಮುನ್ನೆಡೆಯತ್ತ ಹಾಗೇ ನಾಟಕ ಎಲ್ಲಿ ನಡೆಯುತ್ತಿದೆ ಎಂದು ಅವರನ್ನು ಕೇಳ ಬಹುದಿತ್ತಲ್ಲ, ಎನಿಸಿತು. ಬಾಯಿಯನ್ನೇ ತೆರೆಯ ಬಾರದೆಂದು ನಿಶ್ಚಯಿಸಿಕೊಂಡಿರುವವರ ಹತ್ತಿರ ಎಂಥ ಮಾತು ಎಂದು ಯೋಚಿಸಿ ಅವರೊಂದಿಗೆ ಮಾತಾಡದಿದ್ದದ್ದೆ ಒಳ್ಳೆಯದಾಯಿತು ಎನಿಸಿತು.

ಹೀಗೇ ಮುಂದೆ ಹೆಜ್ಜೆ ಹಾಕಿದೆ. ಮರಳುಗಾಡಿನಲ್ಲಿ ನಡೆಯುತ್ತಿರುವಂತೆ ಭಾಸವಾಯಿತು. ಸ್ವಲ್ಪವೇ ಅಂತರದಲ್ಲಿ ಮಕ್ಕಳು ಕಿರುಚಿಕೊಳ್ಳುತ್ತಿದ್ದರು.

ಮಕ್ಕಳು ಏಕೆ ಈ ರೀತಿ ಕಿರುಚಿಕೊಳ್ಳುತ್ತಿದ್ದಾರೆ ? ಎಂದು ಸುತ್ತ ದೃಷ್ಟಿ ಹರಿಸಿದೆ. ಸ್ವಲ್ಪ ದೂರದಲ್ಲಿ ಓಡುತ್ತಿದ್ದ ಒಂಟೆಗಳು ಕಂಡವು. ಅವುಗಳ ಹಿಂದೆ ಮಕ್ಕಳನ್ನು ಕಟ್ಟಿ ಹಾಕಲಾಗಿತ್ತು. ಒಂಟೆಗಳು ಓಡುತ್ತಿದ್ದಂತೆ ಮಕ್ಕಳು ಕಿರುಚಿಕೊಳ್ಳುತ್ತಿದ್ದವು. ಅವರ ಕಿರುಚಾಟದಿಂದ ದೊಡ್ಡವರು ಮನರಂಜನೆ ಪಡೆಯುತ್ತಿದ್ದುದನ್ನು ಕಂಡು ಇವರಿಗೆ ಏನಾದರೂ ಬುದ್ಧಿಮಾತು ಹೇಳಬೇಕೆಂದುಕೊಂಡೆ. ಆದರೆ ಬಾಯಿ ತೆರೆಯಲು ಸಾಧ್ಯವಾಗಲಿಲ್ಲ. ತುಟಿಗಳನ್ನು ಒಂದಕ್ಕೊಂದು ಸೇರಿಸಿ ಹೊಲೆದು ಆಗಿತ್ತು – ಯಾರು ಹೊಲೆದದ್ದು? ಅಥವಾ ನಾನೇ ಹೊಲಿಸಿಕೊಂಡೆನೆ ಎಲ್ಲರಂತೆ ? ಎಂಥ ಅನಾಹುತವಾಗಿ ಹೋಯಿತಲ್ಲ ? ಸುಮ್ಮನೆ ಓಡಿದೆ...

ಒಂದೆಡೆ ಹತ್ತಾರು ಮಂದಿ, ಉರಿಯುತ್ತಿರುವ ಪಂಜುಗಳಿಂದ ಹಕ್ಕಿಗಳ ಗೂಡುಗಳನ್ನು ಸುಡುವುದರಲ್ಲಿ ಮಗ್ನರಾಗಿದ್ದರು – ಅವರಿಗೂ ಸಹ ಏನು ಹೇಳಲೂ ಸಾಧ್ಯವಾಗದಿದ್ದಕ್ಕೆ ವ್ಯಥೆಯಾಯಿತು.

ಬಹಳಷ್ಟು ವಿಚಾರ ತಿಳಿದಿದ್ದರೂ ಮತ್ತೊಬ್ಬ ರೊಂದಿಗೆ ಹಂಚಿಕೊಳ್ಳದೆ ತಮ್ಮ ಪಾಡಿಗೆ ತಾವು ಇದ್ದಿದ್ದರಿಂದ ಈಗ ಬಾಯಿ ಸಹ ತೆರೆಯಲು ಸಾಧ್ಯವಾಗ ದಂತಾಯಿತು ಎನಿಸಿತು.

ಇನ್ನು, ಮಾತಾಡಲೇನೋ ಸಾಧ್ಯವಿಲ್ಲ. ಆದರೆ ಶ್ರವಣ ಶಕ್ತಿ ಇದೆಯೋ ಇಲ್ಲವೋ ಎಂದು ಪರೀಕ್ಷಿಸಿ ಕೊಳ್ಳಲು ತೊಡಗಿದೆ. ಎಲ್ಲಿಂದಲೋ ಸಂಭಾಷಣೆಗಳು ಕೇಳಿಬರುತ್ತಿದ್ದವು :

'ಶತ್ರುಗಳೆಲ್ಲರನ್ನು ನಾಶ ಮಾಡಿಬಿಟ್ಟೆ!'

'ಖಂಡಿತವಾಗಿಯೂ ಇಲ್ಲ. ನಿನ್ನೊಳಗಿರುವ ಶತ್ರುವನ್ನು ನಾಶ ಮಾಡು ಮೊದಲು ?'

'ಇಲ್ಲ. ನನ್ನೊಳಗೆ ಶತ್ರುವಿಲ್ಲ.'

'ಇದ್ದಾನೆ. ಇಣುಕಿ ನೋಡು ಮನಸ್ಸಿನೊಳಗೆ, ಆಳದಲ್ಲಿ.'

'ನೀನು ಇಷ್ಟೊಂದು ಒಳ್ಳೆ ಸಲಹೆಗಳನ್ನು ಕೊಡುತ್ತಿದ್ದೀಯಲ್ಲ, ಬಾ, ಒಮ್ಮೆ ಆಲಂಗಿಸು, ಸ್ನೇಹಿತನಂತೆ.'

'ಆಲಿಂಗನದ ನೆಪದಲ್ಲಿ ನನ್ನನ್ನು ಸಾಯಿಸಲು ಹೊಂಚು ಹಾಕುತ್ತಿರುವಂತೆ ಕಾಣುತ್ತೆ!'

ಮನೆಯಿಂದ ಬಹಳ ದೂರವೇ ಬಂದಿದ್ದರೂ ನಾಟಕ ಎಲ್ಲಿ ನಡೆಯುತ್ತಿದೆಯೆಂದು ಪತ್ತೆ ಹಚ್ಚಲು ಸಾಧ್ಯವಾಗದಿದ್ದುದಕ್ಕೆ ವ್ಯಥೆಯಾಯಿತು.

ಇದುವರೆಗೆ ನೋಡಿದುದೆಲ್ಲವನ್ನೂ ಮತ್ತೊಬ್ಬರಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ತುಟಿಗಳನ್ನು ಹೊಲಿಸಿ ಕೊಂಡಿದ್ದೇನೆ. ಇಂಥದರಲ್ಲಿ ಬರೆದಾದರೂ ಮುಗಿಸ ಬೇಕೆಂದುಕೊಂಡು ಕಾಗದ ಮತ್ತು ಲೇಖನಿಗಾಗಿ ಕಿಸೆಗೆ ಕೈ ಹಾಕಲು ಮುಂದಾದೆ. ಕೈಗಳೇ ಇಲ್ಲದಿರುವುದು ಗಮನಕ್ಕೆ ಬಂತು. ಬರೆಯುವ ಕೈಗಳನ್ನೂ ಕಳೆದುಕೊಂಡೆ ಎಂದು ಖಿನ್ನನಾದೆ.

ಮನೆಯಿಂದ ಹೊರಟಾಗ ಎರಡು ಕೈಗಳು ಚೆನ್ನಾಗಿಯೇ ಇದ್ದವು ! ಕಥೆ ಬರೆಯುತ್ತ ತಾನೇ ಹೊರಟಿದ್ದು!

ಇದ್ದಕ್ಕಿದ್ದಂತೆ ಹೊಸದೊಂದು ಅನುಮಾನ ಹುಟ್ಟಿ ಕೊಂಡಿತು. ಇಡಿ ದೇಹವನ್ನೆಲ್ಲಾ ಕಿವಿಯನ್ನಾಗಿಸಿಕೊಂಡು ಏನನ್ನಾದರೂ ಕೇಳಿಸಿಕೊಳ್ಳಬೇಕೆಂದು ಆಸೆಯಿಂದ ಕಾದೆ. ಏನೂ ಕೇಳಿಸಲೇ ಇಲ್ಲ. ಶ್ರವಣ ಶಕ್ತಿ ಸಹ ಹೊರಟು ಹೋಗಿತ್ತು. ಏನು ಮಾಡಬೇಕೆಂದು ಯೋಚಿಸುತ್ತ ಮುಂದೆ ನೋಡಿದೆ. ಏನೆಂದರೆ ಏನೂ ಕಾಣಲಿಲ್ಲ.

ಆದೀಬ್ ಅಖ್ತರ್
ಕೇರಾಫ್ : ಖಾನ್ ಮಹಮ್ಮದ್
ಅಂಚೆ : ಬನ್ನೂರು - ೫೭೧ ೧೦೧, ಮೈಸೂರು ಜಿಲ್ಲೆ

ಶಾಂತಾನಾಯ್ಕ ಶಿರಗಾನಹಳ್ಳಿ



# ಕೊಯ್ಯ ಮತ್ತ ಧೋತ್ರ

ಎಲ್ಲಾ ಕಡೀಗ ಹುಡುಕಾಟ ನಡೆದಿತ್ತು. ದೊಡ್ಡ ದನಿ ಮಾಡದೆ ಬರಿ ಸನ್ನೆ ಮಾಡ್ತಾ ಒಬ್ಬರಿಗೊಬ್ಬರು ಅಲ್ಲಿ ಇಲ್ಲಿ ಅಂತೇಳಿ ಓಡಾಡತೊಡಗಿದ್ದರು. ಹ್ಯಾಪಮಾರಿ ಹಾಕ್ಕೊಂಡು ತಿಥಿ ಊಟ ಉಣ್ಣೋರಿಗ ಉಣ್ಣಾಕ ಬಡಸಾಕ ಹತ್ತಿದ್ದ ದೊಡ್ಡಮನಿ ಕಡೀಗ ಸನ್ನಿ ಮಾಡಿ ಕಳಸ್ತಾ ಒಂದ ಹೆಜ್ಜಿ ಕಣದ ಕಡೀಗ ಓಡಿ ಹೋಗಿ ನೋಡಿಬಂದ ಬಾಣು ದೊಡಪ್ಪ. ಸಂಕಣ್ಣ ಹಿರಿಮಾಮ, ಚಿಟ್ಟು, ಸಾವಕ್ಕ, ಬಾಗಿ ಅತ್ತಿಗಿ, ಮನಿ ಮಂದಿ ಹುಡುಕಿದ್ದೆ ಹುಡುಕಿದ್ದು. ''ಎಲ್ಹೋತು ಹಾಳಾದ್ದು'' ದೊಡಪ್ಪ ಕೇಳಿದ. ಯಾರು ಮಾತಾಡೋ ಗೋಜಿಗ ಹೋಗಲಿಲ್ಲಾ. 'ದನ ಮನಿಯೊಳಗ ಯಾರಾರು ಇಟ್ಟು ಬಂದ್ರೇನ ಮತ್ತ' ಅಂದವನೆ ದನದ ಮನಿ ಕಡೀಗ ಓಡಿಹೋದ.

ನಮ್ಮಪ್ಪನ ಅಪ್ಪ ಅಂದ್ರ ನನ್ನಜ್ಜ ಜೆಂಬೂರ ಅಜ್ಜ ತೀರ್‍ಕೊಂಡಿದ್ಕ ದೊಡ್ಡ ಮನಿತನದ ಮಾರ್ಯಾದಿ ಪ್ರಶ್ನೆ ಅನ್ನೋಹಂಗ, ಹೆಣ ಸುಟ್ಟ ಹನ್ನೆಲ್ಡನೇಯ ದಿನ ತಿಥಿ ಊಟ ಸುತ್ತ ಯಾರೂ ಮಾಡಿರಬಾರದು ಹಂಗ ಮಾಡಾಸಂತ ಗುಲ್ಬರ್ಗಾದಿಂದ ಬಂದ ನಾನು ಅಂದಿದ್ಕ ಅಪ್ಪ ದೊಡಪ್ಪ ಸೋಮಿಕಾಕ, ಜಗ್ಗೇಶಿ ಕಾಕ, ಸೇರ್‍ಕೊಂಡು ಭಾರಿ ಏರ್ಪಾಟು ಹಮ್ಮಿಕೊಂಡಿದ್ವಿ. ಜೆಂಬೂರಜ್ಜನ ಹಳೇ ಫೋಟೋ ಹಾಕಿ ಒಂದು ಕಾರ್ಡು ಪ್ರಿಂಟ್ ಆತು. ಗಂದೂರ ಜಿಲ್ಲೆಯ ಲೋಕಲ್ ನ್ಯೂಸ್‌ಪೇಪರ ಆದ ಗಂದೂರ ಟೈಮ್ಸ್‌ನಲ್ಲಿ ಶಿವಗಣಾರಾಧನೆ ಕಾಲಂನಲ್ಲಿ ಜಾಹಿರಾತು ಕೊಟ್ಟು ಬಂದೆ. ಮೂಲಿಮುಕ್ಕಟ್ಟಿನೊಳಗಿರೊ ನಮ್ಮ ಬೀಗರಿಗ ಸುದ್ದಿ ತಿಳಿಯಲಿ ಅಂತೇಳಿ ಎಲ್ಲಾ ವ್ಯವಸ್ಥೆಗಳನ್ನ ನಾನೇ ಖುದ್ದು ಮುಂದ ನಿಂತ್ಕೊಂಡೆ ಮಾಡಿದ್ದೆ. ಒಂದುವಾರದಷ್ಟು ರಜೆ ಮುಂದುವರಿಸಿ ಎಲ್ಲಾದಕ್ಕೂ ನಾನೇ ಕಾರಣ ಅನ್ನೋರಂಗೆ ಅಡ್ಡಾಡತೊಡಗಿದ ಯಂಕಪ್ಪ. ವ್ಯವಸ್ಥೆ ಏನೋ ಗಡದ್ದಾಗೆ ಆಗಿತ್ತು. ದುತ್ತರಗಿಯಿಂದ ರಾಂಭಟ್ಟ, ಯಂಕಟ್ರಮಣ ಭಟ್ಟ, ರವೀಂದ್ರ ಭಟ್ಟ ಮೂವರು ಅಡಗಿ ಮಾಡಾಕ ಏಳತಾಸು ಮುಂಚೆ ಬಂದೋರೆ ಮಂಡೆಕ್ಕಿ ಒಗ್ಗರಣೆ ಹಾಕೊಂಡು ಮೇದು ಕೇಟಿ ಚಾಯ್ ಮಾಡ್ಕೊಂಡು ಕುಡದು ಅಡಗಿಗ ಅಣಿಯಾಗಿ ಇಡಿರಾತ್ರಿ ಕಣ್ಣು ಮುಚ್ಚದಂಗ ಬಾರಾಡಿ ಅಡುಗೆ ಮಾಡಿದ್ರು. ತಿಥಿ ದಿನ ಪೂಜಿ ಮಾಡಿ ನಸುಕಿನೊಳಗ ಬಂದು ಕುಂತಿದ್ದ ಹರಿಯಾರ, ದಾವಣಗೇರಿಗ ಕೂಲಿಗ ಹೋಗೋ ಮಂದಿಗ ಬಡಸಾಕಂತೇಳಿ ಪೂಜಿ ಮಾಡಿ ಇನ್ನೇನು ಹುಡ್ರು ಏಳಾಕು, ಯಣ್ಣ ನನ್ನ ಧೋತ್ರ ಎಲ್ಲಪ್ಪೋ, ಕಡೀಗ ಜಳಕ ಮಾಡ್ಸಿದ್ದು ಇಲ್ಲೇ ಅಲ್ಲೇನು ? ಅಂದ್ಕೊಂತ ಬಂದೇಬಿಟ್ಲು, ಅಗಸರ ದೊಂಡಿ. ಪದ್ಧತಿ ಪ್ರಕಾರ ಸ್ಮಶಾನದಾಗಿನ ಕೊಬ್ಬರಿ ಹೆಣದ ಮ್ಯಾಲ ಬಿಸಾಡಿದ ಪುಡಿಗಾಸು, ಅದು ಇದು ಸಾಮಾನು ಮಾದರಿಗ ಹೋದ್ರ, ಸತ್ತೋರ ಹಾಸಿಗಿ, ಕಡಿಗ ಉಟ್ಟ ಧೋತ್ರ ಅಗಸರ ಮನಿಗ ಸೇರಬೇಕು.

ಕೊನಿಗ ಜಳಕ ಮಾಡ್ಸಿ ಬಿಟ್ಟ ಜಾಗಾದಾಗಿನ ಧೋತ್ರ ಹನೆಲ್ಡ ದಿನದ ಮಟ ಅಲ್ಲೇ ಬಿದಿರಾಕು. ಹನ್ನೆಲ್ಡ ದಿನದ ನಂತರ ಅಗಸರ ಮನಿಮಂದಿ ಬಂದು ತಗೊಂಡ ಹೋಗಾಕು. ಅಗಸರ ಮನಿಯಿಂದ ಯಾರಾದ್ರು ಬಂದು ಒಯ್ಯದಿದ್ರ ''ಏನಲೇ ಅಗಸ ಮುಕಳಿಂಗ ಸೊಕ್ಕೇನು ಮಗನ. ನಮ್ಮಪ್ಪನ ಧೋತ್ರ ಆಟ ಬ್ಯಾಡಾತೇನು ನಿನಗ ? ನಾವೇನು ಕಮ್ಮಿ ಮಾಡೀವಿ ನಿನಗಂತ'' ಹಿಗ್ಗಾಮುಗ್ಗಿ ಬೊಯ್ಯುತ್ತಿತ್ತು ಮಂದಿ. ಕಡಿ ಧೋತ್ರ ಅಗಸರಿಗೇನಾರು ಸಿಗಲಿಲ್ಲಾಂದ್ರ ''ಥೂ, ಇವನವ್ವನ, ಜುಗನನಮಗ ಅಗಸ ಕೊಡೋ ಧೋತ್ರಾನು ಬಚ್ಚಿಟ್ಕೊಂಡ ಏಳಪಾಪದೋನು, ಯಾರು ಮುಟ್ಟಿಸ್ಕೋಬ್ಯಾಡ್ರಿ, ಅವನು

ಕುಲಗೆಟ್ಟೋನು'' ಅಂತೇಳಿ ಇಡೀ ಊರಿಗ ಸಾರಿಬಿಡ್ತಿದ್ದ.

ದೊಂಡಿ ಬಂದು ಡಿಮ್ಯಾಂಡ್ ಇಟ್ಟದ್ದೆ ದೊಡಪ್ಪ, ಅಪ್ಪ, ಅಜ್ಜನ ಕುಂದ್ರಿಸಿ ಜಳಕ ಮಾಡಿಸಿದ ಕಲ್ಲಾಗ ಹೋಗಿ ನೋಡಿದ್ರು ಧೋತ್ರ ಕಾಣಲಿಲ್ಲ. ದೊಡಪ್ಪಗ ಹೆದರಿಕಿಯಾತು. ಮದ್ಲೆ ಹರಕಬಾಯಿ ಹೆಂಗಸಿಕಿ, ಆಕಿ ಗಂಡ ಚಂದ್ರ ಬಂದಿದ್ರ ಪಾಡಿತ್ತು. ''ಇಲ್ಲಲೇ ಚಂದ್ರ ಎಲ್ಲೋ ಐತಿ ಹುಡುಕಿಸಿ ಇಡ್ತೀನಿ'' ಅಂದಿದ್ರ ತಿಳ್ಕೊಂಡು ''ಆತ ಹೇಳ ಕಾಕ ಅದೆಲ್ಲಿಗೆ ಹೋಕ್ಕೈತಿ'' ಅಂದು ಉಂಡು ಹೊಕ್ಕಿದ್ದ. ಇಕಿ ಮಂಡ ಹೆಂಗಸು, ಊರಮಂದಿ ಮುಂದ ಮಾನ ಕಳಿತಾಳ ಅಂದವನೆ ಅರಬಾಡಿಸಿ ಹುಡುಕ ತೊಡಗಿದ. ದೊಡಪ್ಪನ ಅಡಾಟದ ರೀತಿ ನೋಡಿ ಗಾಬರಿ ಆತು. ''ಯಪ್ಪ ಏನಾತು. ಹಿಂಗ್ಯಾಕ ಅರಚಾಡ್ಯಾಕತಿ'' ಅಂತೇಳಿ ಓಡಿಹೋದೆ. ''ಏನಿಲ್ಲಲೇ ತಮ್ಮಾ ನಿಮ್ಮಜ್ಜನ ಹರಕ ಧೋತ್ರ ಒಯ್ಯಾಕ ಬಂದಾಳ ದೊಂಡಿ. ಕಾಣವಲ್ದು'' ಅಂದವನೆ ''ಸಿಗ್ತೇನ'' ಅಂತೇಳಿ ಜೋಕಿ ದೊಡವನ ಕಡೀಗ ಮಾರಿ ಮಾಡಿ ಕೇಳಿದ. ಅಲೇ ಇವ್ನ ಆ ಹರಕ ಧೋತ್ರಕ ಇಟೊಂದು ತಲಿಕೆಡಿಸಿಕೊಂಡು ಹುಡುಕೋದ ಏನೈತಿ ಅನಿಸಿತು. ''ಯವ್ವ ಮದ್ಲ ಹೋಗು ಮಂದಿಗ ಉಣ್ಣಾಕ ಏರ್ಪಾಟು ಮಾಡು. ಧೋತ್ರ ಇಲ್ಲೇ ಎಲಾರು ಇದ್ದೀತು. ಎಲ್ಲಿಗೂ ಓಡಿ ಹೋಗೋದಿಲ್ಲಾ. ಆಮ್ಯಾಕ ಹುಡಕಾಂತ'' ಅಂದೆ. ''ಏ, ಹಂಗ ಅನಬ್ಯಾಡೊ ತಮ್ಮಾ. ಯಂಕಣ್ಣ ದಂಡ ಕೊಡ ಬೇಕಾದೀತು. ಹರಕ ಧೋತ್ರ ಕೊಡಾಕು ಇಲ್ಲಿಕ್ರ ನಮ್ಮ ಮನಿನ ಊರಿಂದ ಹೊರಗ ಹಾಕ್ತಾರು'' ಅಂದ್ಲು. ನನಗೇನು ಅಂತ ತಲಿಬುಡಾನೆ ಅರ್ಥ ಆಗಲಿಲ್ಲಾ. ಆಕಿ ಮಾರಿ ನೋಡಿ ದೊಂಡಿ ಕಡೀಗ ಹೊಂಟೆ.

ದೊಂಡಿ ಸುತ್ತೆಲ್ಲಾ ಹುಡುಕೋರ ಹಿಂದಿಂದ ಗುಮಾನಿಯಿಂದ ಓಡಾಡತೊಡಗಿದಳು. ಬೇಕಂತ ಬಚ್ಚಿಟ್ರೋ ಹ್ಯಾಂಗಂತ ಅನುಮಾನ ವ್ಯಕ್ತಪಡಿಸಿದ್ಲು. ಅಲ್ಲಾ ಒಂದ ಹರಕು ಧೋತ್ರದ ಹಿಂದ ಇಷ್ಟೊಂದು ಮಂದಿ ಗಂಟ ಬಿದ್ದಾರಲ್ಲಾ ಏನಿದ್ದು ಇದರ ಮಹಿಮೆ ಅಂದ್ಕೊಂಡವನೆ ಅಕೀನ ಕೇಳಾಕಂತೇಳಿ ಹೊರಟೆ. ''ಏನಬೆ, ಮುದುಕ ಸಾಯೋ ಮುಂದ ಇಡಿ ಧೋತ್ರನ' ಚೂರು ಚೂರು ಮಾಡಿದ್ದ. ಅದನ್ನ ತಗೊಂಡ ನೀ ಏನ ಮಾಡ್ತಿ? ಎಲ್ಲಾರು ಇದ್ದೀತ ಬಿಡು'' ಅಂತ ಸಮಾಧಾನದ ಮಾತು ಹೇಳಿದೆ. ''ಯಂಕಪ್ಪಾ ಏನು ಹಿಂಗಂತಿಯಾ, ಹಂಗ ನೋಡಿದ್ರ ನನ್ನ ಧೋತ್ರ ಕೊಟ್ಟು ನನ್ನಿಂದ ಊಟಕ ಕುಂದ್ರಸೋಹಂಗಾಗಬೇಕು. ನಾ ಏನೋ ನಮ್ಮ ಮನಿ ಅಂತೇಳಿ ಸುಮ್ಮಗ ಅದೀನಿ ಆಟ'' ಅಂದ್ಲು. ನನಗ ಮತ್ತೂ ಅನುಮಾನ ಆತು. ''ಅಲ್ಲಾ ಒಂದ ಹಳೆ ಧೋತ್ರಕ ಹಿಂಗ ಆಡ್ತಿ ಅಲ್ಲಬೇ ಒಂದು ಪಕ್ಷ ಎಮ್ಮಿಗಿಮ್ಮಿ ತಿಂದ ಹೋದ್ರ ಏನ್ಮಾಡ್ತಿ'' ಅಂತೇಳಿ ಕೇಳಿದೆ. ''ನನ್ನ ಜೀವನದಾಗ ಎಷ್ಟೋ ಸೂತಕದ ಮನಿ ನೋಡಿನಿ. ನಿನ್ನಂಗ ಮಾತಾಡೋದನ್ನ ಕೇಳೆ ಇಲ್ಲ ಬಿಡು. ಎಲ್ಲೂ ಎಮ್ಮಿ ತಿಂದಿಲ್ಲಾ. ಜಳಕ ಮುಗದಿಂದ ಧೋತ್ರ ದಬ್ಬಿ ಸಗಣಿ ಪುಟ್ಟಿಯೊಳಗ ಮುಚ್ಚಿಟ್ಟು ನಾವು ಬರೋ ದಾರಿಯನ್ನ ಕಾಯಿತಿರ್ತಾರ. ನೀ ಆಟೊಂದ ಕಲ್ತು ಉಪಯೋಗಿಲ್ಲ ನೋಡು'' ಅಂತೇಳಿ ನನ್ನ ಮರ್ಯಾದಿಗ ಕೈ ಹಾಕಿದ್ಲು. ''ಏನಬೇ ಏನೋ ಹಿರಿಯೋಳಂತ ಮರ್ಯಾದಿ ಕೊಟ್ರ ಮೈಮ್ಯಾಲ ಬರಾಕ ಹತ್ತಿಯಲ್ಲಾ. ಹೋಗಹೋಗು ಮಂದಿ ಊಟ ಆಗ್ಲಿ ಆಮ್ಯಾಕ ಹುಡುಕಿಸಿ ಇಟ್ಟರ್ತೀನಿ'' ಅಂತ ಗದರಿಸಿದೆ. ''ಯಂಕಪ್ಪ ಏನಂತ ತಿಳ್ಕೊಂಡಿ ದೊಡ್ಡವನಿದ್ರ ನಿಮ್ಮ ಮನೀಗ. ನಾ ಏನು ಭಿಕ್ಷ ಬೇಡಾಕ ಬಂದಿಲ್ಲಾ ಏನು, ನಿಮ್ಮಂತ ಪಾಪದ ಮಂದಿ ಸ್ವರ್ಗಕ್ಕ ಹೋಗಲಿ ಅಂತ ನಿಮ್ಮ ಪಾಪ ತೊಳಿತೀವಲ್ಲಾ ಅದು ನಮ್ಮ ತೆಪ್ಪು'' ಅಂದವಳೆ ಎದ್ದು ದೊಡಪ್ಪನ ಹುಡುಕಿ ಕೊಂಡು ಹೊಂಟಳು.

ಸ್ವರ್ಗದ ಕಲ್ಪನೆ ವಿಚಿತ್ರವಾಗಿ ಕಾಣ್ತು. ಈ ಮಂದಿ ತಲಿಯೊಳಗ ಏನೆಲ್ಲಾ ವಿಚಿತ್ರಗಳು ತುಂಬ್ಯಾವಲ್ಲಾ ಅನಿಸಿತು. ದೊಡಪ್ಪನ ಕರ್ಕೊಂಡ ನನ್ನ ತಾವ ಬಂದ್ಲು. ''ಯಂಕಪ್ಪ, ಅದೊಂದು ನಂಬಿಕೆ. ಇದು ನಿನ್ನೆ ಇವತ್ತಿಂದಲ್ಲಾ. ಈ ಸಮಾಜದಾಗ ಇವೆಲ್ಲಾ ಬೇಕು ಅಂತೇಳೆ ನಮ್ಮ ಹಿರಿಯರು ಮಾಡಿರೋದು. ನಾವು ಮಾಡಿದ ಪಾಪವನ ತೊಳದು ತಾವು ಉಡೋದರಿಂದ ನಮಗ ಸ್ವರ್ಗ ಸಿಗತೈತೊ ಹುಚ್ಚಪ್ಪ. ಇದನ್ನ ಯಾ ಪುಸ್ತಕಾನು ಹೇಳಿಕೊಡಂಗಿಲ್ಲಾ.'' ನನ್ನ ತಲಿ ಹಾಳಾತು. ''ಯಪ್ಪ, ನಿಂಗ ಬುದ್ಧಿ ಕೆಟ್ಟೈತೇನು ? ಇವನ್ನೆಲ್ಲಾ ನಮ್ಮನ್ನ ನಂಬಿಸಾಕಂತಂದು ಮಾಡಿರೊ ವ್ಯವಸ್ಥಿತ ಸಂಚು. ಸ್ವರ್ಗ ನರಕ ಎಲ್ಡು ಇಲ್ವೆ ಇಲ್ಲಾ, ನೀಯಾಕ ಸತ್ಯವನ್ನ ನಂಬೋದಿಲ್ಲಾ ಅಂತ ಅರ್ಥ ಆಗ್ತಿಲ್ಲಾ ನನಗ.'' ನಾನು ದೊಂಡಿಯನ್ನ ನೋಡಿದೆ. ದೊಡಪ್ಪ ವಾದಕ್ಕ ಇಳಿತಾನಂತ ಹೆದರಿದೆ, ''ಏನೋ ತಮ್ಮಾ ನಾ ಅಂತು ನಿನಷ್ಟು ಶಾಣ ಅಲ್ಲಾ. ಏನೋ ನಮ್ಮಪ್ಪ ಹೇಳ್ತಿದ್ದ ತೊಂಡಿ ಲೆಕ್ಕಾಚಾರದ ಮ್ಯಾಲ ಹೇಳ್ತಿವಿ ಆಟೆ ನೋಡು'' ಅಂದು ಹಿರೇಗೌಡ್ರು ಬಂದಿದ್ಕ ಓಡಿ ಹೊಂಟ.

ನಮ್ಮ ಮಾತು ಕೇಳಿಸಿಕೊಂಡಿದ್ದ ಗೌಡಗ ನನ್ನ ಮ್ಯಾಲ ವಿಪರೀತ ಸಿಟ್ಟ ಬಂದಿತ್ತು. ''ಏನಪ್ಪಾ ಯಂಕಪ್ಪ ಬೋ ಪಸಂದಾಗೆ ಮಾತಾಡಿದೆ. ನಿಮ್ಮ ಮನಿನ ಊರ ಹೊರಗ ಹಾಕಾನೇನು, ಈ ಊರಾಗ ಹಿಂದಿಂದ ನಡಕೊಂಡ ಬಂದ ಆಚರಣೆಗಳನ್ನು ಮುಂದುವರಿಸಿಕೊಂಡೇ ಬಂದೀವಿ. ನೀನು ಹೊರಗಿನವ. ಈ ಊರಾಗ ಏಟ ದಿನ ಅದಿ ಹೇಳು. ನಮ್ಮ ಆಚರಣೆಗಳು ಬೇಕಪ್ಪ, ಇಲ್ದಿದ್ರ ಈ ಜಗತ್ತಿಗ ಉಳೀಗಾಲ ಇಲ್ಲಾ. ಏನಂದೆ ಈ ವ್ಯವಸ್ಥೆಯೊಳಗ ಎಲ್ಲಾನೂ ಬೇಕೆ ಬೇಕು.'' ಅವನ ಕಡ್ಡಿ ಮೀಸೆ ಹುರುಪುಗೊಳಿಸಿದ. ''ಗೌಡ್ರ ನಾ ಏನ ಹೇಳಿದ್ರು ನಿಮ್ಮ ತಲಿಯಾಗ ಹೋಗೋದಿಲ್ಲಾ ಏನು, ಈಗ ಹೋಗ್ರಿ ಉಣ್ಣಾಕ ಬಂದೀರಿ ಮಾತಬ್ಯಾಡ'' ಅಂತೇಳಿ ಸಾಗ ಹಾಕಾಕ ನೋಡಿದೆ. ''ಹಂಗ್ಯಾಕ ಬ್ಯಾಸರ ಅಕ್ಕಿ ತಮ್ಮಾ. ಬಿಸಿರಕ್ತ ನೀ ಏನಮಾಡಿ ಎಲ್ಲಾನು ಬದಲು ಮಾಡ್ತೀನಿ ಅಂತ ಹೊಂಟಬಿಟ್ಟಿ. ಆದ್ರ ನಮ್ಮಂತೋರು ಅದಕ್ಕ ಅವಕಾಶ ಮಾಡಿಕೊಡಂಗಿಲ್ಲಾ.'' ನೆಟ್ಟಗ ನನ್ನ ನೋಡಿದ. ಒಂದ ಹರಕ ಧೋತ್ರ ಈ ಪಡಿಪಾಟಲು ತಂದಿಡತೈತಿ ಅಂತ ಅನಿಸಿರಲಿಲ್ಲಾ. ನಾನು ಮಾತಾಡಲಿಲ್ಲಾ. ಮುಂದಕ ಹೋದ ಗೌಡ್ರು, ಒಬ್ಬ ನರಪೇತಲ ಹುಡುಗನ್ನ ಅಂಗೈ ಹಿಡದು ಎಳ್ಕೊಂಡ ಬಂದು ನನ್ನೆದುರಿಗ ನಿಲ್ಲಿಸಿ, ಹೇಳಿದ, ''ಈ ಸಣಕಲ ವ್ಯಕ್ತಿ ದೊಡ್ಡ ಪೊಳ ಅಂಗಿ ಹಾಕೊಂಡು ತಾನು ದಪ್ಪ ಆದೆ ಅಂದ್ರ ದಪ್ಪ ಆಗಾಕ ಸಾಧ್ಯವೇನು ?'' ಅಂದವನೆ ಸೀದಾ ಊಟದ ಖೋಲಿಗ ನಡೆದ. ಅಪ್ಪ ದೊಡಪ್ಪ ಅವನ ಹಿಂದ ಕೈ ಕಟ್ಟಿಕೊಂಡು ಅದೇ ಮಾಮೂಲು ನಡ ಬಗ್ಗಿಸಿ ಆಂ ಹುಂ ಅನ್ಕೋಂತ ಅಡ್ಡಾಡ್ತಿದ್ರು. ಅವರನ್ನ ನೋಡಿ ಅಯ್ಯೋ ಅನಿಸಿತು.

ಆದ್ರ ಆ ಮುದಿಗೌಡ ಅಂದ ಹೋದ ಮಾತ ಮಾತ್ರ ಕಾಡತೊಡಗಿತು. ಏನು ಹಿಂಗಂದ್ರ, ಯಾಕ ನನಗ ಈ ಮಾತಂದ, ವಿಚಾರ ಮಾಡಿದೆ. ದೊಂಡಿ ಕಡೀಗ ನೋಡಿದೆ. ಧೋತ್ರ ಸಿಗೋ ಮಟ ಠಿಕಾಣಿ ಹೊಡದಿದ್ಲು. ತಲಿಕೆರ್ಕೊಂಡು ಬರೊ ಹೋಗೋ ಮಂದಿ ನೋಡ ತೊಡಗಿದೆ. ಗೌಡಪ್ಪನ ಮಾತು ಕಿವಿಯೊಳಗ ಗುಂಯ್ ಗುಡಾಕತ್ತು. ಯಾವುದೋ ಒಂದು ಅರ್ಥ ಇಟ್ಟು ಹೇಳ್ಯಾನ ಬೆರಕಿ ಮುದುಕ ಅನಿಸಿತು. ನಮ್ಮ ಮಂದಿ ಅವನ ಹೊಲ್ದಾಗ ದುಡದು ಸಾವುಕಾರನ್ನ ಮಾಡಿ ಊರ ಗೌಡಕಿ ಪಟ್ಟ ಕೊಟ್ಟಾರಲ್ಲಾ ಅದಕ ಮಗ ಮಾತಾಡ್ತಾನ. ಎದ್ದ ಹೊರಟಿದ್ದೆ. ಇದ್ದಕ್ಕಿದ್ದಂಗೆ ಅವನ ಮಾತಿನ ಅರ್ಥ ನೆಪ್ಪಾತು. ಸಣ್ಣ ಜಾತಿಯವನು ಕಲ್ತು ದೊಡವನಾದಗಟ್ಟಿಗೆ ದೊಡ್ಡ ಜಾತಿಯವನಾಗಲಿಲ್ಲಾ ! ಓ, ಎಂಥ ಬೇವರ್ಸಿ ಮುದಿಯಾ, ಅನಿಸಿತು. ಹಾಳಾಗಿ ಹೋಗ್ಲಿ ಅವನಂತ ತಲಿ ಇಲ್ಲದ ಮಂದಿ ನಿರ್ಮಿಸಿರೋದು ಈ ವ್ಯವಸ್ಥೆ. ಒಂದು ಹರಕು ಧೋತ್ರ ಎಲ್ಲಾ ಹುಳುಕನ್ನು ಕೆದಕಿ ತಗಿತಲ್ಲಾ ಅಂತೇಳಿ ಕೆಟ್ಟ ಅನಿಸಿತು. ನಮ್ಮಪ್ಪ, ದೊಡಪ್ಪ ಈ ಊರಾನ ಮಂದಿ ತಾವು ಸರಿಸಮಾನಾಗಿ ದುಡಿದು ಜೀವನ ಮಾಡ್ತಿದ್ರು, ಡೊಗ್ಗಿ ಸಲಾಂ ಹೊಡಿಯೋದನ್ನ ಬಿಟ್ಟಿಲ್ಲಾ, ಇದೇನು ಗೌರವನೋ, ಅನಿವಾರ್ಯ ಎಂಬ ತಾಕಲಾಟ ನನ್ನೊಳಗೆ ಸುರು ಆತು.

ದೊಂಡಿ ಹಚ್ಚಿ ನಿಂತು ಬೊಯ್ಯಾಕ ಹತ್ತಿದ್ಲು ''ಯಾ ಸೀಮಿ ಮಂದಿ ನೀವು. ಕೆಲ್ಸ ಬಗಸಿ ಬಿಟ್ಟು ಬಂದೀನಿ, ಗೌಡಪ್ಪರವೂ ರಾಶಿ ಅರವಿ ಅದಾವು. ಇವತ್ತ ಸಂಜಿಕ ವಾಪಾಸ ಕೊಡಾಕು. ನಾಯಾ ಫಳಗಿಗ ಬಂದ್ನೆಯವ್ವ. ಈ ಬ್ಯಾಡರಮಂದೀನ ಆಟು ಬ್ಯಾರೆ ಜನ ಅಂತಂದ್ರು ದರಕಾರ ಮಾಡೋದಿಲ್ಲ. ಗೌಡ್ರಿಗ ಸುದ್ದಿ ಮುಟ್ಟಿಸಿ ಮಾನ ಕಾಸಿನ ಪಂಚರ್ ಮಾಡಬಹುದು. ಆದ್ರ ಈ ಮನಿ ರಿಣ ಉಂಡೀವಿ ಅಂತಂದು ಬಿಡೋದು ಇವರಿಗೆ ಇದೆಲ್ಲಾ ತಿಳಿಯಂಗಿಲ್ಲಾ.'' ಅಕಿ ಕಡೀಗ ಯಾರು ನೋಡಾಕ ತಯಾರಿಲ್ಲಾ. ಸುತ್ತೆಲ್ಲಾ ಊರುಗಳಿಂದ ಮಂದಿ ಬರಾಕ ಹತ್ತು. ಜನ ಜಾಸ್ತಿ ಆಗಿದ್ದಕ ಎಲ್ಲರೂ ಗಡಬಡಿಸ ತೊಡಗಿದ್ರೂ ಯಾರೊಬ್ಬರು ದೊಂಡಿ ಮಾತಿಗ ಲಕ್ಷ್ಯ ವಹಿಸಲಿಲ್ಲಾ. ದೊಡಪ್ಪ ಮಾತ್ರ ಆ ಗಡಬಡಿ ನಡುವೆಯೂ ದೊಂಡಿಯ ಧೋತ್ರ ಕಡಿಗ ಒಂದ ಕಣ್ಣಿಟ್ಟದ್ದ. ಮಂದಿನ ಉಣ್ಣಾಕ ಬಿಟ್ಟ ''ದೊಂಡವ್ವ ಬೇಜಾರಾಗ ಬ್ಯಾಡ, ಇಲ್ಲೇ ಎಲ್ಲೋ ಐತಿ. ಮನಿ ಹೆಂಗಸರಿಗೆ ಹೇಳಿನಿ. ಹುಡುಕಾಕ ಹತ್ಯಾರ'' ಅಂದ ಹೋದ. ನಮ್ಮವ್ವ ಬಂದ ಒಂದ ಮಾತ ಹೇಳಾನಂತ. ಬಾಯಿ ತಗಿಯಾಕು ''ಏ ನಮ್ಮವ್ವ ನನತಾಯಿ ನಾ ಏನು ಭಿಕ್ಷಕ ಬಂದೋರಹಂಗ ಮಾಡ್ತಿರಲ್ಲಾ. ಕೊಡೋದು ಕೊಟ್ಟಬಿಡ್ರಿ ಹೊಕ್ಕಿನಿ ಅತ್ಲಾಗ ಹಾಳಾಗಿ, ನಿಮ್ದು ದೊಡ್ಡ ಕಾಟ ಆತ ನೋಡು, ಹಿಂಗ ಯಾರು ಸತಾಸಲಿಲ್ಲಾ. ನಿಮ್ಮ ಪಾಪ ದೊಡ್ಡದೈತಿ'' ಅಂತ ತನ್ನ ಹಕ್ಕಿನ ಬಗ್ಗೆ ಮಾತಾಡಿದ್ಲು. ಅವ್ವಗ ಯಾಕಾರು ಬಂದೀನೋ ಅನಿಸಿದ್ದೆ ಒಳಗ ಸೇರಿಕೊಂಡ್ಲು.

ದೊಡಪ್ಪ ಎಲ್ಲರಿಗೂ ಹುಡುಕಾಕ ಮತ್ತೊಂದು ಸಾರಿ ತಾಕಿತ್ತು ಮಾಡಿದ. ಕಲ್ಲು ಎತ್ತಿ, ಎತ್ತಿನ ಗ್ವಾಂದ್ಲಿ, ಪಣತ,

ದನಕರುಗಳಿಗೆ ಹುಲ್ಲಿಡೋ ಜಾಗ, ಸೊಪ್ಪಿನಗೂಡು ಅಂತೇಳಿ ಒಂದ ಜಾಗಾನು ಬಿಟ್ಟು ಬಿಡದೆ ಹುಡುಕಿಸಿದ. ಪ್ರಯೋಜನ ಆಗಲಿಲ್ಲಾ. ''ಏ ಚೆನ್ನು ಏನ ನೆಲಾ ನುಂಗತೊ, ಇಲ್ಲಾ ಆಕಾಶ ತಗೊಂತು, ಏನ ಲಕ್ಷಿ ಇಲ್ಲದ ಮಂದಿ ತುಂಬ್ಕೊಂಡಾರ ಈ ಮನಿಯಾಗಂದ್ರ ನಾ ಹೇಳಾಕ ವಲ್ಲೆ ಬಿಡು'' ಅಂತೇಳಿ ಹಿರಿಮಗನ ಮ್ಯಾಲ ಹರಿಹಾದ. ಯಾರು ತುಟಿ ಪಿಟಕನ್ನಲಿಲ್ಲಾ. ನಾನು ಮುಂದ ಬಂದೋನೆ ''ನೋಡ ದೊಡವ್ವ ಆದದ್ದ ಆತು. ಒಂದು ಹೊಸ ಧೋತ್ರ ತಗೊಂಡ ಹೋಗು. ಅದನ್ನ ಅಜ್ಜನ ಸುಡಗಾಡಿಗ ಮುಟ್ಟಿಸಿ ತೊಳದು ನಿನ್ನ ಗಂಡಗ ಉಟ್ಕೊಳಾಕ ಕೊಡು ಅಂದೆ.'' ಅಕಿಗ ಮದ್ಲೆ ಸಿಟ್ಟು ಬಂದಿತ್ತು. ''ಯಂಕಪ್ಪ ನಿನತಾವ ರೊಕ್ಕ ಐತಿ ಅಂತ ಮಾತಾಡಬ್ಯಾಡ, ರೊಕ್ಕ ನನ್ನ ಬಲ್ಲು ಐತೆ. ಯಾಕ ಪಾಪದ ಮಾತ ಆಡ್ತೀಯ. ಮುದಿಯನ ಹಳೆ ಪಂಚೆಯನ್ನ ತೊಳದು ಪಾಪ ಕಳದು ಪುಣ್ಯ ಕಟ್ಕೊಳ್ಳಾಣಂದ್ರ ನೀ ಇಲ್ಲದ್ದೆ ಮಾತಾಡ್ತಿಯಪ್ಪ. ನನಗಂಡನ ತಾವ ಧೋತ್ರ ಬಹಳ ಅದಾವು. ನೀ ಕೊಡಸೊ ಹೊಸ ಧೋತ್ರ ಉಡಾಕಂತೇಳಿ ಇಲ್ಲಾ'' ಅಂತ ಕಡ್ಡಿ ಎರಡು ತುಂಡ ಮಾಡಿದಂಗ ಮಾತಾಡಿದ್ಲು.

ಇದೊಳ್ಳೆ ಗಾಚಾರ ಬಂತಲ್ಲ. ಅವತ್ತೇ ಧೋತ್ರನ ಕಲ್ಲಪುಟ್ಟಿಯಡಿಗ ಮುಚ್ಚಿಟ್ಟಿದ್ರ ಅಕ್ಕಿತು, ಸತ್ತ ದುಃಖದಾಗ ಏನಂತ ನೋಡ್ತಾರ. ಅವರವರ ಪಾಡು ಅವರವರಿಗೆ ಆಗಿರೊ ಹೊತ್ನಾಗ. ಇವತ್ತು ಇಂಥ ವ್ಯಾಳೆ ಬಂದಿತಂತ ಯಾರ ಕಲ್ಪನೆಯೊಳಗೂ ಇದ್ದಿರಲಿಕ್ಕಿಲ್ಲಾಬಿಡು ಅಂದು ಕೊಂಡೆ. ದಗದ ಮುಗಿಸಿ ಬಂದ ಹರಿಜನಕೇರಿ ಮಂದಿ ಸೀದಾ ಉಣ್ಣಾಕಂತೇಳಿ ಬಂದಿತ್ತು. ಎಲ್ಲಾರು ನುಗ್ಗಿ ಉಂಡು ಕೈ ತೊಳಿಯಾಕ ಹೊರಗ ಬರೋ ಹೊತ್ನಾಗ ಅಜ್ಜನ ಧೋತ್ರ ಗುರ್ತಿಡದಬಿಟ್ಟ ದೊಡಪ್ಪ. ಮಾದರ ಕೊಂಯ್ಯಾ, ಮುದುಕ ತೀರ್ಕೊಂಡ ದಿನ ಹಲಗಿ ಹೊಡಿಯಾಕ ಬಂದಿದ್ದ. ಅವನಿಗೆ ಉಡ್ಕೊಳ್ಳಾಕ ಧೋತ್ರ ಇಲ್ದಕ ಕೊಳಕ ಟವಲು ಸುತ್ಕೊಂಡಿದ್ದ. ಅದು ತತಾನು ತೂತಾಗಿತ್ತು. ಮಂದಿ ಎಲ್ಲಾ ಮುದುಕನ ಹೆಣದ ಸಿಂಗಾರ ಮಾಡೊ ಗಡಿಬಿಡಿಯಲ್ಲಿದ್ದಾಗ ಅದೆಂಗ ಎಗರಿಸಿದ್ನೋ ಅಂತು ಅಗಸನ ಮನಿಗ ಹೋಗೋ ಧೋತ್ರ ಕದ್ದಿದ್ದ. ದೊಡಪ್ಪಗ ನೆತ್ತಿ ಉರದ ಹೋತು. ''ಥು ಸುಳೀಮಗ್ನೆ, ನಮ್ಮಪ್ಪನ ಧೋತ್ರ ಮುಟ್ಟಿ ನರಕಕ ಕಳಿಸಿದೆಯಲ್ಲೋ, ನನ್ನ ಕೇಳಿದ್ರ ಕೂಡಾ ಹೊಸದೊಂದು ಧೋತ್ರಾನೆ ಕೊಟ್ಟಬಿಡ್ತಿದ್ದೆ'' ಅಂದವನೆ ಎದಿಎದಿ ಬಡ್ಕೊಂಡ ಅಳತೊಡಗಿದ. ಗದ್ಲ ಕೇಳಿದ ಹಿರಿಮಾವ ಓಡಿ ಬಂದ. ಕೊಂಯ್ಯಾ ಉಟ್ಟಿದ ಧೋತ್ರ ಮುದಿಯಂದು ಅಂತೇಳಿ ತಿಳದದ್ದೆ ಓಡಿಹೋಗಿ ನಾಕೆತ್ತಿನ ಬಾರ್ಕೋಲು ತಂದವನೆ ದನಕ ಹೋಡಿಯೊ ಹಂಗ ಹೊಡೆಯತೊಡಗಿದ. ''ಹಾಳಾದ ಸೂಳಿಮಗ ಧೋತ್ರ ಮುಟ್ಟಿ ಮೈಲಿಗ ಮಾಡಿದ್ನೋ ಇವವ್ವನ. ದುಡದು ಕುಡಿತಾರ, ಒಂದ ಅರಪಿ ತಗೊಳಾಕ ಆಗಂಗಿಲ್ಲಾ. ಕಂಡೋರ ಅರಿವಿ ಮ್ಯಾಲ ಕಣ್ಣ ಹಾಕ್ತಾರಂತ'' ಅಂದವನೆ ಮನಸಿಗೆ ಹ್ಯಾಂಗ ಬಂತೋ ಹಂಗ ಹೊಡದು ಅಂಗಾತ ಕೆಡವಿದ. ನೆರದ ಮಂದಿ ಗಾಬ್ರಾಗಿ ನೋಡ್ತಿತ್ತು. ಯಾರು ಮುಂದ ಹೋಗಿ ಜಿಡಸಾಕ ತಯಾರಿಲ್ಲ. ಹಿತ್ಲಾಗ ಇದ್ದ ನನಗ ಸುದ್ದಿ ಮುಟ್ಟಿದ್ದೆ ಓಡಿ ಬಂದೆ. ಇನ್ನ ನಾಕ ಬಾರ್ಕೋಲು ಜಿಗಿದಿದ್ರ ಕೊಂಯ್ಯನ ಹೆಣ ಉರುಳುತ್ತಿತ್ತು. ''ಏ ಮಾವ ಮನುಷ್ಯ ಸಜ್ಜದಿ ಇಲ್ಲಾ. ಏನ್ ಮಾಡಾಕ ಹತ್ತಿ ಅನ್ನೋ ಕಬರ್ರೈತೇನ ನಿನಗ ಬಿಡಿಲ್ಲಿ'' ಅಂತ ತೆಕಮಾರಿ ಬಿದ್ದು ಬಾರ್ಕೋಲ ಕಸ್ಕೊಂಡು ದುಡ್ಕೊಂತ ಹೋಗಿ ಮನಿಯಾಗ ಕೂಡಿಟ್ಟೆ.

ನಾಚಿಕ್ಕೇಡು ಮಂದಿ ಉಣ್ಣಾಕ ಹೊಂಟಿತ್ತು. ನಾನು ಹೋದವನೆ ಕೊಂಯ್ಯನ್ನ ಎತ್ತಿ ನೆತ್ತಿಗ ನೀರ ಸುರುವಿ ಬಾಯಿ ಅಗಲಿಸಿ ನೀರ ಹಾಕಿದೆ. ನಮ್ಮ ಮನಿ ಮಂದಿ ಗಾಬ್ರಾಗಿ ನೋಡಾಕ ಹತ್ತು. ನಾನು ಅವರ ಕಡೀಗ ತಿರಸ್ಕಾರದಿಂದ ನೋಡಿದವನೆ ಕೊಂಯ್ಯಾನ ಅಂಗಾತ ಎತ್ಕೊಂಡ ಹೋಗಿ ಅವರ ಹಟ್ಟಿಗ ಮುಟ್ಟಿಸಿ ಅವನ ಮೈಮ್ಯಾಲ ಹ್ಯಾಂಗ ಹೊಡದಿದ್ನೊ ಮಾವ ಹಂಗರಿಗೆ ಬಾಸಾಳ ಕಿತ್ಕೊಂಡ ಬಂದಿತ್ತು. ಕೊಂಯ್ಯನ ಹೇಣ್ತಿ ಚಿಕ್ಕಿ ಅವನ ಮಗಳು ತಿಮ್ಮಿ ಕೊಂಯ್ಯಾ ಉಳಿಯಂಗಿಲ್ಲಾ ಅಂತೇಳಿ ಎದಿ ಎದಿ ಬಡ್ಕೊಂಡ ಅಳ ತೊಡಗಿದ್ರು. ''ಹರಕ ಧೋತ್ರ ಸಿಕಿದ್ಕ ಹಿಗ್ಗಿಂದ ಉಟ್ಕೊಂಡು ಎ ಚಿಕ್ಕಿ ಪಾಡ ಕಾಣ್ತೈತೇನೆ ಅಂತ ತೋರ್ಸಿ ಖುಷಿಪಟ್ಟೆಯಲ್ಲೋ ಕೊಂಯ್ಯಾ'' ಅಂತ ಒತ್ತರಿಸಿ ಬಂದ ದುಃಖ ತಡಿಯಾಕ ಆಗದೆ ಭಾರಾಡಿ ಅಳಾಕ ಹತ್ಲು. ಹಟ್ಟಿ ಮಂದಿ ಜಮಾಯಿಸಿದ್ರು ''ಯ್ಯಾನಾತು ಕೊಂಯ್ಯಾಗಂತ'' ಹಟ್ಟಿ ಮುಂದಾಳು ಸರ್ಪ ಮುಂದ ಬಂದ. ''ಮನ್ನೆ ಸತ್ನಲ್ಲ ಬ್ಯಾಡರ ಮುದಿಯಾ ಅವನ ಹರಕ ಧೋತ್ರ ತಂದು ಉಟ್ಕೊಂಡಿದ್ನ, ಅದಕ ಅಗಸರ ದೊಂಡಿಗ ಧೋತ್ರ ಸಿಗದಾತು. ನಮ್ಮ ಧೋತ್ರ ಯಾಕ ಕದ್ದಿ ಅಂತಂದು ಚರ್ಮ ಸುಲಿಯೋಗಂಟ ಹೊಡ್ದಾರೋ ಯಪ್ಪಾ'' ಅಂತೇಳಿ ಚಿಕ್ಕಿ ಅವನ ಪಾದಕ ಬಿದ್ದು ಅಳಾಕತ್ಲು, ನನಗ ಕೆಟ್ಟ ಅನಿಸಿತು. ಸುಮ್ನಾಗ ಯಾಕ ಅಳ್ತಿ ''ಆ ಬ್ಯಾಡರ ಮಂದಿನ ಹಿಂಗ, ಬೋಸೊಕ್ಕಿನ್ಯಾರು. ಎದಿಯಾಗ ಹೃದಯಾ ಇಲ್ಲೋರು. ಯ್ಯಾಪಾಟಿ ಹೊಡ್ದಾನ, ಮನುಷ್ಯ ಅಂತ ತಿಳ್ಕೊಂಡಾನೋ ದನಗಿನಾಂತ ತಿಳ್ಕೊಂಡಾನ'' ಸರ್ಪ ಗುಡುಗಿದ. ''ಯಾಕೋ ಮುದ್ಕ ಮುಕಳಾಗ ಹಲ್ಲ ಬಂದಾವೇನು. ಬ್ಯಾಡರು ಪಾಡ್ರಂತೇಳಿ ಜಾತಿ ಹಿಡದು ಮಾತಾಡೋ ತಾಕತ ಬಂತೇನು'' ಅಂತ ಗದರಿಸಿದೆ. ''ಯಪ್ಪಾ ತೆಪ್ಪಾತು, ನೀವು ಇಲ್ಲೇ ಅದಿರೇನ್ರೀ, ಸಂಕಟ ತಡಿಯಾಕ ಆಗದೆ ಹೊಟ್ಟಿ ಒಳಗಿಂದ ಹೊರಗ ಬಂದಬಿಟ್ತು, ನನ್ನ ಕ್ಷಮಾಮಾಡ್ರಿ'' ಅಂತ ನಮ್ಮಜ್ಜನಿಗಿಂತ ಸಣ್ಣೋನಿರಬೇಕು ಸರ್ಪ ಉದ್ದಕ ನನಕಾಲೀಗ ಬಿದ್ದ, ನನ್ನ ಅಸಲಿತ ಹೊರಗ ಬಿದ್ದಿದ್ದು ನನಗೆ ಕಳವಳ ಉಂಟಮಾಡಿತ್ತು. ನಾನು ಪಕ್ಕ ಮೂಲಭೂತವಾದಿ ಆದ್ರು ಮನುಷ್ಯರೆಲ್ಲಾ ಒಂದೇ ಅನ್ನೋ ಸೋಗು ಹಾಕ್ಕೊಂಡು ಅಡ್ಡಾಡ್ತೀದೀನಿ ಅನಿಸಿತು. ಯಾಕೋ ಬೇಜಾರಾತು, ಮುದುಕ ಸರ್ಪನ ಹಿಡಿದು ಮೇಲೆತ್ತಿದೆ. ಆತನ ಎದಿಯೊಳಗ ಹೆದರಿಕೆ ಮಡುಗಟ್ಟಿತ್ತು. ತಾನು ಬ್ಯಾಡ ಅಂದೆ ಅನ್ನೋ ಒಂದೇ ಒಂದು ಮಾತು ಹೊರಗ ಬಿತ್ತಂದ್ರ ಮುಂಜಾನಿ ಆಗೋದ್ರಾಗ ತಮ್ಮ ಹಟ್ಟಿ ಒಂದು ಮನೀನೂ ಇರಂಗಿಲ್ಲಾ ಅಂತೇಳಿ ಥರಥರ ನಡಗತೊಡಗಿದ.

ಬಹಳ ಹೊತ್ತಿನತನಕ ನಾನು ಅವರ ಹಟ್ಟಿ ತಾವ ಕುಂತಿದ್ದೆ. ಕೊಂಯ್ಯಾನ ಮೈಮ್ಯಾಲಿನ ಗಾಯಕ ಅರಿಶಿನಪುಡಿ ಜೇನುತುಪ್ಪ ಹಚ್ಚಿದೆ. ಆದ್ರೂ ಮನಸಿಗ ಸಮಾಧಾನ ಆಗಲಿಲ್ಲ. ನಾನು ಏಟ ಪ್ರಯತ್ನ ಪಟ್ರು



ನನ್ನೊಳಗಿನ ತನ್ನತನ ಹೊರಗ ಹಾಕಿಬಿಟ್ಟಿದ್ದೆ. ಮನಸ್ಸಿನ ಕಳವಳ ಹೆಚ್ಚಾಯಿತು. ಕೊಂಯ್ಯಾ ಬದಕತಾನೋ ಇಲ್ಲೋ ಅನ್ನೋ ಆತಂಕ ಹೆಚ್ಚಾತು. ಒಂದು ಹರಕ ಧೋತ್ರಕ್ಕ ನಮ್ಮ ನಮ್ಮೊಳಗಿನ ಮಂದಿಯೇ ಪರದಾಡೋದು ಕಂಡು ನನಗ ಬೇಜಾರಾಗಿತ್ತು. ಸಾಲದಕ ನಾನು ನನ್ನ ಅಹಾಂನ್ನ ಹೊರಹಾಕಿದ್ದೆ. ನನ್ನೊಳಗೆ ಅಪರಾಧಿ ಭಾವನೆ ಕಾಡಾಕಹತ್ತು. ಸರ್ಪಜ್ಜನ ತಾವ ಹೋಗಿ ಆತನ ಕಾಲು ಹಿಡ್ಕೊಂಡೆ ''ಯಜ್ಜ ನನ್ನ ಬಾಯಿಂದ ಬರಬಾರದಾಗಿದ್ದ ಮಾತುಗಳು ಬಂದ್ವು, ಈ ಆಂತರದೊಳಗೆ ನನಗ ನಂಬಿಕೆ ಇಲ್ಲಾ, ನನಗ ಉಳದಿದ್ದ ಇದೊಂದೆ ದಾರಿ. ಆ ಒಂದು ಕ್ಷಣ ನನ್ನ ಮನಸ್ಸಿನೊಳಗ ನಾನು ಮನುಷ್ಯ, ಬರಿ ಮನುಷ್ಯ ಅನ್ನೋದು ಮರೆತುಹೋಗಿತ್ತು. ನನ್ನ ಕ್ಷಮಿಸು'' ಅಂತೇಳಿ ನನ್ನ ಅಳಲನ್ನು ತೋಡಿಕೊಂಡೆ. ''ಯಪ್ಪಾ ಬಿಡ್ರಿ ನನಕಾಲ ಪಾಪ ಬರತೈತಿ ನಿಮಗ ನನ್ನಂತ ಹೊಲಿಯನ್ನ ಕಾಲ ಮುಟ್ಟಿದ್ರ'' ಅಂತೇಳಿ ಕೊಸರಕೊಂಡ. ನಾನು ಒಳಗೊಳಗೆ ಒದ್ದಾಡತೊಡಗಿದೆ ಎಂಥ ಕೆಲ್ಸ ಆಗಹೋತು ಅಂದುಕೊಳ್ಳತೊಡಗಿದೆ.

ರಾತ್ರಿ ಎಂಟಕ ಮಂದಿ ಉಣ್ಣಾಕ ಬರೋದು ನಿಂತಿತ್ತು. ಮಂದಿ ಹೋದಿಂದ ಮನಿಯಾನಾರೆಲ್ಲಾ ಉಂಡು ಆದಮ್ಯಾಲ ದೊಂಡಿ ಹಿಂತಿರುಗಿ ಬಂದ್ನು, ''ಯಪ್ಪ ಮುದಕನ ಆತ್ಮ ಇಲ್ಲೆ ಸುತ್ತಾಡಾಕ ಹತ್ಯತಿ. ಒಂದ ಕೆಲ್ಸ ಮಾಡ್ರಿ, ಕೊಂಯ್ಯಾ ಉಟ್ಟರೋ ಧೋತ್ರ ಇಳವಿ ಊರತಡಾದು ಸಣ್ಣ ಹುಡ್ರ ಸ್ಮಶಾನದ ತಾವ ಒಯ್ದು ಸುಟ್ಟು ಹಾಕ್ರಿ. ಹಂಗಾರ ಮುದಿಯನ ಆತ್ಮ ಮ್ಯಾಲ ಹೊಕೈತಿ'' ಅಂದಾಕಿನ ಹೊಂಟಹೋದ್ನು. ದೊಡಪ್ಪ, ಅಪ್ಪ, ಮಾವ ಕೈಯಾಗ ಹಿಡಿದಿದ್ದ ಎಲಿ ಹಿಡ್ಕೊಂಡು ಬಾಯಾನ ಅಡಕಿ ಜಗಿತ ಹರಿಜನ ಹಟ್ಟಿಗ ಓಡಿದ್ರು.

ಮಂದಿ ಓಡಿ ಬರೋದನ ನೋಡಿದ ಹರಿಜನ ಹಟ್ಟಿ ಮಂದಿ ಕೈಯಾಗ ಬಡಗಿ ಹಿಡ್ಕೊಂಡು ಒಂದ ಕಡೀಗ ಜಮಾಯಿಸಿದ್ರು. ''ಲೇ ತಮ್ಮಾ ಸಾಯೋದ ಒಂದ ದಿನ ಹುಟ್ಟೋದ ಒಂದ ದಿನ, ಅವರೇನಾರು ಮೈ ಕೈ ಮುಟ್ಟಿದ್ರ ಹಾಕ್ಕೆ ಬಿಡ್ರಿ. ಎಟದಿನಾಂತ ಹಿಂಗೆ ಅವಮಾನ ತಾಳ್ಕೊಂಡ ಬದಕೋದು. ಏನೋ ಉಡಾಕ ಇಲ್ದಕ ಹೆಣದ ಮ್ಯಾಲಿನ ಧೋತ್ರ ಉಟ್ಕೊಂಡಾನ, ಏನ ತೆಪ್ಪಾತು. ಎಮ್ಮಿ ಆಕಳ ಸತ್ತಾಗ ಪಸಂದಾಗೆ ಮಾತಾಡಿ ಎತ್ಕೊಂಡ ಹೋಗಾಕ ಅಂತಾರು. ಊರಾನ ಗೌಡ್ರ ಮಂದಿ ಅವರ ಮ್ಯಾಲ ಜಗಳಕ ಬಂದ್ರ ನಾವು ನೀವು ಅಣ್ಣತಮ್ಮಂದ್ರು ಇದ್ದಂಗ ನಮ್ಮ ನಮ್ಮೊಳ ಭೇದ ಯಾಕಂತಾರ, ಮೆಲ್ಲಗ ನಮ್ಮ ಗುಡ್ಲಿಗೆ ಬೆಂಕಿ ಇಡ್ತಾರ'' ಅಂತ ಮಂದಿಗೆಲ್ಲಾ ತಿಳಿಸಿ ಹೇಳಿದ ಸರ್ಪ. ಹಟ್ಟಿಮಂದಿ ಹೂಂ ಅಂದವರೆ ಕೊಂಯ್ಯಾನ ಮನಿ ಮುಂದ ಬಂದು ನಿಂತ್ರು. ದೊಡಪ್ಪ, ಮಾವ, ತಮ್ಮಂದಿರೆಲ್ಲಾ ಮಂದಿ ನೋಡಿ ನಿಂತ್ರು. ಅಲ್ಲೆ ಇದ್ದ ನಾನು ಮುಂದಾಗಬಹುದಾದ ಅನಾಹುತ ಊಹಿಸಿದವನೆ ಮುಂದಕ ಬಂದೆ, ''ಯಾಕ ಬಂದ್ರಿಲ್ಲಿ. ಕೊಂಯ್ಯಾನ ಹೆಣ ನೋಡಾಕೋ ಇಲ್ಲಾ ಅವನು ಉಟರೋ ಧೋತ್ರ ಮೈಲಿಗಿಯಾದ್ರೂ ತಗೊಂಡು ಹೋಗಾಕ. ಮನುಷ್ಯರ ರೂಪದಾಗಿರೊ ರಾಕ್ಷಸಮಂದಿ ನೀವು. ನಿಮ್ಮನ್ನ ಯಾವಾನು ಮನಿಯೊಳಗ ಬಿಡ್ತಾನು? ನೀವು ಯಾವ ಊರಿನ ಗೌಡಕಿ ಮಾಡೋರಂತ ನಿಮಗಿಂತ ಕೆಳಗಿರೋ ಮನುಷ್ಯನ ಹೆಣ ಬಿಳೋಹಂಗ ಹೊಡದ್ರಿ.'' ಸಿಟ್ಟಿಂದಲೆ ಹೇಳಿದೆ. ಮಂದಿ ಕೈಯಾಗಿನ ಬಡಗಿ ನೋಡಿ ದೊಡಪ್ಪ ಹೆದರಿದ್ರು. ಏಳೂರ ಜಗಳಗಂಟ ಮಾವ ಮಾತ್ರ ''ಯಾಕೋ ಕಡಕ್ಕಾಗಿ ಅವರ ಪರವಹಿಸಿ ಮಾತಾಡಾಕ ಹತ್ತಿ. ನಿಮ್ಮಜ್ಜನ ಆತ್ಮ ಮ್ಯಾಲ ಹೋಗಿಲ್ಲಂತ ದೊಂಡಿ ಬಂದ ಹೇಳಿದ್ನು, ಕೊಂಯ್ಯಾ ಹುಟ್ಟರೋ ಧೋತ್ರ ಒಯ್ದು ಸುಡುಗಾಡಿನೊಳಗ ಸುಡಾಕಂತ, ಅದಕ ಬಂದ್ವಿ'' ಅಂದ. ಏನಂತ ಹೇಳಾಕಂತ ತಿಳಿಲಿಲ್ಲಾ, ಕೊಂಯ್ಯಾ ಎಚ್ಚರ ತಪ್ಪಿ ಬಿದ್ದಿದ್ದ. ಧೋತ್ರ ಬಿಚ್ಚಾಕ ಮಂದಿ ಅವಸ್ರ ಮಾಡ್ಕೊಂತ ಮುಂದ ಬರ್ತಿದ್ರು. ನಾ ಎಷ್ಟ ಹೇಳಿದ್ರು ಈ ಮಂದಿಗೆ ತಿಳಿಯೋದಿಲ್ಲಾ. ಆಗಸರ ದೊಂಡಿ ನಮ್ಮೆಲ್ಲು ಜಾತಿಗಿಂತ ಶ್ರೇಷ್ಠರು ಅಂತ ತೋರಿಸಿಕೊಳ್ಳಾಕ ಹುಡಿರೋ ನಾಟಕ ಅಂತ ನನಗ ತಿಳಿತು. ಇನ್ನಮ್ಯಾಲ ಹೆಣದ ಮೇಲಿನ ಬಟ್ಟಿ ಈ ಮಾದರಮಂದಿ ಮುಟ್ಟಬಾರದು ಆ ಪರಿ ಮಾಡಾಕ ಹೂಡಿರೋ ಮತ್ತೊಂದು ನೆಪ. ಇದನ್ನ ಹೆಂಗ ಮಾಡಾಕ, ಅಂತೇಳಿ ಯೋಚನೆ ಮಾಡ್ದೆ. ಸದ್ಯಕ ತಲಿಗ ಏನೂ ಹೊಳಿಲಿಲ್ಲಾ. ಆದ್ರೂ ಈ ಮಂದಿ ತಲಿಯೊಳಗಿಂದ ''ನಮ್ಮ ಪಡಿಪಾಟ್ಲಯಾ ನನ ಶತ್ರುಗೂ ಬ್ಯಾಡ್ರಪ್ಪ. ಹಾಳಾದ ದ್ಯಾವ್ರೂ ನಮ್ಮನ್ನ ಮನುಷ್ಯರಾಗಿ ಹುಟ್ಟಿಸೋದ್ಕಿಂತ ಪಶುಪಕ್ಷಿಯಾಗಾರು ಹುಟ್ಟಿಸಿದ್ರ ಪಾಡಿತ್ತು'' ಅಂದ ಸರ್ಪ. ನಮ್ಮ ದೊಡಪ್ಪನಲ್ಲಿ ಏನಾರು ಬದಲಾವಣೆ ಆಕೈತೇನಂತ ನೋಡಿದೆ. ಅವನೇನು ದರಕಾರ ಮಾಡಲಿಲ್ಲಾ, ಯಾರು ಮಾತಾಡೋ ಗೋಜಿಗ ಹೋಗಲಿಲ್ಲಾ. ''ಹಿಂಗ್ಯಾಕಂತಿ ಸರ್ಪಜ್ಜ, ಮನುಷ್ಯನ ತಿಳ್ಕೊಳಾಕ ಮನುಷ್ಯನಲ್ಲಿರೋ ಮನಸಬೇಕು'' ಅಂದೆ. ಮಾವ-ದೊಡಪ್ಪಗ ಗಾಬರಿ ಆತು. ನಮ್ಮ ಮರ್ಯಾದಿ ತಗಿತಾನಂದವರೆ ''ನೋಡ್ರಪ್ಪ ಇದ್ದ ವಿಷಯ ಹೇಳಿವ್ನಿ, ಇನ್ನೂ ಬೇಗನೆ ಧೋತ್ರ ಬಿಚ್ಚಿಕೊಡೋ ಜವಾಬ್ದಾರಿ ನಿಮ್ಮದು ಅಂದ ದೊಡಪ್ಪ.'' ಏನಾದರೂ ಹೂಂನೆ ಅನ್ನೋ ಮಂದಿ ಏನೂ ಮಾತಾಡಲಿಲ್ಲ ಸುಖಾಸುಮ್ನೆ ಮೈ ಚರ್ಮ ಕಳ್ಕೊಂಡ ದೊಂಡಿಗ ಪರಿಸ್ಥಿತಿ ತಿಳಿಯಾಕಂತ ನಾನು,''ಅಜ್ಜನ ಆತ್ಮಾ ತಿರುಗಾಡೋದನ್ನ ನಾವು ನೋಡಾಕು. ಈ ಮಾತ ಹೇಳಿದೋರು ಬಂದು ಅದನ್ನು ತೋರಿಸಲಿ. ಆ ಮ್ಯಾಕ ಧೋತ್ರ ಬಿಚ್ಚಾನಂತ'' ಅಂದು ನೆರದ ಹಟ್ಟಿ ಮಂದಿ ಮಾರಿ ನೋಡಿದೆ. ನೆರದ ಮಂದಿಗ ಆಟ ಬೇಕಿತ್ತು, ಎಲ್ಲಾ ಹೌದು ಅಂದಬಿಟ್ರು. ದೊಡಪ್ಪ-ಮಾವ ಮಾರಿ ಮಾರಿ ನೋಡ್ಕೊಂಡ್ರು. ನನ್ನ ಸ್ವಭಾವ ತಿಳಿದಿದ್ದ ದೊಡಪ್ಪ ದೊಂಡಿನ ಕರಿ ಕಳಿಸಿದ.

ಹೇಳೋದೇನೊ ಒಂದು ಸಣ್ಣ ಸುಳ್ಳು ಹೇಳಿದ ದೊಂಡಿಗ ಬಾಯಿ ಒಣಗಿದಂತಾಗಿ ಮಾತು ಗಂಟಲೊಳಗ ಸಿಕ್ಕೊಂಡ್ತು. ''ಹೇಳಬೇ ಹಡಬಿ ಗುಟ್ಟಿದಾಕಿ, ಮಂದಿ ಜೀವದ ಕೂಡ ಆಟ ಆಡ್ತಿ. ನೀ ಏನೋ ಭಾರಿ ದೊಡ್ಡ ಕುಲದೊಳಂಗ ನಿಮ್ಮ ಬೇಳಿ ಬೇಯಿಸಿಕೊಳ್ಳಾಕ ಮುಗ್ಧ ಜನರಿಗೆ ಜಗಳ ಹಚ್ಚಿ, ಮಾತಾಡು, ತೋರ್ಸು ಮುದುಕನ ಆತ್ಮ ಎಲೈತಿ ನೋಡ್ತಾನು'' ಅಂದೆ. ''ಅದು ಹಂಗೆಲ್ಲಾ ಕಾಣಂಗಿಲ್ಲಾ. ಹಿಂದಕ ಯಾರಿಗೂ ಹಿಂಗ ಆಗಿತಂತೆ ಅವರು ಹೇಳಿದ ಮಾತನ್ನ ಹೇಳಿದೆ ಆಟೇಯಾ. ನಾ ಎಲ್ಲಿ ಆತ್ಮ ನೋಡಿನಂತ ಹೇಳಿನಿ'' ಅಂತೇಳಿ ಪಾರಾಗಾಕ ನೋಡಿದ್ಲು. ಮಾವ-ದೊಡಪ್ಪ ಆಕಿ ಪರ ವಹಿಸಿ ಮಾತಾಡಾಕ ನೋಡಿದ್ರು. ನಾನು ಒಪ್ಪಲಿಲ್ಲಾ, ಪರಿಸ್ಥಿತಿಯನ್ನು ತಿಳಿಸಿ ಹೇಳಿ ಮುಂದ್ಕ ಹಿಂಗಾಗದಂಗೆ ಮಾಡೋ ನಿರ್ಧಾರಕ ಬಂದೆ. ದೊಂಡಿ ಅಪರಾಧಿ ಹಂಗ ಮಾರಿ ಕೆಳಗ ಹಾಕಿದ್ಲು. ''ಈಗಾರ ತಿಳಿತೇನ್ರಪ್ಪ, ನಮ್ಮೊಳಗೆ ವಿಷ ಹಾಕೋ ಮಂದಿ ಗುಟ್ಟು ತನಗ ಬರೋದು ಬ್ಯಾರೇರು ಪಡ್ಕೊಂಡಾರಂತ ದೊಂಡಿ ಆಡಿದ ನಾಟಕ. ನೀವು ಅಂದ್ಕೊಂಡಿದೆಲ್ಲಾ ಸುಳ್ಳು. ಸ್ವರ್ಗ-ನರಕ ಪಾಪ ತೊಳದು ಪುಣ್ಯ ಕೊಡೋದು ನಮ್ಮನ್ನ ನಂಬಿಸಿ ಮೋಸ ಮಾಡೋ ಆಟ'' ಅಂತೇಳಿ ದೊಡ್ಡ ಭಾಷಣ ಶುರು ಮಾಡಿದ್ದೆ, ನನ್ನ ಮಾತು ಎಷ್ಟು ಮಂದಿ ಅರ್ಥ ಮಾಡಿಕೊಂಡ್ರೊ ಏನ ಕಥಿಯೊ. ಅಷ್ಟೊತ್ತಿಗ ಕೊಂಯ್ಯಾ ''ಯಪ್ಪ ಹೊಡಿಬ್ಯಾಡ್ರೋ ಉಡಾಕ ಇಲ್ಲಿದಕ ಹೆಣದ ಮ್ಯಾಲಿಂದು ಕೆಲ್ಸಕ ಬರಂಗಿಲ್ಲಾ ಅಗಸರು ಬರಾಕ ಮುಂಚೆ ನಾನೆ ಮುಟ್ಟಿದ್ರೆ ವಾಪಾಸ ಇಸ್ಕೊಳೊದಿಲ್ಲಾ ಅಂತಂದು ಉಟ್ಕೊಂಡೆ'' ಅಂತ ಕನವರಿಸತೊಡಗಿದ.

ಅಷ್ಟೊತ್ತಿನ ತನಕ ಪಸಂದಾಗೆ ನನ ಮಾತ ಕೇಳ್ತಿದ್ದ ಮಂದಿ ಓಡಿ ಅವನಾತಾವ ಹೋದವರೆ, ''ಕೊಂಯ್ಯಾ ಎದ್ದೇನೋ, ಮದ್ಲು ಧೋತ್ರ ಬಿಚ್ಚು. ಹಿಂದ್ಗಡೆ ಎಲ್ಲಾ ಹೇಳ್ತಿವು'' ಅಂದವರೆ ಅನಾಮತ್ತಾಗಿ ಎತ್ತಿ ಅವನು ಬರೆಬತ್ಲೆ ಅದಾನನ್ನೋ ಖಬರಿಲ್ದೆ ಮುದುಕನ ಧೋತ್ರ ಬಿಚ್ಚಿ ಅಪ್ಪನ ಕಡಿಗ ಬಿಸಾಕಿದ್ರು. ಏನ ಮಾಡ್ತಾರ ಈ ಜನ ಅಂತ ತಿಳಿಲಿಲ್ಲಾ, ಕೊಂಯ್ಯಾ ಬತ್ಲೆ ಬಿದ್ಕೊಂಡಿದ್ದ. ಸರ್ಪ ಬಂದವನೆ ''ದೊಂಡವ್ವ ನಮ್ಮನ್ನ ಪಾರಮಾಡ್ದೆ ನನತಾಯಿ, ಆ ಮುದುಕ ದೆವ್ವ ಆಗಿ ನಮ್ಮ ಹಟ್ಟಿ ಮಂದಿನ ಕಾಡ್ಸೋದ್ರಿಂದ ಬಚಾವ ಮಾಡ್ದೆ'' ಅಂದ. ನನಗ ತಲಿ ಸುತ್ತಿ ಬಂದಂಗಾತು. ಇಷ್ಟೊತ್ತಿಂದ ತಿಳಿಸಿ ಹೇಳಾಕ ಹತ್ತಿನಿ ಆದ್ರು ಈ ಮಂದಿ! ನನಗ ನಾಚಿಕಿ ಆತು. ದೊಡಪ್ಪ-ಮಾವ, ನನ್ನ ಸೋದರರು ಕೆಕ್ಕರಿಸಿ ನೋಡಿದ್ರು. ದೊಂಡಿ ನನ್ನ ಮಾರಿಗ ತಿವಿಹಂಗ ಕಿಲಕಿಲ ನಕ್ಕು ಹೊಂಟಹೋದ್ಲು. ನಾನ ಮಾತ್ರ ಅಲ್ಲೇ ಬಿದ್ದಿದ್ದ ಮುದುಕನ ಧೋತ್ರ-ಬತ್ಲೆ ಮಕ್ಕೊಂಡಿದ್ದ ಕೊಂಯ್ಯಾನ್ನ ನೋಡ್ದೆ. ಅವನ ಮೈಮ್ಯಾಲಿನ ಬಾಸಾಳಗಳು ಮಾದು ನನ್ನ ಹೃದಯದ ಮ್ಯಾಲ ಮೂಡಿದಂಗಾಗಿ ನೋವು ಅನಿಸಿ ಕಣ್ಣು ಮುಚ್ಚಿದೆ. ಹಟ್ಟಿ ಮಂದಿ ಒಬ್ಬೊಬ್ಬರಾಗೆ ಖಾಲಿಯಾದ್ರು. ಕೊಂಯ್ಯಾ ಅವನ ಹೇಣ್ತಿ ಚಿಕ್ಕಿ ಅವನ ಮಗಳು ಮತ್ತ ನಾನು ಅಪರಿಚಿತರಂಗೆ ಬಹಳ ಹೊತ್ತು ಕುಂತಿದ್ವಿ, ಯಾರು-ಯಾರಿಗೂ ಸಂಬಂಧ ಇಲ್ಲೋರ್ಹಂಗ.



ಶಾಂತಾನಾಯ್ಕ ಶಿರಗಾನಹಳ್ಳಿ

# ಅಮೆರಿಕದಲ್ಲಿ ಶೈಕ್ಷಣಿಕ ಸ್ವಾತಂತ್ರ್ಯದ ವಿರುದ್ಧ ಸಮರ

ಪ್ರೊ॥ ದಿನೇಶ್ ಹಾಸನ್

ಸ್ವಾತಂತ್ರ್ಯ ಮತ್ತು ಮಾನವ ಹಕ್ಕುಗಳನ್ನು ಬಹು ಉದಾರವಾಗಿ ಮಾನ್ಯ ಮಾಡುವ ಸರ್ಕಾರವೆಂದರೆ ಅಮೆರಿಕದ್ದು ಎಂಬ ಪ್ರಬಲ ಐತಿಹ್ಯ ಪ್ರಚಾರದಲ್ಲಿದೆ. ಆ ಸರ್ಕಾರದ ಘೋರ ರೂಪ ಕೇವಲ ಇರಾಕಿನ ಕಾರಾಗೃಹಗಳಲ್ಲಿ ಕಾಣಸಿಗುತ್ತದೆ ಎಂಬ ಭ್ರಮೆ ಬೇಡ. ಸ್ವತಃ ತನ್ನ ನಾಡಿನಲ್ಲೇ ಪ್ರಜೆಗಳನ್ನು ಗುಮಾನಿಯಿಂದ ನೋಡಿ ಹಿಂಸಿಸುವ ದೌರ್ಜನ್ಯ ಅಮೆರಿಕದ ಸರ್ಕಾರದ್ದು. ಸುಮಾರು ಮೂರು ದಶಕಗಳ ಕಾಲ ಅಮೆರಿಕದ ಒಂದು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿರುವ ಪ್ರೊ॥ ದಿನೇಶ್ ಅದನ್ನು ಶ್ರುತಪಡಿಸಿದ್ದಾರೆ.

**ನ್ಯೂ**ಯಾರ್ಕ್ ನಗರದ ವಿಶ್ವ ವಾಣಿಜ್ಯ ಕೇಂದ್ರದ ಧ್ವಂಸ ಸೆಪ್ಟೆಂಬರ್ ೧೧, ೨೦೦೧ರಂದು ನಡೆದಿದ್ದು ಸರ್ವವಿದಿತ ಸಮಾಚಾರ. ಅಷ್ಟೇ ವಿದಿತವಾಗಿರುವುದು ಸಂಯುಕ್ತ ಸಂಸ್ಥಾನಗಳ ರಕ್ಷಣಾ ನರಮಂಡಲವಾದ ಪೆಂಟಗನ್‌ನ ಮೇಲೆ ನಡೆದ ದಾಳಿ. ಸಾವಿರಾರು ಜನರ ಪ್ರಾಣ ತೆಗೆದುಕೊಂಡ ಈ ಭಯೋತ್ಪಾದಕ ಘಟನೆಗಳ ನಂತರ ಅಮೆರಿಕದ ರಾಷ್ಟ್ರೀಯ ಭದ್ರತೆ, ಅದರ ಸಾಗರೋತ್ತರ ಆಸಕ್ತಿಗಳನ್ನು ರಕ್ಷಿಸುವ ಅವಶ್ಯಕತೆ, ಮತ್ತು ನ್ಯೂಯಾರ್ಕ್-ಪೆಂಟಗನ್‌ಗಳಲ್ಲಿ ಸಂಭವಿಸಿದ ದುರಂತಗಳಿಗೆ ಕಾರಣವಾದ ಭಯೋತ್ಪಾದಕತೆಯನ್ನು ಕುರಿತು ಮಾತನಾಡದ ಜನವಿಲ್ಲ, ಸಂಘ ಸಂಸ್ಥೆಗಳಿಲ್ಲ. ಮಧ್ಯಪ್ರಾಚ್ಯದ ಬಂಧುಗಳೊಡನೆ ದೈಹಿಕ ಸಾಮ್ಯತೆ ಉಳ್ಳವರಿಗೆ, ಅಮೆರಿಕದ ವಿದೇಶಾಂಗ ನೀತಿಯನ್ನು ಸಂಶಯದಿಂದ ನೋಡಿದವರಿಗೆ, ಈ ಘಟನೆಗಳು ಸಂಭವಿಸಿದಾಗ ಎಲ್ಲೋ ಯಾರಿಗೂ ತಿಳಿಯದಂತೆ ಆಕಾಶದಲ್ಲಿ ಯಾನ ಮಾಡುತ್ತಿದ್ದ ದೇಶದ ಅಧ್ಯಕ್ಷನ ಪ್ರಜ್ಞಾಪೂರ್ಣತೆಯ ಬಗ್ಗೆ ಆತಂಕ ವ್ಯಕ್ತಪಡಿಸಿದವರಿಗೆ ಇದೊಂದು ಅತೀವ ಕಷ್ಟಕಾಲವಾಗಿತ್ತು. ಸಿಖ್ ಸಮುದಾಯಕ್ಕೆ ಸೇರಿದ ಇಬ್ಬರು ಭಾರತೀಯ ಸಂಜಾತರು ಕೊಲೆಯಾದ ಸಂಗತಿ ಈ ಪತ್ರಿಕೆಯ ಓದುಗರಿಗೆ ತಿಳಿದಿದೆ. ಎಲ್ಲ ಧಾರ್ಮಿಕ ಅಭ್ಯಾಸಗಳನ್ನೂ ಒಂದೇ ರೀತಿ ಮರ್ಯಾದಿಸುತ್ತೇವೆ ಎಂದು ಕೊಚ್ಚಿಕೊಳ್ಳುವ ಈ ದೇಶದಲ್ಲಿ ಕೆಲವು ಮಸೀದಿಗಳನ್ನು ಮೂರ್ಖ ಜನರು ಭ್ರಷ್ಟಗೊಳಿಸಿದ್ದು ಈಗ ಸಾಮಾನ್ಯ ವಿಚಾರ. ಧಾರ್ಮಿಕ ಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯ, ಶೈಕ್ಷಣಿಕ ಸ್ವಾತಂತ್ರ್ಯಗಳನ್ನು ರಕ್ಷಿಸುವುದರಲ್ಲಿ ತಾನು ಅಗ್ರಗಣ್ಯ ಎಂದು ಪ್ರತಿಪಾದಿಸುವ ಈ ದೇಶದಲ್ಲಿ ಸೆಪ್ಟೆಂಬರ್ ೧೧ರ ನಂತರ ಶೈಕ್ಷಣಿಕ ಸ್ವಾತಂತ್ರ್ಯಕ್ಕೆ ಹೇಗೆ ಧಕ್ಕೆಯಾಗಿದೆ, ಉನ್ನತ ಶಿಕ್ಷಣಕ್ಕೆ ಬದ್ಧವಾಗಿರುವ ಸಂಸ್ಥೆಗಳು ಅದೆಷ್ಟು ಹೀನಾಯವಾಗಿ ಸರ್ಕಾರಿ ದಬ್ಬಾಳಿಕೆಯನ್ನು ಮನ್ನಿಸಿವೆ ಮತ್ತು ಶೈಕ್ಷಣಿಕ ಸ್ವಾತಂತ್ರ್ಯ ಅಮೆರಿಕದಲ್ಲಿ ಎದುರಿಸಬೇಕಾದ ಸಮಸ್ಯೆಗಳ ವಿಶ್ಲೇಷಣೆ ಮಾಡುವುದು ಈ ಲೇಖನದ ಮೂಲ ಉದ್ದೇಶ.

ವಾಕ್‌ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಿದರೆ ಭಯೋತ್ಪಾದಕತೆಯನ್ನು ಮಟ್ಟ ಹಾಕಲು ಅನುಕೂಲ ಎನ್ನುವ ಬುಷ್ ಸರ್ಕಾರದ ನಂಬಿಕೆಯನ್ನು ಪ್ರಶ್ನಿಸಿದ ವಿಶ್ವವಿದ್ಯಾನಿಲಯಗಳ ಸಂಖ್ಯೆ ಬೆರಳೆಣಿಕೆಯಷ್ಟು. ದೇಶದ ವಿವಿಧ ಭಾಗಗಳಲ್ಲಿ ಕೊರಿಯಾಗಳಲ್ಲಿ ಅಮೆರಿಕದ ಹಸ್ತಕ್ಷೇಪವನ್ನು ವಿರೋಧಿಸಿದ, ಕಮ್ಯುನಿಸ್ಟ್ ವಿರೋಧಿ ಧೋರಣೆಯ ಹುಚ್ಚಿನಿಂದ ವಿಯೆಟ್ನಾಮ್‌ನಲ್ಲಿ ಅಮೆರಿಕ ನಡೆಸಿದ ಸಾಮೂಹಿಕ ಹತ್ಯೆಗಳ ಬಗ್ಗೆ ವಿರೋಧ ವ್ಯಕ್ತಪಡಿಸಿದ, ಅದಕ್ಕೂ ಮುಂಚೆ ಎರಡನೆಯ ಮಹಾಯುದ್ಧದಲ್ಲಿ ಅಮೆರಿಕದ ಸರ್ಕಾರದ ನೈತಿಕತೆಯನ್ನು ಪ್ರಶ್ನೆಯ ವಿಚಾರ ಸೀಮೆಯ ಹಾಳತಕ್ಕೆ ತರಲು ಪ್ರಯತ್ನಿಸಿದ ಅನೇಕ ಕಾಲೇಜ್ ಅಧ್ಯಾಪಕರು ತಮ್ಮ ಜೀವನ ನಿರ್ವಹಣೆ ಮಾಡಲು ಅಶಕ್ತರಾದರು. ಭಾರತದಲ್ಲಿ ಈಗ ಉದ್ಭವಿಸಿರುವ ಭಜರಂಗಿಗಳಂತೆ, ತೊಗಾಡಿಯಾ-ಮೋದಿಗಳಂತೆ, ಜೋ ಮೆಕಾರ್ತಿ ಎಂಬ ಸಂಸದ, ತನ್ನ ಸ್ನೇಹಿತ ನಿಕ್ಸನ್ ಎಂಬ ಪ್ರಪಂಚ ಭಕ್ಷಕನ ನೆರವಿನಿಂದ ಐವತ್ತರ ದಶಕದಲ್ಲಿ ಸಾವಿರಾರು ಚಿಂತಕ ದೇಶಭಕ್ತರ ದುಸ್ಥಿತಿಗೆ ಕಾರಣನಾದ. ಮೆಕಾರ್ತಿಯ ಚೇತನ ಇಂದೂ ನೂರಾರು ಕಾಲೇಜ್, ವಿಶ್ವವಿದ್ಯಾಲಯಗಳ ಆವರಣಗಳಲ್ಲಿ ಸಂತೋಷವಾಗಿ ಉಸಿರಾಡುತ್ತಿದೆ ಅನ್ನುವುದನ್ನು ಪ್ರಜ್ಞಾವಂತರು, ಉನ್ನತ ವ್ಯಾಸಂಗಕ್ಕೆ ಅಮೆರಿಕಕ್ಕೆ ಬರುವ ಆತ್ಮ ವಿವೇಚನೆಯುಳ್ಳ ಪ್ರತಿಭಾವಂತರು, ಹಕ್ಕುಗಳಿಗೆ ಹೋರಾಡುವ ಅನಾಮಿಕ ಹೆಂಗಸರನ್ನು ಪೋಟಾ, ಟಾಡಾಗಳ ಹೆಸರಿನಲ್ಲಿ ಹತ್ಯೆ ಮಾಡುವ ರಾಜಕಾರಣಿಗಳು ಗಮನಿಸಬೇಕು.

ಹೆನ್ರಿ ಡೇವಿಡ್ ಥೋರೋ ಗಾಂಧಿಯ ಆಧ್ಯಾತ್ಮಿಕ ಗುರುಗಳಲ್ಲಿ ಒಬ್ಬ ಎಂದು ನಾವು ಪಠ್ಯಪುಸ್ತಕಗಳಲ್ಲಿ ಓದುತ್ತೇವೆ. ತನ್ನ ಅಭಿಪ್ರಾಯಗಳನ್ನು ಯಾವುದೇ ಸರ್ಕಾರ ಜನತೆಯ ಮೇಲೆ ಹೇರಿದರೆ ಅದು ಸಂವಿಧಾನದ ಮೇಲೆ ಎಸಗಿದ ಅತ್ಯಾಚಾರ, ಹಿಂಸಾತ್ಮಕತೆಯ ಪ್ರತಿರೂಪ ಎಂದು ನಮ್ಮ ಬುದ್ಧಿಜೀವಿಗಳು ಕೂಗಾಡುವುದನ್ನು ನಾವು ಕೇಳುತ್ತೇವೆ. ಹೀಗೆಲ್ಲಾ ಮಾತಾಡುವಾಗ ನಮ್ಮ ಆದರ್ಶ ಮ್ಯಾಗ್ನಾ ಕಾರ್ಟಾ, ಅಮೆರಿಕದ ಸಂವಿಧಾನ. ಈ ಆದರ್ಶಗಳ ಮಾತೃಭೂಮಿ ಎಂದು ಹೊಗಳಲ್ಪಡುವ ಅಮೆರಿಕದ ನ್ಯೂ ಮೆಕ್ಸಿಕೊ ವಿಶ್ವವಿದ್ಯಾಲಯದಲ್ಲಿ ರಿಚರ್ಡ್ ಬರ್ಟೊಲ್ ಎಂಬ ಚರಿತ್ರೆಯ ಪ್ರಾಚಾರ್ಯ ತನ್ನ ಒಂದು ತರಗತಿಯಲ್ಲಿ ತಮಾಷೆಗಾಗಿ ಮಾತನಾಡುತ್ತಾ ''ಪೆಂಟಗನ್‌ನ ನಾಶಮಾಡಲು ಪ್ರಯತ್ನಿಸುವ ಎಲ್ಲರಿಗೂ ನನ್ನ ಮತ'' ಅಂದ ಎಂದು ವರದಿಯಾಯ್ತು. ಈ ಅಧ್ಯಾಪಕ ತಾನು ಹಾಗೆ ಮಾತಾಡಿದ್ದು ತಪ್ಪು ಎಂದು ಕ್ಷಮಾಪಣೆ ಕೇಳಿದ.

ಆದರೂ ಅವನ ವಿರುದ್ಧ ತನಿಖೆ ನಡೆಸಿ ಅವನ ವಿಶ್ವವಿದ್ಯಾನಿಲಯ ಅವನಿಗೆ ಛೀಮಾರಿ ಹಾಕಿತು. ಅವನ ಟೆನ್ಯೂರನ್ನು ಪರಿಶೀಲಿಸಲು ಒಂದು ಸಮಿತಿಯನ್ನು ನೇಮಿಸಿತು. ತನಗಿಂತ ಪ್ರತಿಷ್ಠಿತವಾದ ಸಂಸ್ಥೆಯ ವಿರುದ್ಧ ಹೋರಾಟ ನಡೆಸಲು ಸಂಪನ್ಮೂಲಗಳು ಇಲ್ಲದಿದ್ದರಿಂದ, ಆ ಅಧ್ಯಾಪಕ ಸ್ವಯಂಪ್ರೇರಣೆಯಿಂದ ನಿವೃತ್ತಿ ಹೊಂದಿದ. ನ್ಯೂಯಾರ್ಕ್‌ನ ಸಿಟಿ ಕಾಲೇಜ್‌ನ ಕೆಲವು ಅಧ್ಯಾಪಕರು ಅಮೆರಿಕದ ನವವಸಾಹತುಶಾಹಿಯನ್ನು ಪ್ರತಿಭಟಿಸಲು ಒಂದು ''ಟೀಚ್-ಇನ್'', ಕಲಿಸುವಿಕೆ ನಡೆಸಿದರು. ಈ ಅಧ್ಯಾಪಕರು ಭಯೋತ್ಪಾದಕರಿಗೆ ಕುಮ್ಮಕ್ಕು ನೀಡುತ್ತಿದ್ದಾರೆ ಎಂದು ಕಾಲೇಜಿನ ಅಧ್ಯಕ್ಷ ಗುಡುಗಿದ. ಆ ಕಾಲೇಜಿನ ಧರ್ಮದರ್ಶಿಗಳು ಈ ಅಧ್ಯಾಪಕರ ಕಡತಗಳಲ್ಲಿ ಅವರ ಬಡ್ತಿಗೆ ಅಡ್ಡಬರುವಂಥ ಹೇಳಿಕೆಗಳನ್ನು ಇಡಬಯಸಿದರು. ಧರ್ಮದರ್ಶಿಗಳ ಅಧ್ಯಕ್ಷ, ಅನುಭವಿ ಶಿಕ್ಷಣ ತಜ್ಞ, ಅರ್ನೊ ಶ್ಮಿಟ್ ''ವಾಕ್‌ಸ್ವಾತಂತ್ರ್ಯವಿಲ್ಲದೆ ಯಾವ ಉನ್ನತ ಶಿಕ್ಷಣ ಸಂಸ್ಥೆಯೂ ತನ್ನ ಹೆಸರಿಗೆ ಅರ್ಹವಾಗಲಾರದು'' ಎಂದು ಸಾರ್ವತ್ರಿಕವಾಗಿ ಘೋಷಿಸಿ ಈ ಕೊಳಕು ನಾಟಕಕ್ಕೆ ತೆರೆ ಎಳೆದ.

ವಸಾಹತುಶಾಹಿಯ, ಬಂಡವಾಳಶಾಹಿಯ ಕುತಂತ್ರಗಳು ಹೇಗೆ ಸಂಸ್ಕೃತಿಯ ಹೆಸರಿನಲ್ಲಿ ಅಡಗಿಕೊಂಡು ನಮ್ಮ ವೈಚಾರಿಕತೆಯನ್ನು ವಿರೂಪಗೊಳಿಸಿ ಸದ್ಯಕ್ಕೆ ಅಧಿಕಾರದಲ್ಲಿರುವ ಸ್ವಾರ್ಥ ವ್ಯವಸ್ಥೆಗಳಿಗೆ ಪ್ರಜ್ಞಾಪೂರ್ವಕವಾಗಿ ಅನುಮೋದನೆ ನೀಡಲು ನಮ್ಮನ್ನು ಪ್ರೇರೇಪಿಸುತ್ತವೆ ಅನ್ನುವ ಕಟುಸತ್ಯಗಳನ್ನು ಬಯಲಿಗೆಳೆದ ಎಡ್ವರ್ಡ್ ಸೈದ್‌ನ ಕೊಲಂಬಿಯಾ ವಿಶ್ವವಿದ್ಯಾಲಯ ಕೂಡ ವೈಚಾರಿಕತೆಯ ವಿರುದ್ಧ ನಡೆಸುವ ಪಿತೂರಿಗಳಿಗೆ ಅಪವಾದವಲ್ಲ. ಪ್ಯಾಲೆಸ್ಟೀನ್‌ಗೆ ಸ್ವಾಯತ್ತತೆ ಬೇಕು ಎಂದು ಹೇಳಿದ ಕಾರಣ ಸೈದ್ ಸಾಕಷ್ಟು

ಸ್ವಯಂಘೋಷಿತ ಬುದ್ಧಿಜೀವಿಗಳ ಶತ್ರುವಾಗಿದ್ದ. ಅಲ್ಲಿಯ ಮಾನವಶಾಸ್ತ್ರದ ಅಧ್ಯಾಪಕ, ನಿಕೊಲಸ್‌ನ ಜನೋವ ಎಂಬಾತ, ಅಮೆರಿಕದ ಶಸ್ತ್ರಪಡೆಗಳು ಬೇರೆ ದೇಶಗಳಲ್ಲಿ ಸೋಲುವುದು ಪ್ರಜಾಪ್ರಭುತ್ವಕ್ಕೆ ಇಂಬುಕೊಟ್ಟಂತೆ ಎಂದು ಒಮ್ಮೆ ಹೇಳಿದ. ಇಸ್ರೇಲಿನ ಆಕ್ರಮಣಕಾರಿ, ದಮನಕಾರಿ ಪ್ರವೃತ್ತಿಗಳ ಬಗ್ಗೆಯೂ ಆತ ಜನಪ್ರಿಯವಲ್ಲದ ಮಾತುಗಳನ್ನು ಆಡಿದ್ದ. ಅವನ ವಿಶ್ವವಿದ್ಯಾಲಯದ ಹಳೆಯ ವಿದ್ಯಾರ್ಥಿಗಳು ಅವನನ್ನು ಕೂಡಲೇ ಕೆಲಸದಿಂದ ವಜಾ ಮಾಡಲು ಒತ್ತಡ ತಂದರು. ಅಮೆರಿಕದ ಪ್ರತಿನಿಧಿ ಸಭೆಯ ನೂರು ಸದಸ್ಯರು ಅವರ ರಾಜೀನಾಮೆ ಕೇಳಿ ಠರಾವು ಹೊರಡಿಸಿದರು. ಆ ಶಾಲೆಯ ಅಧ್ಯಕ್ಷ, ಲೀ ಬೋಲಿಂಗರ್ ಹೇಳಿದ್ದು ಇದು : ''ಈ ವ್ಯಕ್ತಿಯ ಅಭಿಪ್ರಾಯಗಳನ್ನು ನಾನು ಒಪ್ಪಿಕೊಳ್ಳುವುದಿಲ್ಲ. ಆದರೆ ಅವನ ವಿರುದ್ಧ ಕ್ರಮ ಜರುಗಿಸುವುದು ಶೈಕ್ಷಣಿಕ ಸ್ವಾತಂತ್ರ್ಯವನ್ನು ವಿರೋಧಿಸುವುದಕ್ಕೆ ಸಮಾನ.'' ಕನ್ನಡವನ್ನೇ ಉಸಿರಾಗಿಟ್ಟುಕೊಂಡಿದ್ದ ಹಾ. ಮಾ. ನಾಯಕರನ್ನು ಬ್ಯಾನರ್ಜಿ ಎಂಬ ನೌಕರಶಾಹಿಯ ಆಳೊಬ್ಬ ಹೀಗೆಯೇ ಗುಲ್ಬರ್ಗಾ ವಿಶ್ವವಿದ್ಯಾನಿಲಯದಿಂದ ನಿರ್ಗಮಿಸುವಂತೆ ಮಾಡಿದ್ದ ಎನ್ನುವುದನ್ನು ನೆನಪಿಸಿಕೊಂಡರೆ, ಇಡೀ ಕನ್ನಡ ಜನತೆ ತಲೆ ತಗ್ಗಿಸಬೇಕು.

ಅಂಡ್ ಅಬ್‌ಸ್ಟ್ರಕ್ಟ್ ಟೆರರಿಸಮ್'') ಮತ್ತು ಸೆವೀಸ್ (ಸ್ಟೂಡೆಂಟ್ ಎಕ್ಸ್‌ಚೇಂಜ್ ಅಂಡ್ ವಿಸಿಟರ್ ಇನ್‌ಫರ್‌ಮೇಶನ್ ಸರ್ವಿಸ್) ಎಂಬ ಗಣಕೀಕೃತ ಪ್ರೋಗ್ರಾಮ್ ಅಮೆರಿಕಕ್ಕೆ ಬರುವ ಎಲ್ಲ ಪಂಡಿತರ ಮತ್ತು ಜ್ಞಾನಾರ್ಥಿಗಳ ಚಲನವಲನಗಳನ್ನು ಪರೀಕ್ಷಿಸುತ್ತವೆ. ಅಮೆರಿಕದ ಬಾಯ್ದುಂಬುಲವನ್ನೇ ಜೀವನಾಧಾರವಾಗಿ ಮಾಡಿಕೊಂಡಿರುವ ಪಾಕಿಸ್ತಾನ, ಕುವೈತ್, ಈಜಿಪ್ಟ್, ಇಂಡೊನೇಶಿಯ ಮುಂತಾದ ದೇಶಗಳಿಂದ ಬರುವ ವಿದ್ಯಾರ್ಥಿಗಳನ್ನು ಕೂಡ ವೇಷಧಾರಿ ಶತ್ರುಗಳಂತೆ ನೋಡುವ ಸ್ವಯಂಭೀತಿಯನ್ನು ಬುಷ್ ಸರ್ಕಾರ ದೇಶದಲ್ಲಿ ಎಲ್ಲೆಡೆ ಹುಟ್ಟಿಹಾಕಿದೆ. ಈ ಕಾಯಿದೆಗಳು ಯಾವ ವಿದ್ಯಾರ್ಥಿ ಯಾವ ಪುಸ್ತಕಗಳನ್ನು, ಲೇಖನಗಳನ್ನು ಓದುತ್ತಾನೆ ಎನ್ನುವ ಮಾಹಿತಿಯನ್ನು ಪುಸ್ತಕ ಭಂಡಾರಗಳಿಂದ, ಅಂಗಡಿಗಳಿಂದ, ಅವನಿಗೆ ತಿಳಿಸದೆ, ಸಂಗ್ರಹಿಸುವ ಹಕ್ಕನ್ನು ಸರ್ಕಾರಕ್ಕೆ ನೀಡಿವೆ.

ಶೈಕ್ಷಣಿಕ ಸ್ವಾತಂತ್ರ್ಯದ ಮೇಲೆ ಬುಷ್ ಮಾಡಿರುವ ಹಲ್ಲೆಯನ್ನು ಪ್ರತಿಭಟಿಸಲು ಅಮೆರಿಕದಲ್ಲಿ ಬಹುಪಾಲು ಉನ್ನತ ಶಿಕ್ಷಣದಲ್ಲಿ ಭಾಗವಹಿಸುವವರು ಮಾಡಿರುವುದು ಏನು ? ಉತ್ತರ : ಹೆಚ್ಚು ಕಡಿಮೆ ಸೊನ್ನೆ. ನನ್ನ ಕ್ಯಾಂಪಸ್‌ನಲ್ಲಂತೂ ಇದರ ಬಗ್ಗೆ ಸೊಲ್ಲು ಇಲ್ಲವೇ ಇಲ್ಲ. ದೈವವಶಾತ್, ತುಂಬಾ ಮುಖ್ಯವಾದ ಕಾಲೇಜ್ ಅಧ್ಯಾಪಕರ

ಈ ಲೇಖನಕ್ಕೆ ಮುಖ್ಯ ಆಧಾರ 'ಅಕಡೆಮಿ' ಎಂಬ ನಿಯತಕಾಲಿಕೆ, ಅಮೆರಿಕಾದ ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರ ಸಂಘದ ಪ್ರಕಟಣೆ. ಅಮೆರಿಕಾದ ಬೌದ್ಧಿಕ ಪ್ರಪಂಚ ಸಂಕುಚಿತಗೊಳ್ಳುತ್ತಿದೆ. ಆಂತರಿಕ ಭದ್ರತೆಯ ಸಚಿವಾಲಯ ಇತ್ತೀಚಿನವರೆಗೆ ಹೇಳುತ್ತಿತ್ತು : ಲಿಬ್ಯಾ, ಸಿರಿಯಾ ಮುಂತಾದ ದೇಶಗಳಿಂದ ಯಾರಾದರೂ ಅಮೆರಿಕಾದ ನಿಯತಕಾಲಿಕೆಗಳಿಗೆ ಲೇಖನ ಕಳಿಸಿದರೆ ಅವನ್ನು ಸಂಪಾದಿಸುವುದೂ ಒಂದೇ, ಭಯೋತ್ಪಾದನೆಗೆ ಕುಮ್ಮಕ್ಕು ಕೊಡುವುದೂ ಒಂದೇ, ಎಂದು. ಈಗ ಒಂದು ಹೆಜ್ಜೆ ಮುಂದೆ ಹೋಗಿ ಹೇಳುತ್ತಿದೆ : ಪಶ್ಚಿಮ ಏಷ್ಯಾ, ಭಾರತ, ಮುಂತಾದ ದೇಶಗಳಿಂದ ಬಂದ ವಿದ್ಯಾರ್ಥಿಗಳು ರಾಷ್ಟ್ರೀಯ ಭದ್ರತೆಗೆ ಸಂಬಂಧಿಸಿದ ಯಾವುದೇ ವಿಷಯಗಳನ್ನು ಕುರಿತಂತೆ ಸಂಶೋಧನೆಯಲ್ಲಿ ತೊಡಗಲು ಅವಕಾಶ ಕೂಡದು, ಎಂದು. ಅಂಗಡಿಗಳಿಂದ ಇವರೆಲ್ಲಾ ಏನೇ ಪುಸ್ತಕ ಕೊಂಡರೂ ಅದರ ಮಾಹಿತಿಯನ್ನು ಮಾಲಿಕರು ಸರ್ಕಾರದ ಭದ್ರತಾ ವಿಭಾಗಕ್ಕೆ ತಿಳಿಸಬೇಕು. ಇದು ಅಮೆರಿಕಾದ ಅದ್ಭುತ ಸ್ವಾತಂತ್ರ್ಯ !

ಇರಾಕಿನ ಮೇಲೆ ಬುಷ್ ಯುದ್ಧ ಘೋಷಿಸಿದಾಗ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಆದೇಶವೊಂದು ಹೊರಬಿದ್ದಿತ್ತು : ಇದನ್ನು ಕುರಿತಂತೆ ಅಧ್ಯಾಪಕರು ಯಾರೂ ತರಗತಿಗಳಲ್ಲಿ ಚರ್ಚೆ ನಡೆಸಬಾರದು, ಎಂದು. ''ಯುವ ರಿಪಬ್ಲಿಕನ್ನರು'' ಎಂಬ ಭಜರಂಗಿಗಳು ಈಗಲೂ ವಿಶ್ವವಿದ್ಯಾನಿಲಯಗಳ ಪತ್ರಿಕೆಗಳಲ್ಲಿ ಪುಟಗಟ್ಟಲೆ ಜಾಹಿರಾತು ನೀಡುತ್ತಿರುತ್ತಾರೆ : ಅಮೆರಿಕಾದ ಅಧ್ಯಕ್ಷನ ನೀತಿಗಳನ್ನು ಟೀಕಿಸುವ ಅಧ್ಯಾಪಕರನ್ನು ತರಾಟೆಗೆ ತೆಗೆದುಕೊಳ್ಳಬೇಕು, ಎಂದು. ಸೋವಿಯೆತ್ ಒಕ್ಕೂಟದಲ್ಲಿ ಸೊಲ್ಜೆನಿತ್ಸಿನ್ ಅಂಥವನಿಗೆ ಸ್ವಾತಂತ್ರ್ಯ ಮೊಟಕುಗೊಳಿಸಲಾಗಿದೆಯೆಂದು ಅರಚುತ್ತಿದ್ದ ದೇಶ ಅಮೆರಿಕಾ. ಸ್ವತಃ ಅಮೆರಿಕಾದಲ್ಲಿ ಬೌದ್ಧಿಕ ಸ್ವಾತಂತ್ರ್ಯ ಎಷ್ಟು ಕೆಳಮಟ್ಟದ್ದೆಂಬುದನ್ನು ಹವರ್ಡ್ ಫಾಸ್ಟ್ ನಾಲ್ಕು ದಶಕಗಳ ಹಿಂದೆ 'ಸೈಲಾಸ್ ಟಿಂಬರ್ಮನ್' ಎಂಬ ಕಾದಂಬರಿಯಲ್ಲಿ ವಿವರಿಸಿದ್ದ.

ಸೈದ್‌ನನ್ನು ನೆನಪಿಸಿಕೊಳ್ಳುವಾಗ, ಪ್ಯಾಲೆಸ್ಟೀನ್ ಮೂಲದ ಸಾಮಿ ಅಲ್-ಅರಿಯನ್ ಎಂಬಾತನ ಕತೆ ಕೇಳೋಣ. ದಕ್ಷಿಣ ಫ್ಲೋರಿಡಾ ವಿಶ್ವವಿದ್ಯಾಲಯದಲ್ಲಿ ಇಪ್ಪತ್ತು ವರ್ಷ ಕಂಪ್ಯೂಟರ್ ಸೈನ್ಸ್ ಪಾಠ ಮಾಡಿದ ಈತ ಈಗ ಜೈಲಿನಲ್ಲಿ ಕೊಳೆಯುತ್ತಿದ್ದಾನೆ. ಉನ್ನತ ವ್ಯಾಸಂಗದಲ್ಲಿ ಟೆನ್ಯೂರ್ ಎಂದರೆ ಅಮೆರಿಕದಲ್ಲಿ ಜೀವದುಸಿರು ಇದ್ದಂತೆ. ಅದನ್ನು ಅನೂರ್ಜಿತಗೊಳಿಸಲು ಭಗೀರಥ ಪ್ರಯತ್ನ ಮಾಡಿದರೂ ಸಾಲದು.

ಅಲ್ ಅರಿಯನ್‌ನ ಅಪರಾಧ : ''ಒಂದು ಪ್ರಮುಖ ಟಿ.ವಿ. ಮಾಧ್ಯಮದಲ್ಲಿ ಇಸ್ರೇಲ್ ವಿರುದ್ಧ ಒಂದು ಕಾಲದಲ್ಲಿ ಮಾತಾಡಿದ್ದೆ'' ಎಂದು ಒಪ್ಪಿಕೊಂಡಿದ್ದು. ಈ ಅಧ್ಯಾಪಕನ ಮೇಲಿನ ಆಪಾದನೆಗಳ ನಡುವೆ ಆತ ಭಯೋತ್ಪಾದಕರ ಸಂಘದ ಸಂಪರ್ಕ ಹೊಂದಿದ್ದಾನೆ ಎನ್ನುವುದೂ ಇದೆ.

ನಾನಿಲ್ಲಿ ಹೆಸರಿಸಿರುವುದು ಕೆಲವು ಪ್ರಮುಖ ಕೇಸುಗಳು ಮಾತ್ರ. ಛೀಮಾರಿ ಹಾಕುವುದು, ಕೃತ್ರಿಮ ಅಪವಾದಗಳನ್ನು ಸೃಷ್ಟಿಸಿ ವ್ಯಕ್ತಿ ಸ್ವಾತಂತ್ರ್ಯಹರಣ ಮಾಡುವುದು, ಇವೆಲ್ಲಾ ಬುಷ್ ಸರ್ಕಾರದ ಒಂದು ಮುಖ ಮಾತ್ರ. ''ಹೋಮ್‌ಲ್ಯಾಂಡ್ ಸೆಕ್ಯೂರಿಟಿ'' ಎನ್ನುವ ಇಲಾಖೆ ಎಲ್ಲ ವೈಜ್ಞಾನಿಕ ಜರ್ನಲ್‌ಗಳ ಮೇಲೆ ಕಣ್ಣಿಡುತ್ತದೆ. ಪೇಟ್ರಿಯಟ್ ಆ್ಯಕ್ಟ್ (ಅದರ ನಿಜ ನಾಮ ''ಯುನೈಟಿಂಗ್ ಅಂಡ್ ಸ್ಟ್ರೆಂತನಿಂಗ್ ಅಮೆರಿಕ ಬೈ ಪ್ರೊವೈಡಿಂಗ್ ಅಪ್ರಾಪ್ರಿಯೆಟ್ ಟೂಲ್ಸ್ ರಿಕ್ವಯರ್ಡ್ ಟು ಇಂಟರ್‌ಸೆಪ್ಟ್

ಸಂಘ, ದಿ ಅಮೆರಿಕನ್ ಅಸೋಸಿಯೇಷನ್ ಆಫ್ ಯೂನಿವರ್ಸಿಟಿ ಪ್ರೊಫೆಸರ್ಸ್ ಈ ಸಂದರ್ಭವನ್ನು ಧೈರ್ಯವಾಗಿ ಎದುರಿಸುತ್ತಿದೆ. ಮೆಕಾರ್ಥಿ ಯುಗ ಮರುಕಳಿಸದಂತೆ ಮಾಡುವುದು ಅದರ ಮುಖ್ಯ ಉದ್ದೇಶ. ರಾಷ್ಟ್ರೀಯ ಭದ್ರತೆ ಮತ್ತು ಮುಕ್ತ ಸಂಶೋಧನೆ ಮತ್ತು ಜ್ಞಾನ ಸಂಪಾದನೆ ಪರಸ್ಪರ ವಿರೋಧಿಗಳಲ್ಲ ಎನ್ನುವ ಮಹಾಧ್ಯೇಯ ಅದರದು. ಕೇವಲ ಸಂಬಳ, ಭತ್ಯ, ಸೌಲಭ್ಯಗಳ ಚಿಂತೆಯಲ್ಲಿ ಮುಳುಗಿರುವ ನಮ್ಮ ನಾಡಿನ ಅಧ್ಯಾಪಕರು ರಾಜಕೀಯ ಆಮಿಷಗಳಿಗೆ ಒಳಗಾಗದೆ, ಕೋಮುವಾದವನ್ನು ತಿರಸ್ಕರಿಸುವ ಮುಖವಾಡ ಧರಿಸಿ ಇರುವ ಸರ್ಕಾರವನ್ನು ಬೆಂಬಲಿಸದೆ, ಸ್ವಾತಂತ್ರ್ಯ ಮತ್ತು ನಮ್ಮ ವಿದ್ಯಾರ್ಥಿಗಳ ಬೌದ್ಧಿಕ ಬೆಳವಣಿಗೆಯ ಮೇಲೆ ಹಿಡಿತ ಹೊಂದಿರುವ ಯುಜಿಸಿ, ಎಸ್ಮಾ, ಟಾಡಾ ವಿರುದ್ಧ ಜನರ ನಂಬಿಕೆಗಳನ್ನು ರೂಪಿಸಿ ನಮ್ಮ ತತ್ವಗಳಿಗೆ ಹೇಗೆ ಋಣ ತೀರಿಸುತ್ತಾರೆ ಎಂದು ನೋಡಬೇಕು. ನಮಗೆ ಅನುಕೂಲ ಅಥವಾ ಸಮಯವಿಲ್ಲ ಎಂದು ಯಥಾಸ್ಥಿತಿಯನ್ನು ದೃಢೀಕರಿಸುವಂಥ ಹೇಡಿತನಕ್ಕಿಂತ ಹೆಚ್ಚಾದ್ದು ಬೇರೊಂದಿಲ್ಲ.

*(ಹಸ್ತಪ್ರತಿ ಸಿದ್ಧಗೊಳಿಸಿದ್ದು : ಬಿ. ಮೈತ್ರಿ)*

**ಪ್ರೊ|| ದಿನೇಶ್ ಹಾಸನ್**
ನಂ. ೮೨೨, ಸ್ಟಬ್ಸ್ ಮಿಲ್ಸ್ ರಸ್ತೆ, ಲೆಬನಾನ್, ಓಹಿಯೊ, ಯು.ಎಸ್.ಎ.

# 'ಹಿಂದುತ್ವ'ದ ಸ್ವರೂಪ

ಇಂಡಿಯಾದಲ್ಲಿ 'ಹಿಂದುತ್ವ'ದ ಅಸ್ತಿತ್ವಕ್ಕೆ ಮತ್ತು ಬೆಳವಣಿಗೆಗೆ ಅನೌಪಚಾರಿಕವಾಗಿ ಒಂದು ಶತಮಾನದ ಇತಿಹಾಸವಿದೆ. ಔಪಚಾರಿಕವಾಗಿ ಅದನ್ನು ೧೯೨೫ರ ಆರೆಸ್ಸೆಸ್‌ನ ಹುಟ್ಟಿನೊಂದಿಗೆ ಗುರುತಿಸುವ ಪರಿಪಾಠವಿದೆ. ಈ ಸಂಬಂಧವಾಗಿ ಕಳೆದ ಒಂದು ಶತಮಾನದ ಇಂಡಿಯಾದ ರಾಜಕೀಯ-ಆರ್ಥಿಕ ಪಲ್ಲಟಗಳ ಭೌತಿಕ ಸ್ಥಿತ್ಯಂತರಗಳು ಮತ್ತು ಅದಕ್ಕೆ ಅನುಗುಣವಾಗಿ ರೂಪಿತವಾದ ವೈಚಾರಿಕ ನೆಲೆಗಳನ್ನು ಒಟ್ಟೊಟ್ಟಿಗೆ ಪರಿಗಣಿಸುವ ಅಗತ್ಯವಿದೆ.

'ಹಿಂದುತ್ವ'ವನ್ನು ಇದುವರೆಗೆ ಒಂದು ವರ್ಣಕ್ಕೆ, ಒಂದು ಮತಕ್ಕೆ, ಒಂದು ಧರ್ಮಕ್ಕೆ ಸೀಮಿತಮಾಡಿ ಅರ್ಥೈಸಲಾಗಿದೆ. ಜನಾಂಗಿಕ ಮತ್ತು ಗ್ರಾಂಥಿಕ ದಿವಂಗತ ಲಕ್ಷಣಗಳನ್ನು ಪಟ್ಟಿ ಮಾಡಿ ಅದರ ಮೂಲಕ 'ಹಿಂದುತ್ವ'ದ ಸ್ವರೂಪವನ್ನು ತಿಳಿಯುವ ಕೆಲಸ ನಡೆದಿದೆ. 'ಹಿಂದುತ್ವ'ವು ಹಳೆಯ ಜಮೀನ್ದಾರಿಕೆಯೊಂದಿಗೆ, ವಸಾಹತುಶಾಹಿ ವಿರೋಧಿ ಹೋರಾಟದೊಂದಿಗೆ, ಅಧಿಕಾರ ಹಸ್ತಾಂತರದ ನಂತರ, ನವವಸಾಹತು ಶಾಹಿಯೊಂದಿಗೆ ಮತ್ತು ಇಂದು ಸರ್ಕಾರೇತರ ಸಂಘಗಳೊಂದಿಗೆ ಹೊಂದಿರುವ ಸಂಬಂಧಗಳ ಆಯಾಮಗಳನ್ನು ಪರಿಗಣಿಸದೆ, ಕೇವಲ ಪುರೋಹಿತಶಾಹಿ, ಬ್ರಾಹ್ಮಣಶಾಹಿ, ವೈದಿಕಶಾಹಿ ಮುಂತಾಗಿ ಶಬ್ದಗಳನ್ನು ಹಿಡಿದು ನೆಗೆದಾಡುವ ಹೋರಾಟವು ಇದುವರೆಗೆ ಗಾಳಿಯೊಂದಿಗೆ ಗುದ್ದಾಡಿದಂತೆ ಆಗಿದೆ ಹಾಗೂ ಅದರ ಬೆಳವಣಿಗೆಗೆ ನೀರೆರೆದು ಪೋಷಿಸಿದಂತಾಗಿದೆ.

ಐತಿಹಾಸಿಕವಾಗಿ ಹಿಂದುತ್ವದ ಬೆಳವಣಿಗೆಯಲ್ಲಿ ಮೂರು ಹಂತಗಳನ್ನು ಗುರುತಿಸಬಹುದು. ಅ. ಅಧಿಕಾರ ಹಸ್ತಾಂತರದ ಪೂರ್ವ, ಆ. ಅಧಿಕಾರ ಹಸ್ತಾಂತರದ ನಂತರ, ಇ. ೯೦ರ ದಶಕದ ನಂತರ.

**೧. ಅಧಿಕಾರ ಹಸ್ತಾಂತರದ ಪೂರ್ವ :** ೧೯೪೭ಕ್ಕಿಂತ ಮೊದಲು ಭಾರತದಲ್ಲಿ ವಸಾಹತುಶಾಹಿ ವಿರೋಧಿ ಹೋರಾಟ ನಡೆದಿತ್ತು, ಅದರಲ್ಲಿ ಅನೇಕ ಕವಲುಗಳಿದ್ದವು. ಬ್ರಿಟಿಷರಿಗೆ ಭಾರತದ ವಿವಿಧ ಸ್ತರದ ಜನತೆಯ ಮನೋಭೂಮಿಕೆಯನ್ನು ಅರಿಯುವ ಅಗತ್ಯವಿತ್ತು, ಇದಕ್ಕಾಗಿ ಅವರು ಒಂದು ಕಡೆ ಮೌಖಿಕ ಸಾಹಿತ್ಯವನ್ನು ಸಂಪಾದಿಸಿದರು. ಮತ್ತೊಂದು ಕಡೆ ಲಿಖಿತ ಸಾಹಿತ್ಯವನ್ನು ಮುದ್ರಣ ರೂಪಕ್ಕೆ ತಂದರು. ಇವುಗಳಲ್ಲಿ ಭಗವದ್ಗೀತೆಯೂ ಮುಖ್ಯ ಕೃತಿಯಾಗಿತ್ತು. ಭಗವದ್ಗೀತೆಯಿಂದ ಬ್ರಿಟಿಷರಿಗೆ ಏನು ಲಾಭ ಆಯಿತು ಎಂಬುದಕ್ಕಿಂತಲೂ ಹೆಚ್ಚಾಗಿ ಇದು ಗಾಂಧಿ ಮೊದಲಾದವರಿಗೆ ಭಾರತದ ಜನತೆಯನ್ನು ಅದರಲ್ಲೂ ಮಧ್ಯಮ ವರ್ಗವನ್ನು ಸಂಘಟಿಸಲು ಒಂದು ಪ್ರಣಾಳಿಕೆಯಾಯಿತು. ಗಾಂಧಿ ಅನುಯಾಯಿಗಳ ಗುಂಪು ಭಗವದ್ಗೀತೆಯಲ್ಲಿ ಬ್ರಿಟಿಷ್ ವಿರೋಧಿ ಚಿಂತನೆಗಳನ್ನು ಕಂಡಿತು. ಅವರು ಇದನ್ನು ತಮ್ಮ ಹೋರಾಟಕ್ಕೆ ಸ್ಫೂರ್ತಿಯಾಗಿ ಹಿನ್ನೆಲೆಯಾಗಿ ಬಳಸಿಕೊಂಡರು.

ಸ್ವಾತಂತ್ರ್ಯ ಹೋರಾಟವು ಅಖಿಲ ಭಾರತ ವ್ಯಾಪ್ತಿಯನ್ನು ಪಡೆಯುತ್ತಿದೆ, ಎಂಬ ಗ್ರಹಿಕೆಯ ಮೇಲೆ ಬ್ರಿಟಿಷರು ಈ ಹೋರಾಟವನ್ನು ಒಡೆಯುವ ಕುತಂತ್ರಗಳಿಗೆ ಮುಂದಾದರು. ಭಾರತೀಯ ಸ್ವಾತಂತ್ರ್ಯ ಹೋರಾಟ ಎಷ್ಟು ವಿಚಿತ್ರವಾಗಿತ್ತೆಂದರೆ ಅನೇಕ ಭಾಗಗಳಲ್ಲಿ ಹೋರಾಟ ಬ್ರಿಟಿಷರ ವಿರುದ್ಧ ನಡೆಯಲೇ ಇಲ್ಲ, ಅದು ಸ್ಥಳೀಯ ಭೂಮಾಲೀಕರ ವಿರುದ್ಧ ನಡೆಯುತ್ತಿತ್ತು. ಇಂಡಿಯಾದ ಕೆಲವು ಭಾಗಗಳಲ್ಲಿ ಮುಸ್ಲಿಂ ಜಮೀನುದಾರರ ಕೆಳಗೆ ಮುಸ್ಲಿಮೇತರ ಕೃಷಿ ಕೂಲಿಗಳು ಕೆಲಸ ಮಾಡುತ್ತಿದ್ದರು. ಇನ್ನು ಕೆಲವು ಭಾಗಗಳಲ್ಲಿ ಮುಸ್ಲಿಮೇತರ ಜಮೀನುದಾರರ ಕೆಳಗೆ ಮುಸ್ಲಿಂ ಕೃಷಿ ಕೂಲಿಗಳು ಕೆಲಸ ಮಾಡುತ್ತಿದ್ದರು. ಈ ಎರಡೂ ಕಡೆ ಕೃಷಿ ಕೂಲಿಗಳು ತಮ್ಮ ಸಾಮಾನ್ಯ ಅಗತ್ಯ ಬೇಡಿಕೆಗಳಿಗೆ ಜಮೀನುದಾರರ ವಿರುದ್ಧ ಹೋರಾಟ ಮಾಡುತ್ತಿದ್ದರು. ಇದು ಸಂಪೂರ್ಣವಾಗಿ ಒಂದು ಆರ್ಥಿಕ ಹೋರಾಟವಾಗಿತ್ತು. ಬ್ರಿಟಿಷರು ಇದನ್ನು ದುರುಪಯೋಗಪಡಿಸಿಕೊಂಡು ಮುಸ್ಲಿಂ ಮುಸ್ಲಿಮೇತರ (ಹಿಂದು) ಎಂಬಂತೆ ವರ್ಣಿಸಿದರು, ಪ್ರಚಾರ ಮಾಡಿದರು.

ಬ್ರಿಟಿಷರು ಭಾರತೀಯರಿಗೆ ಇತಿಹಾಸ ಪ್ರಜ್ಞೆ ಇಲ್ಲ ಎಂದು ಮೂದಲಿಸಿದರು. ಇದಕ್ಕೆ ಸ್ವಾತಂತ್ರ್ಯ ಹೋರಾಟದ ಬಿಸಿಯೊಳಗೇ ಉತ್ತರವನ್ನು ಹುಡುಕಿ ತೆಗೆದು ಅದಕ್ಕೆ ತಕ್ಕಂತೆ ಸೃಷ್ಟಿಸಿಕೊಡಬೇಕಿತ್ತು. ಇದಕ್ಕೆ ಅನುಗುಣವಾಗಿ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ, ಭಗವದ್ಗೀತೆ ಮುಂತಾದುವುಗಳಲ್ಲಿ ಭಾರತದ ಪ್ರಾಚೀನ ಚರಿತ್ರೆಯನ್ನೂ ಜೀವನ ಮೌಲ್ಯಗಳನ್ನೂ ಹೆಕ್ಕಿ ತೆಗೆಯಲಾಯಿತು ; ಆ ಮೂಲಕ ಅವುಗಳಿಗೆ ಉತ್ತರಿಸುವ ಪ್ರಯತ್ನವನ್ನು ಮಾಡಲಾಯಿತು. ಇಲ್ಲಿ ಗುರುತಿಸಬೇಕಾದ ಮುಖ್ಯವಾದ ಒಂದು ಅಂಶವಿದೆ. ಯುರೋಪು, ಇಂಗ್ಲೆಂಡಿನಲ್ಲಿ ಕೈಗಾರಿಕಾ ಬಂಡವಾಳಶಾಹಿ ಬೆಳೆಯುತ್ತಿತ್ತು. ಅಲ್ಲಿಯ ಜೀವನ ಮೌಲ್ಯಗಳು ಬಂಡವಾಳಶಾಹಿ ವಿಧಾನವನ್ನು ಪಡೆಯುತ್ತಿದ್ದವು. ಆದರೆ ಅದೇ ಕಾಲದಲ್ಲಿ ಭಾರತದಲ್ಲಿ ಊಳಿಗಮಾನ್ಯ ಉತ್ಪಾದನಾ ವಿಧಾನ, ಉತ್ಪಾದನಾ ಸಂಬಂಧಗಳು ಮತ್ತು ಮೌಲ್ಯಗಳಿದ್ದವು. ಇವು ಯುರೋಪಿನ ಭೌತಿಕ ಪ್ರಧಾನ ಜೀವನಕ್ಕಿಂತಲೂ ಶ್ರೇಷ್ಠವಾದವು ಎಂದು ಭಾರತೀಯ ಮಧ್ಯಮ ವರ್ಗದ ಬುದ್ಧಿಜೀವಿಗಳು ಸಾರಿದರು. ಪರಿಣಾಮವಾಗಿ, ಯುರೋಪಿನ ಭೌತಿಕ ಪ್ರಧಾನ ಜೀವನ ವಿಧಾನ, ಜೀವನ ಮೌಲ್ಯಗಳಿಗಿಂತ ಭಾರತೀಯರ ಆಧ್ಯಾತ್ಮ ಜೀವನ ವಿಧಾನ, ಜೀವನ ಮೌಲ್ಯಗಳು ಪ್ರಪಂಚದಲ್ಲೇ ಶ್ರೇಷ್ಠ ಎಂದು ವೈಭವೀಕರಿಸುವ ಚಾರಿತ್ರಿಕ ಒತ್ತಡ ಎದುರಾಯಿತು. ಫಲವಾಗಿ ಈ ಆಲೋಚನೆ ಅನೇಕ ನಾಯಕ ವ್ಯಕ್ತಿಗಳಿಂದ ಪ್ರಚುರವಾಗತೊಡಗಿತು. ಆ ತಾತ್ವಿಕತೆಯೊಳಗೆ ಅಪ್ಪಟ ಊಳಿಗಮಾನ್ಯಶಾಹಿ ಶೋಷಣೆಯ ಮೌಲ್ಯಗಳೇ ತುಂಬಿದ್ದವು. ಇಂಡಿಯಾದಲ್ಲಿ ಬ್ರಿಟಿಷರಿಗೆ ಪರ್ಯಾಯ ಇವೇ ಎಂಬಂತೆ ವಿವರಿಸಲಾಯಿತು ; ಸಮರ್ಥಿಸಲಾಯಿತು. ಈ ಮೂಲಕ 'ಹಿಂದುತ್ವ'ದ ವಿಚಾರ ಪ್ರಣಾಳಿಗಳು ಒಗ್ಗೂಡಲು ಮತ್ತು ಬ್ರಿಟಿಷರ ವಿರುದ್ಧ ಒಂದು ಕಾರ್ಯಕ್ರಮವಾಗಿ ಮೈದಾಳಲು ಸಾಧ್ಯವಾಯಿತು.

ಇಂಡಿಯಾಕ್ಕೆ ಬ್ರಿಟಿಷರ ಪ್ರವೇಶವು ಅನೇಕ ಪರಿಣಾಮಗಳನ್ನು ತಂದಿತು. ಹಳೆಯ ಉತ್ಪಾದನಾ ವಿಧಾನವು ಕ್ರಮೇಣ ಕಡಿಮೆಯಾಗಿ ಬಂಡವಾಳಶಾಹಿ ಉತ್ಪಾದನಾ ವಿಧಾನವು

ಹಿಂದುತ್ವದ ಸ್ವರೂಪವನ್ನು ರಾಜಕೀಯ - ಆರ್ಥಿಕ ಸಂಬಂಧಗಳ ನೆಲೆಯಲ್ಲಿ ಮಾತ್ರವೇ ಸಮರ್ಥವಾಗಿ ಗುರುತಿಸಲು ಸಾಧ್ಯ. ಈ ವಿಧಾನವನ್ನು ಹೊರತುಪಡಿಸಿ ಬೇರೆ ವಿಧಾನವಿಲ್ಲ. ಹಿಂದುತ್ವವನ್ನು ಕೇವಲ ಜಾತಿ-ಧರ್ಮ-ವರ್ಣದ ನೆಲೆಯಲ್ಲಿ ಗುರುತಿಸುವ ಅಪಾಯವೂ ಇದೆ.
'ಹಿಂದುತ್ವ'ವು ಹಳೆಯ ಜಮೀನ್ದಾರಿಕೆಯೊಂದಿಗೆ, ವಸಾಹತುಶಾಹಿ ವಿರೋಧಿ ಹೋರಾಟದೊಂದಿಗೆ, ಅಧಿಕಾರ ಹಸ್ತಾಂತರದ ನಂತರ, ನವವಸಾಹತುಶಾಹಿಯೊಂದಿಗೆ ಮತ್ತು ಇಂದು ಸರ್ಕಾರೇತರ ಸಂಘಗಳೊಂದಿಗೆ ಹೊಂದಿರುವ ಸಂಬಂಧಗಳ ಆಯಾಮಗಳನ್ನು ಪರಿಗಣಿಸದೆ, ಕೇವಲ ಪುರೋಹಿತಶಾಹಿ, ಬ್ರಾಹ್ಮಣಶಾಹಿ, ವೈದಿಕಶಾಹಿ ಮುಂತಾಗಿ ಶಬ್ದಗಳನ್ನು ಹಿಡಿದು ನೆಗೆದಾಡುವ ಹೋರಾಟವು ಇದುವರೆಗೆ ಗಾಳಿಯೊಂದಿಗೆ ಗುದ್ದಾಡಿದಂತೆ ಆಗಿದೆ

**ಡಾ|| ಬಿ. ಎಂ. ಪುಟ್ಟಯ್ಯ**

ಜಾರಿಗೆ ಬಂತು. ಇದು ಇಂಡಿಯಾದ ಎಲ್ಲಾ ಭಾಗದಲ್ಲಿಯೂ ಏಕಕಾಲದಲ್ಲಿ ಜಾರಿಗೆ ಬರಲಿಲ್ಲ. ಅಲ್ಲಲ್ಲಿ ಬೇರೆ ಬೇರೆ ಹಂತಗಳಲ್ಲಿ ರೂಢಿಗೆ ಬಂತು. ಈ ಮೂಲಕ ಇಂಡಿಯಾದಲ್ಲಿ ಹಣಕಾಸು ಬಂಡವಾಳ ಮತ್ತು ಮಾರುಕಟ್ಟೆಗಳು ರೂಪುಗೊಂಡವು. ಬ್ರಿಟಿಷರಿಗೆ ಇಲ್ಲಿ ಆಡಳಿತ ನಡೆಸಲು ಕಾರಕೂನರ ಅಗತ್ಯವಿತ್ತು. ಇದಕ್ಕಾಗಿ ಅವರು ಯುರೋಪ್ ಮಾದರಿಯ ಶಿಕ್ಷಣವನ್ನು ಜಾರಿಗೆ ತಂದರು. ಸಹಜವಾಗಿ ಇಲ್ಲಿಯ ಮೇಲುಜಾತಿಯವರು ಆ ಶಿಕ್ಷಣ ಪಡೆದರು. ಫಲವಾಗಿ ಅವರು ಬಹುತೇಕ ನೌಕರರಾಗಿ ರೂಪುಗೊಂಡರು. ಒಂದು ಕಡೆ ಕೈಗಾರಿಕಾ ಕಾರ್ಮಿಕರೂ ಆಗಿರದೆ ಮತ್ತೊಂದು ಕಡೆ ಕೃಷಿ ಕೂಲಿಗಳೂ ಆಗದೆ ವಿವಿಧ ಆಡಳಿತ ಶಾಖೆಗಳಲ್ಲಿ ನೌಕರರಾದವರು ಒಂದು ಸಾಮಾನ್ಯ ಮಧ್ಯಮ ವರ್ಗವಾಗಿ ರೂಪುಗೊಂಡರು. ಇಂಡಿಯಾದಲ್ಲಿ ಲಿಖಿತ ಸಾಹಿತ್ಯ, ಸಂಗೀತ, ಕಲೆ ಮುಂತಾದವು ಇವರಿಂದ ಸೃಷ್ಟಿಯಾಗತೊಡಗಿದವು.

ಬ್ರಿಟಿಷರಿಗೆ ಇಂಡಿಯಾದ ವರ್ಣ ವ್ಯವಸ್ಥೆ, ಜಾತಿ ಶ್ರೇಣೀಕರಣ ಮುಂತಾದ ಸಾಮಾಜಿಕ ವೈರುಧ್ಯತೆ ಗಳನ್ನು ಹಾಗೇ ಉಳಿಸುವ ತುರ್ತು ಇತ್ತು. ಇವುಗಳ ಜೊತೆಗೆ ಕೈಗಾರಿಕಾ ಬಂಡವಾಳಶಾಹಿಯ ಆರ್ಥಿಕ ವೈರುಧ್ಯತೆ ಮುಂಚೂಣಿಗೆ ಬಂದರೆ ತಮ್ಮ ಜಾಗತಿಕ ಶೋಷಣೆಗೆ ನೆಲೆ ಇಲ್ಲದಂತಾಗುತ್ತದೆ ಎಂಬ ಎಚ್ಚರಿಕೆ ಅವರಿಗಿತ್ತು. ಮೊದಲ ಜಾಗತಿಕ ಯುದ್ಧದಿಂದ ಇದರ ಗಂಭೀರ ಗುಣಪಾಠವನ್ನು ಅರಿತಿದ್ದರು. ಹಾಗಾಗಿ ಇಂಡಿಯಾದಲ್ಲಿ ಆರ್ಥಿಕ ವೈರುಧ್ಯತೆ ಮತ್ತು ಸಾಮಾಜಿಕ ವೈರುಧ್ಯತೆಗಳನ್ನು ಏಕಕಾಲದಲ್ಲಿ ಬ್ರಿಟಿಷರು ಎದುರಿಸ ಬೇಕಿತ್ತು. ಒಂದು ಕಡೆ ಅಂಬೇಡ್ಕರ್ ನಾಯಕತ್ವದ ಹೋರಾಟ, ವಿವಿಧ ಬುಡಕಟ್ಟು, ಆದಿವಾಸಿಗಳ ಹೋರಾಟಗಳು ಸ್ಥಳೀಯ ಭೂಮಾಲೀಕರ ವಿರುದ್ಧವೂ, ಚಾತುರ್ವರ್ಣ್ಯ ಪದ್ಧತಿಯ ವಿರುದ್ಧವೂ ಸಾಗಿದ್ದವು. ಅದೇ ಕಾಲಕ್ಕೆ ರಷ್ಯನ್ ಕ್ರಾಂತಿಯ ಸಮಾಜವಾದದ ಪ್ರಭಾವ ಇಂಡಿಯಾದ ಕಾರ್ಮಿಕ ರೈತರ ಮೇಲಾಗಿತ್ತು. ಈ ಸಂಕೀರ್ಣ ವೈರುಧ್ಯತೆಗಳನ್ನು ಒಟ್ಟಿಗೇ ಎದುರಿಸಿ ಗೆಲ್ಲುವುದು ಅಷ್ಟೇನೂ ಸುಲಭದ ಮಾತಾಗಿರಲಿಲ್ಲ. ಚಲನಶೀಲ ವಸ್ತುನಿಷ್ಠ ಪರಿಸ್ಥಿತಿ ಹೀಗಿದ್ದುದರಿಂದ ಈ ಎಲ್ಲಾ ವೈರುಧ್ಯಗಳ ಸಂಕೀರ್ಣತೆಯನ್ನು ಸರಳೀಕರಿಸುವುದು ಬ್ರಿಟಿಷರ ಪ್ರಥಮ ಮತ್ತು ಪ್ರಧಾನ ತಂತ್ರ ವಾಗಿತ್ತು. ಇಂಡಿಯಾದಲ್ಲಿ ಆ ಹೊತ್ತಿಗೆ ಮೈದಾಳುತ್ತಿದ್ದ ಮಧ್ಯಮ ವರ್ಗವೇ ಇದಕ್ಕೆ ಸರಿಯಾದ ಮತ್ತು ಸೂಕ್ತವಾದ ಸಾರಥಿಯಾಗಬಲ್ಲದೆಂದು ಅವರು ಅರಿತರು. ಇಂಡಿಯಾದಲ್ಲಿ ಮುಸ್ಲಿಮರನ್ನು 'ಶತ್ರುಗಳು' ಎಂದು ಸಾರುವ ಮೂಲಕ ಸ್ವಾತಂತ್ರ್ಯ ಹೋರಾಟದ ಸಾಮಾನ್ಯ ಐಕ್ಯತೆಯನ್ನು ಮುರಿಯಬೇಕಾಗಿತ್ತು. ರಷ್ಯಾದಲ್ಲಿ ಸಮಾಜವಾದದ ಬೆಳವಣಿಗೆ ಬಲವಾಗಿ ಸಾಗುತ್ತಿದ್ದ ಆ ಕಾಲದಲ್ಲಿ ಇಂಡಿಯಾದಲ್ಲಿ ಕಮ್ಯುನಿಸಂಗೆ ಸಾಮಾಜಿಕ ತಳಹದಿ ಸಿಕ್ಕಿದಲ್ಲಿ ಅದು ಬ್ರಿಟಿಷರಿಗೆ ನುಂಗಲಾರದ ತುತ್ತಾಗುತ್ತಿತ್ತು. ಹಾಗಾಗಿ ಒಂದು ಕಡೆ ಮುಸ್ಲಿಮರನ್ನು ಮತ್ತೊಂದು ಕಡೆ ಕಮ್ಯುನಿಸಂ ಮತ್ತು ಕಮ್ಯುನಿಸ್ಟರನ್ನು ಭಾರತೀಯರ 'ಶತ್ರುಗಳು' ಎಂಬ ಭ್ರಮೆಯನ್ನು ಹುಟ್ಟುಹಾಕಿ ಬೆಳೆಸಬೇಕಾಗಿತ್ತು ಮತ್ತು ಇಂತಹ ಒಂದು ರಾಜಕೀಯ ಘನಕಾರ್ಯ ಭಾರತದ ನೆಲದಿಂದಲೇ ಅದರಲ್ಲೂ ಭಾರತೀಯರ ಮುಖಂಡತ್ವದಲ್ಲೇ ಸಹಜವೆಂಬಂತೆ ಹುಟ್ಟಿ ಬೆಳೆಯಬೇಕಾಗಿತ್ತು. ಇದು ಬ್ರಿಟಿಷರು ತಮ್ಮ ವಸಾಹತು ಸುಲಿಗೆಯನ್ನು ಮುಂದುವರಿಸಲು ಮುಕ್ತ ರಹದಾರಿಯಾಗಿತ್ತು. ಇದಕ್ಕಾಗಿ ಬ್ರಿಟಿಷರು ಇಲ್ಲಿ ಹೊಸದಾಗಿ ಹುಟ್ಟಿದ್ದ ಮಧ್ಯಮ ವರ್ಗವನ್ನು ಮತ್ತು ಆ ಮಧ್ಯಮ ವರ್ಗವು ಹೊಂದಿದ್ದ 'ಭಾರತೀಯತೆ'ಯ ರಾಜಕೀಯ ತಾತ್ವಿಕತೆಯನ್ನು ಯಶಸ್ವಿಯಾಗಿ ದುರುಪಯೋಗಪಡಿಸಿಕೊಂಡರು.

ಈ ಚರ್ಚೆಯ ಮೂಲಕ ನಾವು ರಾಜಕೀಯವಾಗಿ ಅರಿಯಬೇಕಾದುದೇನೆಂದರೆ, ೧೯೨೫ರಲ್ಲಿ ಹುಟ್ಟಿದ ಆರೆಸ್ಸೆಸ್ ಹಿಂದೂ ಧರ್ಮದ ಪುನರ್ ಸ್ಥಾಪನೆಗಾಗಲಿ, ಭಾರತವನ್ನು ಹಿಂದೂಸ್ತಾನ ಮಾಡುವುದಕ್ಕಾಗಲಿ ಹುಟ್ಟಿದ್ದಲ್ಲ. ಬದಲಾಗಿ, ದೇಶದ ಆಂತರಿಕ ವೈರುಧ್ಯ ಗಳನ್ನು ನಯವಾಗಿ, ಜೋಪಾನವಾಗಿ ಕಾಪಾಡಿಕೊಳ್ಳುವುದು ಮತ್ತು ಬ್ರಿಟಿಷರ ಸುಲಿಗೆಗೆ ಸಾಮಾಜಿಕ ಬುನಾದಿಯನ್ನು ಒದಗಿಸುವುದು, ಆ ಮೂಲಕ ಇಂಡಿಯಾದಲ್ಲಿ ತಾನು ಒಂದು ಆಳುವ ವರ್ಗವಾಗಿ ಸೃಷ್ಟಿಯಾಗುವುದು ಅಂದಿನ ಚಾರಿತ್ರಿಕ ಒತ್ತಡವಾಗಿತ್ತು. ಈ ಚಾರಿತ್ರಿಕ ಒತ್ತಡದ ಹಿಂದೆ ಬ್ರಾಹ್ಮಣ ಜಾತಿಯ ವೈದಿಕ ವರ್ಣದ ಹಿತಾಸಕ್ತಿ ಇರಲಿಲ್ಲ. ಬದಲಾಗಿ ತೀವ್ರ ಗೊಳ್ಳುತ್ತಿದ್ದ ಸಂಕೀರ್ಣ ವೈರುಧ್ಯಗಳನ್ನು ಮುಚ್ಚಿಡುವ ರಾಜಕೀಯ - ಆರ್ಥಿಕ ಹಿತಾಸಕ್ತಿ ಇತ್ತು.

**೨. ಅಧಿಕಾರ ಹಸ್ತಾಂತರದ ನಂತರ**

ಎರಡನೇ ಜಾಗತಿಕ ಯುದ್ಧದ ಪರಿಣಾಮವಾಗಿ ಮತ್ತು ದೇಶದೊಳಗಿನ ಹೋರಾಟಗಳಿಂದ ಇಂಡಿಯಾಕ್ಕೆ ಅಧಿಕಾರ ಹಸ್ತಾಂತರವಾಯಿತು. ಅದಾದ ನಂತರ ಇಲ್ಲಿ ಸಂವಿಧಾನ, ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಇವೆಲ್ಲ ಜಾರಿಗೆ ಬಂದವು. ಈ ವ್ಯವಸ್ಥೆಯನ್ನು 'ಪ್ರಜಾ ಪ್ರಭುತ್ವ' ಎಂದು ಕರೆಯಲಾಯಿತು. ವಾಸ್ತವಿಕವಾಗಿ ಇದೇನು ಪ್ರಜೆಗಳ ಪ್ರಭುತ್ವ ಆಗಿರಲಿಲ್ಲ; ದೊರೆಗಳ ಪ್ರಭುತ್ವವೇ ಆಗಿತ್ತು. ಸಂವಿಧಾನವು ಬಂಡವಾಳಶಾಹಿ ಶೋಷಣಾ ವ್ಯವಸ್ಥೆಯ ಕಾನೂನಿನ ಕೂಸಾಗಿತ್ತು. ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳು ಇಲ್ಲಿ ಸಾಮಾನ್ಯನ ಆಕಾಂಕ್ಷೆಗಳಿಗೆ ವಿರುದ್ಧವಾಗಿದ್ದವು.

ವಿಶಾಲವಾದ ಶೋಷಿತ ಜನಸಮುದಾಯದ ಸಾಮಾನ್ಯ ಅಗತ್ಯ ಬೇಡಿಕೆಗಳನ್ನು ಈಡೇರಿಸುವುದು ಇಲ್ಲಿಯ ಆಳುವ ವರ್ಗಕ್ಕೆ ಬೇಕಿರಲಿಲ್ಲ. ಈಗಲೂ ಬೇಕಿಲ್ಲ. ಸಾಮಾನ್ಯ ಜನತೆಯಿಂದ ರಾಜಕೀಯ, ಆರ್ಥಿಕ ಒತ್ತಾಯಗಳು ಬಂದಾಗಲೆಲ್ಲ ಅವನ್ನು ದಿಕ್ಕು ತಪ್ಪಿಸುವ ಸಲುವಾಗಿ ಜಾತಿ ಮತ್ತು ಧರ್ಮಗಳನ್ನು ಆಳುವ ವರ್ಗ ಮುಖ್ಯ ಸಮಸ್ಯೆ ಎಂದು ಮುಂಚೂಣಿಗೆ ತರುತ್ತದೆ. ಜನರ ಅಗತ್ಯ ಬೇಡಿಕೆಗಳಿಂದ ಅವರ ಗಮನವನ್ನು ಬೇರೆ ಕಡೆ ಎಳೆಯುವುದೇ ಈ ತಂತ್ರವಾಗಿದೆ. ಇದು ಆಳುವ ವರ್ಗದ ಪ್ರಥಮ ವಿಧಾನ. ಈ ಕೆಲಸವನ್ನು ಭಾರತೀಯ ಜನತಾ ಪಕ್ಷ ಮಾತ್ರ ಮಾಡುತ್ತದೆ ಎಂದು ಸರಳೀಕರಿಸುವುದು ತಪ್ಪಾಗುತ್ತದೆ. ಬಾಬ್ರಿ ಮಸೀದಿಯನ್ನು ಧ್ವಂಸ ಮಾಡಿದ್ದಕ್ಕೂ ಶೇರು ಹಗರಣಕ್ಕೂ ಸಂಬಂಧವಿರಲಿಲ್ಲ ಎಂದು ಹೇಳಲು ಬರುವುದಿಲ್ಲ. ಇಂತಹ ಹತ್ತಾರು ಘಟನೆಗಳನ್ನು ಉದಾಹರಿಸಬಹುದು.

೧೯೪೭ರಲ್ಲಿ ಮೂಡಿದ ರಾಜಕೀಯ ಅಧಿಕಾರದಿಂದ ಸಾಮಾನ್ಯ ಜನತೆಯ ವಿಮೋಚನೆಯಾಗುತ್ತದೆ ಎಂಬ ಕಟ್ಟುಕತೆಯನ್ನು ಜನರ ಮಧ್ಯೆ ಹರಿಬಿಡಲಾಯಿತು. ಆದರೆ ಈ ಅಧಿಕಾರ ಹುಸಿಯಾದುದು – ಇದರಿಂದ ಕೃಷಿ ಕೂಲಿ ರೈತಾಪಿಗಳ ವಿಮೋಚನೆ ಸಾಧ್ಯವಿಲ್ಲ, ಎಂಬ ವಾಸ್ತವಿಕ ಅರಿವು ಕೂಡ ಇತ್ತು. ಈ ಹಿನ್ನೆಲೆಯಲ್ಲೆ ಇಂಡಿಯಾದ ಬಹುತೇಕ ಕಡೆ ಕೃಷಿಕೂಲಿಗಾರ ವರ್ಗದ ನೇತೃತ್ವದಲ್ಲಿ ವೀರೋಚಿತವಾದ ಭೂ ಹೋರಾಟಗಳು ನಡೆದವು. ತೆಲಂಗಾಣ ಹೋರಾಟವು ಈ ಪರಂಪರೆಯಲ್ಲಿ ಶಿಖರ ಪ್ರಾಯವಾದುದು. ಇದರ ಪ್ರಭಾವ ಇಂಡಿಯಾದ ಶೋಷಿತ ಜನಸಮುದಾಯಕ್ಕೆ ವಿಶೇಷ ಪರಿಣಾಮವನ್ನುಂಟುಮಾಡಿತು. ಅದರ ತರುವಾಯದಲ್ಲೇ ಆಳುವ ವರ್ಗಕ್ಕೆ ಹಿತವಾಗುವಂತೆ ವಿನೋಬಾಭಾವೆಯವರ ಮೂಲಕ 'ಭೂದಾನ ಚಳುವಳಿ' ಆರಂಭವಾದದ್ದು ಈಗ ಇತಿಹಾಸವಾಗಿದೆ.

ಅನಂತರ ೬೦-೭೦ರ ದಶಕದಲ್ಲಿ ಸಾಮಾನ್ಯ ಜನತೆಯ ಸಂಕಟಗಳು ತೀವ್ರವಾಗತೊಡಗಿದವು. ಇಂಡಿಯಾದ ಕೃಷಿಯನ್ನು 'ಹಸಿರು-ಕ್ರಾಂತಿ'ಯ ಮಾರು ವೇಷದಲ್ಲಿ ಉದ್ಯಮೀಕರಿಸಲಾಯಿತು. ಬಂಡವಾಳಶಾಹಿ ಉತ್ಪಾದನಾ ವಿಧಾನವನ್ನು ಪಾರಂಪರಿಕ ಕೃಷಿಯ ಉತ್ಪಾದನೆಯ ಮೇಲೆ ಹೇರಲಾಯಿತು. ಇದರಿಂದ ಊಳಿಗಮಾನ್ಯಶಾಹಿ ಬಂಡವಾಳ, ಅದಕ್ಕೆ ಅನುಗುಣವಾಗಿ ಮಾರುಕಟ್ಟೆ ಬೆಳೆಯಿತು. ಇದಕ್ಕೆ ಪೂರಕವಾಗಿ ಸಾಮ್ರಾಜ್ಯಶಾಹಿಗಳಿಗೆ ಕೊಡಬೇಕಾಗಿದ್ದ ಸಾಲ ವರ್ಷದಿಂದ ವರ್ಷಕ್ಕೆ ಏರತೊಡಗಿತು. ಆಳುವ ವರ್ಗಗಳು ಜನತೆಗೆ ಕೊಡುತ್ತಾ ಬರುತ್ತಿದ್ದ ಆಶ್ವಾಸನೆಗಳು ಹಸಿ ಸುಳ್ಳು ಎಂದು ತಿಳಿಯುವುದು ತಡವಾಗಲಿಲ್ಲ. ಪರಿಣಾಮವಾಗಿ ೬೦-೭೦ರ ದಶಕಗಳಲ್ಲಿ ಸಾಮಾನ್ಯ ಜನತೆಯ ವಿವಿಧ ರೂಪದ ನಾನಾ ಹೋರಾಟಗಳು ರಾಷ್ಟ್ರದಾದ್ಯಂತ ನಡೆದವು.

## ರಸ್ತೆಯಲಿ ಮೈಚಾಚಿ ಮಲಗಿದ ದೇವರು

ಚಿತ್ರ (೧)

ಮಿಣುಕು ಮಿಂಚು ಪುಡಿ
ಡಾಂಬರಿನಂಗಳದಲಿ
ಹರಡಿದೆ ಹಸಿದ ಬೆರಳಿನ ಕೌತುಕ
ಕಪ್ಪು ತಲೆ ಬಿಳಿ ರಂಗವಲ್ಲಿಗೆ
ಬಾಗಿದೆ, ಬಿಡಿಸಿದೆ
ಕಪ್ಪುಬಿಳುಪಿನ ಒನಪು
ಹಾಸು ಹಸೆಯ ಚುಕ್ಕೆಯಲಿ
ಮೂಡುತ್ತಾನೆ,
ತಿರುಪತಿ ತಿಮ್ಮಪ್ಪ
ಅಭಯ ಹಸ್ತವ ಹಿಡಿದು.

ಚಿತ್ರ (೨)

ಅರ್ಧ ಜೋಡಿಸಿದ ಬಿಳಿ
ನಾಮ, ಕೊಲಾಜ್ ಮಾದರಿ
ಕುಂಕುಮ
ಮೇಲೊಂದಿಷ್ಟು ಕಾಸು
ಮೇಲೊಂದಿಷ್ಟು ಕಾಸು
ಬೀದಿಯಲಿ ಮಲಗಿದ
ತಿಮ್ಮಪ್ಪನ ತಲೆಯ
ದಾಟಲಾಗದೆ ಒದ್ದಾಡಿವೆ
ಫುಟ್‌ಪಾತ್ ಪಾದಗಳು
ಅಡ್ಡಡ್ಡ ಗೀಟಿನ ಕಪ್ಪುಬಿಳುಪಿನ
ಟ್ರಾಫಿಕ್ ಮರೀಚಿಕೆಯಲಿ
ತಿಮ್ಮಪ್ಪ
ಕಾದು ಕುಳಿತಿದ್ದಾನೆ
ನಾಲ್ಕಾರು ಕಾಸಿನಾಸೆಯಲಿ.

**ಆರ್. ತಾರಿಣಿ ಶುಭದಾಯಿನಿ**
ಇಂಗ್ಲಿಷ್ ಉಪನ್ಯಾಸಕಿ, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ - ೫೭೭ ೫೦೧

ಇವು ಸಹಜವಾಗಿ ಮತ್ತು ನೇರವಾಗಿ ಪ್ರಭುತ್ವದ ವಿರುದ್ಧವೇ ನಡೆದಿದ್ದವು. ಸರಕಾರಿ ಸುಧಾರಣಾ ಕಾರ್ಯಕ್ರಮಗಳನ್ನು ಬೇರೆ ಬೇರೆ ಹೆಸರುಗಳಲ್ಲಿ ಘೋಷಿಸುವ ಮೂಲಕ ಜನತೆಯ ಆಕ್ರೋಶವನ್ನು, ಅಸಮಾಧಾನವನ್ನು ಶಮನಗೊಳಿಸುವ ಪ್ರಯತ್ನಗಳನ್ನು ಆಯಾ ಸರಕಾರಗಳು ಮುಂದುವರಿಸುತ್ತಲೇ ಬಂದವು. ಈ ತಂತ್ರವೂ ಅವರಿಗೆ ನಿರೀಕ್ಷಿತ ಪ್ರಮಾಣದ ಫಲ ಕೊಡದಿದ್ದಾಗ ತುರ್ತು ಪರಿಸ್ಥಿತಿಯನ್ನು ಜಾರಿಗೊಳಿಸಲಾಯಿತು. ಇದು ಕೇವಲ ಕಾಂಗ್ರೆಸ್ಸಿನ ದಬ್ಬಾಳಿಕೆಯಾಗಿರದೆ, ಸಾಮ್ರಾಜ್ಯಶಾಹಿ ಪಿತೂರಿಯ ನೆರವಿನಿಂದ ಜಾರಿಯಾದುದು ಎಂಬುದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾಗಿದೆ. ಅದುವರೆಗೆ ತೆರೆಮರೆಯಲ್ಲಿ ಕೆಲಸ ಮಾಡುತ್ತಿದ್ದ ಆರ್.ಎಸ್.ಎಸ್.ಗೆ ತಾನು ಜನತೆಯ ಪರ ಎಂದು ತೋರಿಸಿಕೊಳ್ಳುವ ಸುವರ್ಣಾವಕಾಶ ಬಂದೊದಗಿತ್ತು. ಸಾಮ್ರಾಜ್ಯಶಾಹಿಯ ಶೋಷಣೆಯನ್ನು ಇಂಡಿಯಾದಲ್ಲಿ ಮುಂದುವರಿಸುವ ಚಾರಿತ್ರಿಕ ಒತ್ತಡದ ಕೂಸಾಗಿ ಹುಟ್ಟಿದ ಆರ್‌ಎಸ್‌ಎಸ್ ಸರಿಯಾಗಿ ೫೦ ವರ್ಷಗಳ ನಂತರ (೧೯೭೫) ತುರ್ತು ಪರಿಸ್ಥಿತಿಯನ್ನು ವಿರೋಧಿಸಲು ಮುಂದಾಯಿತು. ತುರ್ತುಪರಿಸ್ಥಿತಿಯ ನಂತರ ಜನತಾ ಪಕ್ಷವು ಕೇಂದ್ರದಲ್ಲಿ ಅಧಿಕಾರಕ್ಕೆ ಬಂತು. ಆದರೆ ಅದರ ಆಂತರಿಕ ವೈರುಧ್ಯಗಳು ಒಂದು ಕಡೆ, ಕಾಂಗ್ರೆಸ್‌ನ ಮೇಲಿದ್ದ ಮುಸ್ಲಿಮರ ಹಾಗೂ ದಲಿತರ ಭಾವನಾತ್ಮಕ ಒಲವು ಇನ್ನೊಂದು ಕಡೆ ; ಹೀಗಾಗಿ ಕಾಂಗ್ರೆಸ್ ಮರಳಿ ಅಧಿಕಾರಕ್ಕೆ ಬಂತು. ಈ ಅವಧಿಯಲ್ಲಿ 'ಹಿಂದುತ್ವ' ಮತ್ತು 'ಹಿಂದುತ್ವ'ಪರ ಶಕ್ತಿಗಳು ಬಿಡಿಬಿಡಿಯಾಗಿ, ದೇಶದ ಮೂಲೆಮೂಲೆಗಳಲ್ಲಿ ಬೇರುಮಟ್ಟದ ಕೆಲಸ ಶುರು ಮಾಡಿದವು. ಯಾವುದೇ ಸಾಮಾಜಿಕ ಸಮಸ್ಯೆಯನ್ನು ರಾಜಕೀಯ ಮತ್ತು ಆರ್ಥಿಕ ಸಮಸ್ಯೆಯಾಗಿ ಪರಿಗಣಿಸದೆ ಕೇವಲ 'ದೇಶಾಭಿಮಾನ'ದ ಕೊರತೆಯಿಂದಾಗಿ, ಮುಸ್ಲಿಮರ ಇರುವಿಕೆಯಿಂದಾಗಿ, ದೇಶ ಇಕ್ಕಟ್ಟಿಗೆ ಸಿಲುಕಿದೆ ಎಂದು ಮೂಲಭೂತವಾದಿಗಳು ಸಾರತೊಡಗಿದರು. ಅದೇ ಹೊತ್ತಿನಲ್ಲಿ ಅನೇಕ ಕಡೆ ಜನತೆಯ ಮತ್ತು ಬುದ್ಧಿಜೀವಿಗಳ ಚಳುವಳಿಗಳು ಆರೆಸ್ಸೆಸ್‌ನ ಈ ರಾಜಕೀಯವನ್ನು ವಿರೋಧಿಸುತ್ತ ನಡೆದಿದ್ದವು. ವಿಶಾಲವಾಗಿ ಬೆಳೆದಿದ್ದ ಸಾಮಾನ್ಯ ಮಧ್ಯಮ ವರ್ಗ ಹುಸಿ ದೇಶಾಭಿಮಾನದ ವಿಷಬೀಜವನ್ನು ತನ್ನೊಳಗೆ ಅಂಕುರಿಸಿಕೊಂಡಿತು. ಈ ವರ್ಗವು ಕೆಳವರ್ಗದ ಅನ್ನ-ಅರಿವೆಯ ಬಗ್ಗೆ ಆಲೋಚಿಸದಂತೆ, ಕೇವಲ 'ದೇಶಾಭಿಮಾನ' 'ದೇಶಭಕ್ತಿ' 'ರಾಷ್ಟ್ರಭಕ್ತಿ'ಯ ಬಗ್ಗೆ ಮಾತ್ರ ಗಮನಹರಿಸುವಂತೆ ಪ್ರಚೋದಿಸಲಾಯಿತು. ೯೦ರ ದಶಕದ ಪೂರ್ವದಲ್ಲಿ ಮೂಲಭೂತವಾದಕ್ಕೂ ಮತ್ತು 'ಪ್ರಗತಿಪರ' ವಿಚಾರ ಮತ್ತು ಕಾರ್ಯಕ್ರಮಗಳಿಗೂ ನಿರಂತರ ಸಂಘರ್ಷವೇ ನಡೆದಿದೆ. ಆದರೆ ಈ ಸಂಘರ್ಷದ ಮೂಲಕ ದೇಶದಲ್ಲಿ ಮೂಲಭೂತವಾದವನ್ನು, 'ಹಿಂದುತ್ವ'ವನ್ನು, ಸಂಪೂರ್ಣ ಸೋಲಿಸುವ ಸಮರ್ಥ ರಾಜಕೀಯ ಸಂಘಟನೆಯ ದೊಡ್ಡ ಗೈರು ಹಾಜರಿ ಕಾಣುತ್ತದೆ. ಈ ಕಂದರವನ್ನು ಕಾಂಗ್ರೆಸ್ ಒಂದು ಕೂದಲಷ್ಟೂ ತುಂಬಲಾರದ ಪಕ್ಷವಾಗಿತ್ತು. ಯಾಕೆಂದರೆ ಅದರ ಬೇರುಗಳಿದ್ದುದು ಸಾಮ್ರಾಜ್ಯಶಾಹಿ ಹಿತಾಸಕ್ತಿಯಲ್ಲೇ. ಹೀಗಾಗಿ 'ಹಿಂದುತ್ವ'ವನ್ನು ವಿರೋಧಿಸುವುದೆಂದರೆ ಬ್ರಾಹ್ಮಣರನ್ನು ವಿರೋಧಿಸುವುದೆಂದೇ ಪರಿಗಣಿಸಲಾಗಿತ್ತು. ಕೆಲವು ತಥಾಕಥಿತ 'ಪ್ರಗತಿಪರರು' ರಾಜಕೀಯ-ಆರ್ಥಿಕ ತಿಳುವಳಿಕೆಯ ಕೊರತೆಯಿಂದಾಗಿ 'ಹಿಂದುತ್ವ'ವನ್ನು ಸರಳೀಕರಿಸಿ ಬ್ರಾಹ್ಮಣರು, ಪುರೋಹಿತಶಾಹಿಗಳು, ವೈದಿಕರು ಹೀಗೆಲ್ಲಾ ವಿಕಾರವಾಗಿ, ವಿಕೃತವಾಗಿ ವಿವರಿಸತೊಡಗಿದರು. ಇದು ಹಿಂದುತ್ವ ಶಕ್ತಿಗಳಿಗೆ ಎಂದಿಗೂ ಎಲ್ಲಿಯೂ ಶಾಪವಾಗಲಿಲ್ಲ, ಬದಲಾಗಿ ಒಂದು ವರವಾಯಿತು. ಪರಿಣಾಮವಾಗಿ ೬೦-೭೦ರ ದಶಕದ ಅನೇಕ ಹೋರಾಟಗಳಲ್ಲಿ ಒಂದು ಕಡೆ ಊಳಿಗಮಾನ್ಯ ವಿರೋಧಿ ಅಂಶಗಳು, ಮತ್ತೊಂದು ಕಡೆ ಬಂಡವಾಳಶಾಹಿ ವಿರೋಧಿ ಅಂಶಗಳು ಇರುವ ಹಾಗೆ ಇವುಗಳಷ್ಟೇ 'ಬ್ರಾಹ್ಮಣವಿರೋಧಿ' 'ಪುರೋಹಿತಶಾಹಿ ವಿರೋಧಿ' ಅಂಶಗಳಿದ್ದುದು ವಾಸ್ತವ ಸಂಗತಿ. ಈ ಎಲ್ಲ ವಿದ್ಯಮಾನಗಳನ್ನು ಗುರುತಿಸುವುದು ತಪ್ಪೇನಲ್ಲ. ಆದರೆ ಆದರ ತಾತ್ವಿಕ ಸಮಸ್ಯೆ ಎಲ್ಲಿತ್ತು ಅಂದರೆ 'ಬ್ರಾಹ್ಮಣಶಾಹಿ' ಎಂಬುದನ್ನು ಕೇವಲ ವರ್ಣದ ನೆಲೆಯಲ್ಲಿ, ಜಾತಿಯ ನೆಲೆಯಲ್ಲಿ ವಿವರಿಸುವುದರಲ್ಲಿತ್ತು. 'ಹಿಂದುತ್ವ'ವನ್ನು ಅದರ ರಾಜಕೀಯ-ಆರ್ಥಿಕ ಹಿತಾಸಕ್ತಿಯಿಂದ ಹೊರತುಪಡಿಸಿ ವಿವರಿಸುವುದು ಆಳುವ ವರ್ಗಕ್ಕೆ ಭಾರೀ ಲಾಭದ ಸಂಗತಿ. ಘೋಷಣೆಯಲ್ಲಿ 'ಪ್ರಗತಿಪರರು' ಎಂದು ಸಾರಿಕೊಂಡವರೆಲ್ಲ 'ಹಿಂದುತ್ವ'ವನ್ನು ಇದೇ ವಿಧಾನದಲ್ಲೇ ಗುರುತಿಸಿದ್ದಾರೆ. ದಲಿತ ಬಂಡಾಯದ ಅನೇಕರು ಇದನ್ನೇ ತಮ್ಮ ತಾತ್ವಿಕ ಬಂಡವಾಳ ಮಾಡಿಕೊಂಡರು. ದೇಶದಲ್ಲಿ ದಲಿತರು ಜಮೀನುದಾರರ ನಿತ್ಯ ಶೋಷಣೆಗೆ ಒಳಗಾಗಿರುವಾಗ, ದಲಿತರಿಗೆ ನಿಮ್ಮ ಶತ್ರುಗಳು ಬ್ರಾಹ್ಮಣರು ಎಂದು ಬೋಧಿಸಲಾಯಿತು. ಈ ಮೂಲಕ 'ಹಿಂದುತ್ವ'ದ ಬೆಳವಣಿಗೆಗೆ ಪರೋಕ್ಷ ಬೆಂಬಲವನ್ನು ತಮ್ಮ ಶಕ್ತ್ಯಾನುಸಾರ ನೀಡಿದ ಶನಿ ಕೀರ್ತಿ ಈ 'ಪ್ರಗತಿಪರರಿಗೆ' ಸಲ್ಲುತ್ತದೆ.

### ೩. ೯೦ರ ದಶಕದ ನಂತರ

ಸರಿಸುಮಾರು ೬೫-೭೦ ವರುಷಗಳ ದೀರ್ಘ ಅವಧಿಯಲ್ಲಿ 'ಹಿಂದುತ್ವ'ವು ಆಳುವ ವರ್ಗದ ಮತ್ತು ಮಧ್ಯಮ ವರ್ಗದ ಬೆಂಬಲ ಪಡೆದು ಉಳಿದು ಬೆಳೆದು ಬಂದಿತು. ಹೀಗೆ ಬೆಳೆದುಬಂದ ಹಿಂದುತ್ವಕ್ಕೆ ೯೦ರ ದಶಕದ ರಾಜಕೀಯ-ಆರ್ಥಿಕ ಪರಿಣಾಮಗಳು ಮಹಾನ್ ವರವಾಗಿ ಪರಿಣಮಿಸಿದವು. ಈ ಕಾಲಾವಧಿಯಲ್ಲಿ ಸಾಮ್ರಾಜ್ಯಶಾಹಿಯ ಜಾಗತೀಕರಣ ನೀತಿಗಳು ದೇಶದ ಎಲ್ಲಾ ಕ್ಷೇತ್ರಗಳಲ್ಲಿ ಗಣನೀಯ ದುಷ್ಪರಿಣಾಮ ಬೀರಿದವು. ಪರಿಣಾಮವಾಗಿ ಎಲ್ಲಾ ವಲಯದ ವಿವಿಧ ಸ್ತರಗಳ ಜನರು ರಾಜಕೀಯ-ಆರ್ಥಿಕ ಸಮಸ್ಯೆಯಿಂದ ಬೆಂದು ಬಸವಳಿದುಹೋದರು. ರೈತರು, ಕಾರ್ಮಿಕರು, ವಿದ್ಯಾರ್ಥಿಗಳು, ಯುವಜನರು, ಮಹಿಳೆಯರು, ದಲಿತರು, ಬುಡಕಟ್ಟು ಜನರು, ಆದಿವಾಸಿಗಳು ಇವರೆಲ್ಲ ಹಿಂದೆಂದೂ ಕಾಣದ ದುರ್ದಿನಗಳನ್ನು ಎದುರಿಸುವಂತಾಯಿತು. ಜಾಗತೀಕರಣ, ಉದಾರೀ ಕರಣ, ಖಾಸಗೀಕರಣಗಳಿಂದಾಗಿ ಸಾಮಾನ್ಯ ಜನತೆಯ ಬದುಕು ಬೆಂಕಿಯಾಯಿತು. ಆಳುವ ಸರಕಾರಗಳ ಬಗ್ಗೆ ಕಿಂಚಿತ್ತೂ ಭರವಸೆ ಉಳಿಯಲಾರದಂತಹ ಪರಿಸ್ಥಿತಿ ನಿರ್ಮಾಣವಾಯಿತು. ಈ ಸಂದರ್ಭದಲ್ಲಿ ದುಡಿಯುವ ವರ್ಗದ ಸಮರ್ಥ ಮುಂದಾಳತ್ವವಿಲ್ಲದೆ ಹೋಗಿ ವಿಶಾಲವಾದ ಶೋಷಿತ ಜನಸ್ತೋಮಕ್ಕೆ ಪ್ರಜಾಸತ್ತಾತ್ಮಕ ರಾಜಕೀಯ ಪಕ್ಷವೊಂದು ಇಲ್ಲದಂತೆ ಆಗಿಹೋಯಿತು. ಅದರಿಂದಾಗಿ, ರಾಜಕೀಯ ಆರ್ಥಿಕ ಪ್ರಶ್ನೆಗಳು ಮುಂಚೂಣಿಗೆ ಬರಲಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಸಾಮ್ರಾಜ್ಯಶಾಹಿ ಶೋಷಣೆಗೆ ಇಂಡಿಯಾವನ್ನು ಬಲಿಯಾಗಿಸಿರುವ ಸತ್ಯವನ್ನು ಯಶಸ್ವಿಯಾಗಿ ಮುಚ್ಚಿಡಲಾಗಿದೆ ಎಂಬುದು ಇದರರ್ಥ.

ಸಾಮ್ರಾಜ್ಯಶಾಹಿ ಶಿಬಿರದ ವೈರುಧ್ಯಗಳು ದಿನದಿಂದ ದಿನಕ್ಕೆ ತೀವ್ರಗೊಳ್ಳುತ್ತಿವೆ. ಜಗತ್ತಿನೆಲ್ಲೆಡೆ ಜಾಗತೀಕರಣ ನೀತಿಗಳನ್ನು ಜನತೆಯು ಸ್ವಯಂ ಪ್ರೇರಣೆ ಮತ್ತು ಕ್ರಾಂತಿಕಾರಿ ರಾಜಕೀಯ ತಿಳುವಳಿಕೆಯಿಂದಾಗಿ ವಿರೋಧಿಸುತ್ತಿದೆ. ಇದು ಸಾಮ್ರಾಜ್ಯಶಾಹಿ ಸುಳಿಗೆ

ಕೋರರಿಗೆ ನುಂಗಲಾರದ ತುತ್ತಾಗಿದೆ. ಜಾಗತಿಕ ರಾಜಕೀಯ ಮತ್ತು ಆರ್ಥಿಕ ಶೋಷಣೆಯನ್ನು ಹಾಗೆಯೇ ಮುಂದುವರಿಸಿಕೊಂಡು ಹೋಗಬೇಕು ಎಂಬುದು ಅವರ ತಂತ್ರ. ಇದಕ್ಕೆ ಅವರು ಬಳಸುತ್ತಿರುವ ವಿಧಾನವೆಂದರೆ, ರಾಜಕೀಯ ಮತ್ತು ಆರ್ಥಿಕ ವಿಚಾರಗಳ ಕಡೆ ಜನತೆ ಗಮನಹರಿಸದಂತೆ ಮಾಡುವುದಾಗಿದೆ. ಇಂತಹ ಕಾರ್ಯಸೂಚಿಯನ್ನು ಜಗತ್ತಿನೆಲ್ಲೆಡೆ ಅವರು ಪ್ರಯೋಗಿಸುತ್ತಲೇ ಬಂದಿದ್ದಾರೆ. ಜನತೆಯನ್ನು ರಾಜಕೀಯ - ಆರ್ಥಿಕ ಸಮಸ್ಯೆಗಳಿಂದ ವಿಮುಖರಾಗುವಂತೆ ಮಾಡುವ ಏಕೈಕ ಯಶಸ್ವಿ ರಾಜಕೀಯ ಪಕ್ಷವೆಂದರೆ ಭಾಜಪ. ಉಳಿದ ಕೆಲವು ಪಕ್ಷಗಳೂ ಈ ಕೆಲಸವನ್ನು ಮಾಡುತ್ತವೆಯಾದರೂ ಅವೆಲ್ಲ ಹಳೆಯ ವಿಧಾನಗಳಾಗಿ ಲೊಡ್ಡದ್ದುಹೋಗಿವೆ. ತುಂಬಾ ವಿಶಾಲವಾದ ಮತ್ತು ದೀರ್ಘ ಇತಿಹಾಸವಿರುವ ಪಕ್ಷವೆಂದರೆ ಕಾಂಗ್ರೆಸ್. ಕಾಂಗ್ರೆಸ್ ಬಗ್ಗೆ ಜನತೆಗೆ ವಿಚಿತ್ರವಾದ ಮೂರು ನಂಬಿಕೆಗಳಿವೆ. ಅ. ಕಾಂಗ್ರೆಸ್ ದಲಿತರ ಪರ ಇರುವ ಪಕ್ಷ; ಆ. ಕಾಂಗ್ರೆಸ್ ಬ್ರಿಟಿಷ್ ವಿರೋಧವಾಗಿ ಹೋರಾಡಿದ ಪಕ್ಷ; ಇ. ಕಾಂಗ್ರೆಸ್ ಮುಸ್ಲಿಮರ ಪರ ಇರುವ ಪಕ್ಷ. ಈ ಮೂರು ಭಾವನಾತ್ಮಕ ತಳಮಟ್ಟದ ಕಾರಣಗಳೂ ಕಾಂಗ್ರೆಸ್‌ನ ಮತಬ್ಯಾಂಕಿಗೆ ಬಲಿಯಾಗಿವೆ. ಇಂತಹ ಸಂದರ್ಭಗಳಲ್ಲಿ ಮುಸ್ಲಿಮರನ್ನು ಪ್ರತ್ಯಕ್ಷವಾಗಿ ಮತ್ತು ನೇರವಾಗಿ 'ಶತ್ರು' ಎಂದು ಪರಿಗಣಿಸುವ, ದಲಿತರನ್ನು ಆದಿಯ ಸಾಂಸ್ಕೃತಿಕ ಅಧೋಲೋಕಕ್ಕೆ ತಳ್ಳುವ, ಪರಿಣಾಮಕಾರಿ ಹುನ್ನಾರವುಳ್ಳ ಆಳುವ ರಾಜಕೀಯ ಪಕ್ಷದ ಅಗತ್ಯವಿದೆ ಎಂಬುದು ಸಾಮ್ರಾಜ್ಯಶಾಹಿಗಳ ರಾಜಕೀಯ ವಿಶ್ಲೇಷಣೆಯಾಗಿದೆ. ಕಾಂಗ್ರೆಸ್‌ಗಿಂತ ಭಾಜಪ ತಮಗೆ ಅನುಕೂಲವಾದ ಪಕ್ಷ ಎಂಬುದು ಸಾಮ್ರಾಜ್ಯಶಾಹಿಗಳ ತೀರ್ಮಾನವಾಗಿದೆ.

ಈ ಹಿನ್ನೆಲೆಯಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಅದೇನೆಂದರೆ, ಅಕಡೆಮಿಕ್ ವಲಯಕ್ಕೆ ಸರ್ಕಾರೇತರ ಸಂಘಟನೆಗಳ ಚಿಂತನೆಗಳು ಪರಿಣಾಮಕಾರಿಯಾಗಿ ಲಗ್ಗೆ ಇಟ್ಟಿವೆ. ವ್ಯವಸ್ಥೆಯಲ್ಲಿ ಸೇರ್ಪಡೆ ಹೊಂದಿರುವ ವಿದ್ವಾಂಸರು ಎರಡು ವಿಷಯಗಳನ್ನು ಕೇಂದ್ರೀಕರಿಸಿ ಇಲ್ಲವೆ ಜೋಡಿಸಿ ಮಾತನಾಡುತ್ತಾರೆ. ಒಂದು ಜಾಗತೀಕರಣ ಮತ್ತೊಂದು ಸಂಸ್ಕೃತಿ. ಜಾಗತೀಕರಣದ ಬಗ್ಗೆ ಮಾತನಾಡುವಾಗ ಅದನ್ನು ವಿರೋಧಿಸುವುದು ಸರಿಯಲ್ಲ, ಎಲ್ಲವನ್ನೂ ನೆಗೆಟಿವ್ ಆಗಿ ನೋಡಬೇಕಿಲ್ಲ, ಎಲ್ಲರೂ ಜಾಗತೀಕರಣದ ಲಾಭ ಪಡೆಯಬೇಕು ಎಂದು ಹೇಳುತ್ತಿದ್ದಾರೆ. ಜಾಗತೀಕರಣ ನೀತಿಗಳಿಂದಾಗಿ ಕೋಟ್ಯಾನು ಕೋಟಿ ಮಂದಿ ಬೀದಿಗೆ ಬಿದ್ದಿರುವಾಗ ಆ ಸುಡು ವಾಸ್ತವದ ಸಮಾಧಿಯ ಮೇಲೆ ಇವರು ಜಾಗತೀಕರಣವನ್ನು ವೈಭವೀಕರಿಸುತ್ತಿದ್ದಾರೆ. ಇನ್ನೊಂದು ಅಂಶ 'ಸಂಸ್ಕೃತಿ'ಗೆ ಸಂಬಂಧಿಸಿದ್ದು. ಭಾಜಪ ಇಡೀ ರಾಷ್ಟ್ರಕ್ಕೆ ಒಂದೇ ಸಂಸ್ಕೃತಿ ಇರಬೇಕು, ಎಲ್ಲರೂ ಈ ಛತ್ರಿಯ ಕೆಳಗೆ ಆಶ್ರಯ ಪಡೆಯಬೇಕು ಎಂದು ಹೇಳುತ್ತಿದೆ. ಇದಕ್ಕೆ ಉತ್ತರವಾಗಿ ಇಂಡಿಯಾದಲ್ಲಿ ಒಂದು ಸಂಸ್ಕೃತಿ ಇಲ್ಲ; ಇಲ್ಲಿ 'ಬಹುಸಂಸ್ಕೃತಿ'ಗಳಿವೆ, 'ಬಹುಭಾಷೆ'ಗಳಿವೆ ಎಂಬ ವಾದವನ್ನು ಮುಂದುಮಾಡಲಾಗುತ್ತಿದೆ. ಕೆಲವು ಸರ್ಕಾರೇತರ ಸಂಸ್ಥೆಗಳ ಬೇರುಮಟ್ಟದ ಕೆಲಸದಿಂದಾಗಿ ನೂರಾರು ಜಾತಿ, ಒಳಜಾತಿ, ಕುಲ, ಪಂಗಡಗಳ ನೆಲೆಯಲ್ಲೂ ಇಂಥ ಸಂಘಗಳು ಹುಟ್ಟಿವೆ. ಇವು ತಮ್ಮ ತಮ್ಮಲ್ಲೇ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳುವುದು, ತಮಗೂ ಒಂದು ಮೂಲವಿತ್ತು, ಪರಂಪರೆಯಿತ್ತು, ಮಠ ಇತ್ತು ಎಂದೆಲ್ಲ ಹೇಳುತ್ತಾ ಅರಾಜಕೀಯವಾಗಿ, ಅನೈಕ್ಯತೆಯತ್ತ ಸಾಗುತ್ತಿವೆ. ಶ್ರಮ-ಬಂಡವಾಳವನ್ನು ಹೊರತುಪಡಿಸಿ ಕೇವಲ ಉಡುಪು, ಆಹಾರ, ಮದುವೆ ಮುಂತಾದುವನ್ನು ಆಕರಗಳಾಗಿ ಪರಿಗಣಿಸಿ ಬಹು ಸಂಸ್ಕೃತಿಗಳನ್ನು ಕುರಿತ ಭರ್ಜರಿ ಭಜನೆ ಭರದಿಂದಲೇ ಸಾಗಿದೆ. ಈ 'ಬಹುಭಾಷೆ'ಯ ಮತ್ತು 'ಬಹುಸಂಸ್ಕೃತಿ'ಯ ಪರಿಭಾಷೆ 'ಏಕ ಸಂಸ್ಕೃತಿ'ಯ ವಕ್ತಾರರಿಗಿಂತಲೂ ಅಪಾಯಕಾರಿಯಾದುದು. ಯಾಕೆಂದರೆ, ಸಂಸ್ಕೃತಿಗಳೊಳಗೆ ಪ್ರಕ್ರಿಯೆಯಾಗಿ ಸಾಗಿರುವ ವೈರುಧ್ಯವನ್ನು ಅರ್ಥಾತ್ ಶೋಷಣೆಯನ್ನು ಇವರೆಲ್ಲ ನಯವಾಗಿ ಮುಚ್ಚಿಡುತ್ತಿದ್ದಾರೆ. ಯಾವ ಸಂಸ್ಕೃತಿಗಳೂ ತಮ್ಮಷ್ಟಕ್ಕೇ ತಾವು ಸ್ವಯಂಪೂರ್ಣ ಘಟಕಗಳಲ್ಲ. ಅವುಗಳ ನಡುವಿನ ಸಂಬಂಧ ನಿರಂತರವಾಗಿ ಸಂಘರ್ಷಮಯವಾದುದು. 'ಅಖಿಲ ಭಾರತೀಯ ಏಕಸಂಸ್ಕೃತಿ'ಯ ಪ್ರತಿಪಾದನೆಯನ್ನು ವಿರೋಧಿಸುವ ಅಪ್ರಬುದ್ಧ ರಾಜಕೀಯ ಉತ್ಸಾಹದಲ್ಲಿ ಬಹುಸಂಸ್ಕೃತಿಗಳನ್ನು ಪ್ರತಿಪಾದನೆ ಮಾಡುತ್ತಿರುವವರೆಲ್ಲ ಪರೋಕ್ಷವಾಗಿ ಹಿಂದುತ್ವವನ್ನೇ ಸಮರ್ಥಿಸುತ್ತಿದ್ದಾರೆ. ಹೇಗೆಂದರೆ, ಏಕಸಂಸ್ಕೃತಿಯ ಪ್ರತಿಪಾದಕರೂ ಭಿನ್ನ ಸಂಸ್ಕೃತಿಗಳ ನಡುವಿನ ವೈರುಧ್ಯ-ಸಂಘರ್ಷಗಳನ್ನು ಮುಚ್ಚಿಡುತ್ತಿದ್ದಾರೆ. ಅದೇ ರೀತಿ ಬಹುಸಂಸ್ಕೃತಿ ಪ್ರತಿಪಾದಕರೂ ಕೂಡ 'ಬಹುಸಂಸ್ಕೃತಿ' ಹೆಸರಿನಲ್ಲಿ ಭಿನ್ನ ಸಂಸ್ಕೃತಿಗಳ ನಡುವಿನ ವೈರುಧ್ಯ-ಸಂಘರ್ಷಗಳನ್ನು ಮುಚ್ಚಿಡುತ್ತಿದ್ದಾರೆ. ಮೇಲ್ನೋಟಕ್ಕೆ ಇವರಿಬ್ಬರೂ ಪರಸ್ಪರ ವಿರೋಧಿ ಬಣದವರಂತೆ ತೋರಿಸಿ ಕೊಳ್ಳುತ್ತಾರೆ. ರಾಜಕೀಯ ಆಳದಲ್ಲಿ ಈ ಇಬ್ಬರೂ ಒಂದೇ ನೆಲೆಯಲ್ಲಿ ನಿಂತಿದ್ದಾರೆ. ಇಂದು ಕಾಂಗ್ರೆಸ್‌ಗೆ ಪರ್ಯಾಯ ಭಾಜಪ ಎಂದು ಸಾಮಾಜಿಕ ಅಭಿಪ್ರಾಯವನ್ನು ರೂಪಿಸಲಾಗಿದೆ. ಜನತೆ ಈ ಅಭಿಪ್ರಾಯವನ್ನು ತಮ್ಮದೇ ಎಂಬಂತೆ ನುಡಿಯುತ್ತಿದ್ದಾರೆ. ಯಾಕೆಂದರೆ ಇವರ ಮಟ್ಟಿಗೆ ಈ ಎರಡು ಪಕ್ಷಗಳನ್ನು ಹೊರತುಪಡಿಸಿದ ರಾಜಕೀಯ ಪಕ್ಷವೊಂದರ ಅಥವಾ ರಂಗವೊಂದರ ಗೈರುಹಾಜರಿ ಇದೆ. ಇದರೊಂದಿಗೆ ಲಭ್ಯವಿರುವ ಕೆಲವು ಅಡ್ಡದಾರಿ ಗಳೆಂದರೆ ಬಹುಜನ ಸಮಾಜ ಪಕ್ಷದಂತಹ ಕೆಲವು ಪಕ್ಷಗಳು. ಕ್ರಾಂತಿಕಾರಿ ರಾಜಕೀಯ ಚಿಂತನೆಯ ತಾತ್ಕಾಲಿಕ ಹಿನ್ನಡೆ ಮತ್ತು ಕ್ರಾಂತಿಕಾರಿ ರಾಜಕೀಯ ಪಕ್ಷದ ಗೈರುಹಾಜರಿಯಲ್ಲಿ ಹಿಂದುತ್ವ ಇಂದು ತಲೆ ಎತ್ತಿ ನಿಂತಿದೆ. ಸಾಮ್ರಾಜ್ಯಶಾಹಿಗಳ ಬಹುರಾಷ್ಟ್ರೀಯ ಕಂಪೆನಿಗಳು, ಎನ್‌ಜಿಒಗಳು, ಕಾಂಗ್ರೆಸ್‌ನ ವೈಫಲ್ಯಗಳು ಇವೆಲ್ಲವೂ ಅದಕ್ಕೆ ಅಡಿಗಲ್ಲಾಗಿ, ಬೆನ್ನೆಲುಬಾಗಿ ನಿಂತಿವೆ. 'ಹಿಂದುತ್ವ'ವನ್ನು ಜಾತಿ-ವರ್ಣ ಮುಂತಾದ ಮಾಜಿ ಮಾಡೆಲ್‌ಗಳಲ್ಲಿ ಗುರುತಿಸಿ ವಿರೋಧಿಸಿದುದರ ಫಲಿತಾಂಶವೇ ೯೦ರ ದಶಕದಲ್ಲಿ ಅದು ಬಲಾಢ್ಯವಾಗಿ ಬೆಳೆಯಲು ಕಾರಣವಾಯಿತು.

'ಹಿಂದುತ್ವ'ದ ಸ್ವರೂಪವನ್ನು ರಾಜಕೀಯ- ಆರ್ಥಿಕ ಸಂಬಂಧಗಳ ನೆಲೆಯಲ್ಲಿ ಮಾತ್ರವೇ ಸಮರ್ಥವಾಗಿ ಗುರುತಿಸಲು ಸಾಧ್ಯ. ಈ ವಿಧಾನವನ್ನು ಹೊರತುಪಡಿಸಿ ಬೇರೆ ವಿಧಾನ ಇಲ್ಲ. 'ಹಿಂದುತ್ವ'ವನ್ನು ಕೇವಲ ಜಾತಿ-ಧರ್ಮ-ವರ್ಣದ ನೆಲೆಯಲ್ಲಿ ಗುರುತಿಸುವ ಅಪಾಯದ ಮೇರು ಉದಾಹರಣೆ ಎಂದರೆ ಬಾಬಾಬುಡನ್‌ಗಿರಿಯ ಬೆಳವಣಿಗೆ. (ಅದನ್ನೀಗ ದತ್ತಪೀಠ ಎಂದು ಕರೆಯಲಾಗುತ್ತಿದೆ. ದತ್ತ ಜಯಂತಿ ನಡೆಸಲಾಗುತ್ತಿದೆ.) 'ಕರ್ನಾಟಕವನ್ನು ಅಯೋಧ್ಯೆ ಮಾಡುತ್ತೇವೆ' ಎಂದು ಹೇಳಿದರೆಂದು ಅವರ ವಿರುದ್ಧ ಉರಿದು ಬಿದ್ದವರಿದ್ದಾರೆ. ಬಾಬಾ ಬುಡನ್‌ಗಿರಿಯನ್ನು ದತ್ತಪೀಠ ಮಾಡಲು ಹೊರಟವರನ್ನು ಭಜರಂಗದಳದವರೆಂದು, ಕೋಮುವಾದಿಗಳೆಂದು ಕರೆಯಲಾಗಿದೆ. ಜೊತೆಗೆ ಅವರನ್ನು ಬ್ರಾಹ್ಮಣಶಾಹಿಗಳೆಂದು, ಪುರೋಹಿತಶಾಹಿಗಳೆಂದು ಭ್ರಮಿಸಿ ನಿವೃತ್ತ ಬತ್ತಳಿಕೆಯ ಅಸ್ತ್ರಗಳನ್ನು ಒಂದೇ ಸಮನೆ ಎಸೆಯಲಾಗುತ್ತಿದೆ. ಮುಖ್ಯ ಸಮಸ್ಯೆ ಎಂದರೆ ಚಿಕ್ಕಮಗಳೂರಿನ ಭಜರಂಗದಳದಲ್ಲಿ ಯಾವ ಬ್ರಾಹ್ಮಣ ಶಕ್ತಿಯೂ ಇಲ್ಲ. ಅಲ್ಲಿರುವುದೆಲ್ಲ ಭೂಮಾಲಿಕ ಶಕ್ತಿ. ೧೯೯೫ರಲ್ಲಿ ಕಾಫಿ ಬೆಲೆ ಉದಾರೀಕರಣದಿಂದಾಗಿ ಗಗನಕ್ಕೆ ಹೋಯಿತು. ಇದರ ಜೊತೆಯಲ್ಲೇ ಆ ಭಾಗದ ದೊಡ್ಡ ದೊಡ್ಡ ಕಾಫಿ ಬೆಳೆಗಾರರ ಜೀವನ ಮಟ್ಟ ಗಗನವನ್ನೂ ಮೀರಿ ಸ್ವರ್ಗಕ್ಕೇ ಹೋಯಿತು. ೧೯೯೯-೨೦೦೦ದ ಹೊತ್ತಿಗೆ ಜಾಗತಿಕ ಮಾರುಕಟ್ಟೆಯ ಪರಿಣಾಮದಿಂದ ಕಾಫಿ ಬೆಲೆ ನೆಲ ಕಚ್ಚಿತು. ಇವರ ಪರಿಸ್ಥಿತಿ ಚಿಂತಾಜನಕವಾಯಿತು. ಈ ಭಾರೀ ಕಂದರವನ್ನು ತುಂಬಿಕೊಳ್ಳುವ ಸಲುವಾಗಿ ಮರದ ಮಾರಾಟಕ್ಕೆ ಮುಂದಾಗಿದ್ದಾರೆ. ಮರದ ವ್ಯಾಪಾರಿಗಳಾದ ಮುಸ್ಲಿಮರಿಗೂ ಕಾಫಿ ಮಾಲೀಕರಾದ ಮುಸ್ಲಿಮೇತರರಿಗೂ ವ್ಯಾಪಾರದ ಸಮಸ್ಯೆ ಎದುರಾಗಿದೆ. ಇದರ ಪರಿಣಾಮವಾಗಿ ಬಾಬಾಬುಡನ್‌ಗಿರಿ ದತ್ತಪೀಠದ ರೂಪವನ್ನು ಪಡೆದಿದೆ. ಈ ಮುಖ್ಯ ವಿಷಯವನ್ನು ಸರಿಯಾಗಿ ಪರಿಶೀಲಿಸದೆ, ಕೇವಲ ಬ್ರಾಹ್ಮಣಶಾಹಿಗಳು, ಪುರೋಹಿತಶಾಹಿಗಳು ಎಂದು ಭಜನೆ ಮಾಡುವುದು ಇನ್ನಾದರೂ ನಿಲ್ಲಬೇಕು.




'ಹಿಂದುತ್ವ' ಬ್ರಾಹ್ಮಣರ ಸೃಷ್ಟಿಯಲ್ಲ. ಅದು ವೈದಿಕರ ಸೃಷ್ಟಿ ಮೊದಲೇ ಅಲ್ಲ, ಪುರೋಹಿತರ ಸೃಷ್ಟಿಯಂತೂ ಅಲ್ಲವೇ ಅಲ್ಲ. ರಾಜಕೀಯ-ಆರ್ಥಿಕ ವೈರುಧ್ಯಗಳನ್ನು ದುರುಪಯೋಗಮಾಡಿ ಕೊಳ್ಳುವ ಮೂಲಕ ಭಾವನಾತ್ಮಕ ವಿಷಯವನ್ನು 'ಸಮಸ್ಯೆ' ಎಂದು ಸಾರುವ, ಪ್ರಚಾರ ಮಾಡುವ ತಂತ್ರ ಇದು. ಸಾಮ್ರಾಜ್ಯಶಾಹಿ, ಬಹುರಾಷ್ಟ್ರೀಯ ಕಂಪೆನಿಗಳು, ಎನ್‌ಜಿಒಗಳು ಆಳುವ ವರ್ಗಗಳು, ವಿಶಾಲವಾದ ಶೋಷಿತ ಜನ ಸಮುದಾಯಗಳು ಇವುಗಳ ನಿರಂತರ ಘರ್ಷಣೆ ಮತ್ತು ವೈರುಧ್ಯಗಳ ಫಲವಾಗಿ 'ಹಿಂದುತ್ವ' ಶೋಷಕರ ಪಾಲಿನ ತಂತ್ರವಾಗಿ, ಕುತಂತ್ರವಾಗಿ, ವಿಧಾನವಾಗಿ, ಅಡ್ಡದಾರಿಯಾಗಿ, ಕೆಲವೊಮ್ಮೆ ರಾಜಮಾರ್ಗವಾಗಿ ಮೈದಳೆದು ನಿಂತಿದೆ. ರಾಜಕೀಯ-ಆರ್ಥಿಕ ಸಮಸ್ಯೆಗಳು ಬಗೆಹರಿಯದ ಹೊರತು 'ಹಿಂದುತ್ವ' ನಾಶವಾಗುವುದಿಲ್ಲ. 'ಹಿಂದುತ್ವ'ದ ನಾಶಕ್ಕಾಗಿ ಪ್ರಜಾತಾಂತ್ರಿಕ ಕ್ರಾಂತಿಕಾರಿ ಮಾರ್ಗ ಒಂದೇ ಉಳಿದಿರುವ ದಾರಿಯಾಗಿದೆ.

ಬಿ. ಎಂ. ಪುಟ್ಟಯ್ಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



# ಮನೆ ಎಂಬ ಕಸದ ತೊಟ್ಟಿ

ಆರು ತಿಂಗಳಿಗೊಮ್ಮೆಯಾದರೂ ಮನೆಯಲ್ಲಿ ಕಡತಯಜ್ಞ ಮಾಡದಿದ್ದರೆ ನನ್ನ ತಲೆಯಲ್ಲಿ ಹುಳುಗಳು ಮಿಜಿಗುಟ್ಟತೊಡಗುತ್ತವೆ. ಬೇಕಾದ್ದು, ಬೇಡಾದ್ದು ಎಂದು ಮನೆಯಲ್ಲಿ ಅದೆಷ್ಟೊಂದು ಕಾಗದಪತ್ರಗಳು ಒಟ್ಟಾಗಿರುತ್ತವೆಂದರೆ ಒಲೆಗೆ ಹಾಕಿ ನೀರು ಕಾಯಿಸಿದರೆ ಒಂದು ಹಂಡೆ ನೀರು ಕಟ್ಟಗೆ ಕಾಯುತ್ತದೆ. ಮದುವೆ, ಮುಂಜಿ, ಮನೆ ಒಕ್ಕಲಿನ ಆಹ್ವಾನಪತ್ರಿಕೆಗಳು, ಜೀವವಿಮಾನಿಗಮದ ಕಂತುಕಟ್ಟಲು ನೆನಪಿಸುವ ನೋಟಿಸುಗಳು, ಲೈಟುಬಿಲ್ಲು, ಪೇಪರಿನೊಳಗೆ ಅಡಗಿ ಕೂತು ಮನೆಯೊಳಗೆ ಹಾರಿಬೀಳುವ ಪ್ರಚಾರದ ಕರಪತ್ರಗಳು, ಇನ್ನೂ ಪತ್ರ ಬರೆಯುವ ಶೋಕಿ ಉಳಿಸಿಕೊಂಡಿರುವ ಕೆಲವರ ಅಂಚೆ ಪತ್ರಗಳು, ಸಾಮಾನಿನ ಚೀಟಿಗಳು, ದರದ ಬಿಲ್ಲುಗಳು, ಈ ಎಲ್ಲದರೆಡೆ ರಾಯರ ಆಫೀಸಿನ ವ್ಯವಹಾರ ಸಂಬಂಧಿ ಕಾಗದಗಳು, ಮೀಟಿಂಗಿನ ತಿಳುವಳಿಕೆ ಪತ್ರಗಳು... ಹೀಗೆ ಹೆಸರಿಸುತ್ತಾ ಹೋದರೆ ಕೊನೆಮೊದಲೆನ್ನುವುದುಂಟೇ? ವಾರ, ಮಾಸ, ದಿನಪತ್ರಿಕೆಗಳನ್ನು ಈ ಲಿಸ್ಟಿನಿಂದ ಉದ್ದೇಶಪೂರ್ವಕ ಹೊರಗಿರಿಸಿದ್ದೇನೆ. ನೋಟು ಎಣಿಸಿ ಕೊಂಡುಕೊಂಡ ಇವುಗಳನ್ನು ಝಣಝಣ ಚಿಲ್ಲರೆಗಾದರೂ ಮರಳಿ ಮಾರಾಟ ಮಾಡುವ ಸಾಧ್ಯತೆ ಉಂಟು. ಹಾಗಾಗಿ ಯಜ್ಞಕಾರ್ಯದಿಂದ ಅವಕ್ಕೆ ವಿನಾಯಿತಿ. ತಮಾಷೆ ಅಂದರೆ ಯಾವತ್ತೂ ನಾನು ಕಡತಯಜ್ಞ ಮುಗಿಸಿ ಕಾದ ನೀರಿನಿಂದ ತಲೆಗೆ ನೀರೆರೆದುಕೊಂಡು ಹಗುರವಾಗಿರುತ್ತೇನೋ ಅದೇ ದಿನ ರಾಯರಿಗೆ ಅರ್ಜೆಂಟಾಗಿ ಯಾವುದೋ ಕಾಗದ ಬೇಕಾಗಿರುತ್ತದೆ. ಆಕಾಶ, ಪಾತಾಳ ಒಂದು ಮಾಡುವಂತೆ ಹುಡುಕುತ್ತಾ ಈ ಹುಟುಕಾಟದ ನಡುವೆ ಯಥಾಶಕ್ತಿ ನನಗೆ ಮಂತ್ರಪುಷ್ಪಗಳಿಂದ ಅರ್ಚನೆ ಮಾಡುತ್ತಾ, ನನ್ನ ಬೇಜವಾಬ್ದಾರಿಯನ್ನು ಅವರು ಕಟುಮಾತುಗಳಿಂದ ಖಂಡಿಸುತ್ತಾರೆ. ದೇವರಾಣೆ ಅವರಿಗೆ ಸಂಬಂಧಿಸಿದ ಪತ್ರಗಳಿಗೆ ನಾನು ಕೈಹಚ್ಚಿರುವುದಿಲ್ಲ. 'ಬೇಡ....' ಅಂದುಕೊಂಡಿದ್ದರ ಮೇಲೆ ಮತ್ತೊಮ್ಮೆ ಕಣ್ಣಾಡಿಸಿ, ಆವಶ್ಯಕವಾದದ್ದೇನನ್ನೂ ನಾನು ನಾಶ ಮಾಡುತ್ತಿಲ್ಲವೆಂದು ಖಚಿತಪಡಿಸಿಕೊಂಡು ವಿಲೇವಾರಿ ಮಾಡಿರುತ್ತೇನೆ. ಆದರೂ ರಾಯರಿಗೆ ಯಾಕೆ ಈ ಅನುಮಾನವೋ ಪರಮಾತ್ಮ ಬಲ್ಲ. ಪೇಪರು ಸುಟ್ಟ ವಾಸನೆಗೆ ಅವರ ಮೂಗು ಬಹಳ ಸೂಕ್ಷ್ಮವಾಗಿ ಪ್ರತಿಸ್ಪಂದಿಸುತ್ತದೆ ಎಂಬುದು ನನ್ನ ಅನುಭವ. ಬೆಳಿಗ್ಗೆ ಹತ್ತು ಘಂಟೆಗೆ ಪೇಪರುಗಳು ಉರಿದು ಬೂದಿಯಾಗಿದ್ದರೆ ಸಂಜೆ ಮನೆಗೆ ಬಂದ ಮೇಲೆ ಸುಳಿವು ಹಿಡಿಯಬಲ್ಲರು. ತಕ್ಷಣ ನನ್ನ ಮೇಲೆ ಗುಮಾನಿ ಶುರುವಾಗುತ್ತದೆ. ತೀರಾ ಮುಖ್ಯ ಎಂದು ಎಲ್ಲೋ ಜಾಗರೂಕತೆಯಿಂದ ಎತ್ತಿಟ್ಟ ಪತ್ರದ ನೆನಪಾಗುತ್ತದೆ. ಹುಡುಕುತ್ತಾರೆ. ಇಟ್ಟ ಜಾಗ ಮರೆತು ಎಲ್ಲೋ ಹುಡುಕಿದರೆ ಅದು ಸಿಕ್ಕಿತಾದರೂ ಹೇಗೆ? ನಮ್ಮ ಮನೆಯಲ್ಲಿ ಯಾವಾಗಲೂ ಹೀಗೇ. 'ಇದು ಕಳೆಯಬಾರದು' ಎಂದುಕೊಂಡಿದ್ದಕ್ಕೆ ಪ್ರತ್ಯೇಕ ಮುತುವರ್ಜಿ. ಮದುವೆಯ ಹೊತ್ತಿಗೆ ಹೊಲಿಸಿ ಮೂರುದಿನ ಹಾಕಿ ಈಗ ಬೂಸಲು ಹಿಡಿದ ಕೋಟಿನ ಒಳಜೇಬಿನಲ್ಲೋ, ಬೀರುವಿನ ಮೇಲ್ಭಾಗದ ಅರೆಯಲ್ಲೋ, ನನ್ನ ಕಣ್ಣಿಗೆ ಸುಲಭವಾಗಿ ಬೀಳದ ಜಾಗದಲ್ಲಿ ಇಡುವ ಪ್ರಯತ್ನದಲ್ಲಿ ಬೇಕಾದ್ದನ್ನು ಎಲ್ಲೋ ಇಟ್ಟು, ಇಟ್ಟದ್ದನ್ನು ಅಷ್ಟೇ ಬುದ್ಧಿವಂತಿಕೆಯಿಂದ ಮರೆತೂ ಬಿಟ್ಟಿರುತ್ತಾರೆ. ಇಂತಹವುಗಳನ್ನು ಇಡುವುದಕ್ಕಾಗಿಯೇ ಮನೆಯ ಗಾಡ್ರೆಜ್ ಬೀರುವಿನೊಳಗೆ ಒಂದು ಪ್ರತ್ಯೇಕ ಬ್ಯಾಗ್ ಇದೆ. ಆದರೆ ಅದು ಪದೇಪದೇ ತೆಗೆಯದ ಮಹತ್ವದ ಪತ್ರಗಳಿಗೆ ಮೀಸಲು. ವರ್ಷ, ಎರಡು ವರ್ಷಗಳಿಗೊಮ್ಮೆ ಮಾತ್ರ ಅದು ಕತ್ತಲಿಂದ ಬೆಳಕಿಗೆ ಬರುವಂತಾದ್ದು. ಹಾಗಾಗಿ ಸದ್ಯದಲ್ಲಿ ಚಲಾವಣೆಯಾಗಬೇಕಾದ್ದನ್ನು ಕಣ್ಣಿಗೆ, ಕೈಗೆ ಸಲೀಸಾಗಿ, ಸಿಗುವಂಥ ಜಾಗದಲ್ಲಿಡಬೇಕೆಂಬುದು ರಾಯರ ಅಭಿಮತ. ಅವರ ಕಣ್ಣಿಗೆ, ಕೈಗೆ ಸಲೀಸಾಗಿ, ನನಗೆ ಥಕ್ಕನೆ ಕಾಣದಂತಾ ಜಾಗ ಹುಡುಕಿದವರು ಬೇಸ್ತು ಬಿದ್ದರೆ ನನ್ನದೇನು ತಪ್ಪಿದೆ? 'ಅನಿಷ್ಟಕ್ಕೆಲ್ಲಾ ಶನೀಶ್ವರ ಹೊಣೆ' ಎನ್ನುವಂತೆ ನನ್ನ ಮೇಲೆ ಆರೋಪ. 'ಮನೆ ಕ್ಲೀನ್ ಮಾಡುವ ನಿನ್ನ ಅವಾಂತರದಲ್ಲಿ ನೀನೇ ಏನೋ ಮಾಡಿದ್ದಿ' ಎನ್ನುವ ದೋಷಾರೋಪಣೆ. ನನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಲು ನಾನೂ ಅವರೊಂದಿಗೆ ಮನೆಯಿಡೀ ಮುಗುಚಿ ಹಾಕಿ, 'ತಲೆ ಬಿಚ್ಚಿ ಹಾಕಿಕೊಂಡು ಹುಡುಕೋದು' ಅನ್ನುವ ಮಾತು ಕೇಳಿದ್ದೀರಾ? ಥೇಟ್ ಅದೇ ಥರ ಹುಡುಕಿ, ಕೊನೆಗೂ ಆ ಕಾಗದ ಸಿಗುತ್ತದೆ ಅನ್ನಿ. ವೃಥಾ ನನ್ನ ಪ್ರಾಮಾಣಿಕತೆಯನ್ನು ಶಂಕಿಸಿದ್ದಕ್ಕೆ ರಾಯರನ್ನು ತರಾಟೆಗೆ ತೆಗೆದು ಕೊಂಡು, ಬೇಕಾದ್ದಿರಲಿ, ಬೇಡಾದ್ದಿರಲಿ, ಇನ್ನು ಈ ಕಾಗದ ಪತ್ರಗಳ ತಂಟೆಗೆ ಹೋಗಬಾರದು ಎನ್ನುವ ಶಪಥ ಮಾಡುತ್ತೇನೆ. ಆದರೆ ಆರೇಳು ತಿಂಗಳು ಕಳೆಯಿತು ಎನ್ನುವಷ್ಟರಲ್ಲಿ ರಾಶಿ ಬಿದ್ದ ಇವುಗಳನ್ನು ನೋಡಿ ತಲೆಯಲ್ಲಿ ಹುಳುಗಳು ಮಿಜಿಗುಟ್ಟತೊಡಗಿ......

ನಮ್ಮ ಮನೆಯಲ್ಲಿ ಒಬ್ಬರು ಏತಿ ಅಂದರೆ ಮತ್ತೊಬ್ಬರು ಪ್ರೇತಿ ಅನ್ನುವವರು. ಯಾವುದೇ ವಸ್ತುವಾಗಿರಲಿ ಅದನ್ನು ಎಸೆಯಬಾರದು, ಮುಂದೆ ಯಾವತ್ತೋ ಒಂದು ದಿನ ಉಪಯೋಗಕ್ಕೆ ಬರುತ್ತದೆ ಎನ್ನುವುದು ರಾಯರ ವಿಚಾರ. ಬೇಡದೆ ಇರುವುದನ್ನು ನಿರ್ದಾಕ್ಷಿಣ್ಯವಾಗಿ ಎಸೆಯದೆ ಎತ್ತಿಟ್ಟುಕೊಂಡೆವೋ ಮುಂದೆ ಮನೆಯಲ್ಲಿ ಬೇಕಾದುದಕ್ಕಿಂತಾ ಬೇಡವಾದ ವಸ್ತುಗಳೇ ಹೆಚ್ಚಿಗೆ ತುಂಬಿಬಿಡುತ್ತವೆ ಎನ್ನುವುದು ನನ್ನ ವಾದ. ಈ ಬೇಕಾದ್ದು ಯಾವುದು, ಬೇಡವಾದ್ದು ಯಾವುದು ಅನ್ನುವುದರ ಬಗ್ಗೆ ಕೂಡ ನಮ್ಮಿಬ್ಬರಲ್ಲಿ ತೀರ ಭಿನ್ನಾಭಿಪ್ರಾಯವಿದೆ. ನಾನು ಕಸ ಎಂದುಕೊಳ್ಳುವುದು ರಾಯರ ಕಣ್ಣಿಗೆ ರಸವಾಗಿಯೂ, ನನಗೆ ಬೇಕಾದ್ದು ಅವರಿಗೆ ರಣರಂಪವಾಗಿಯೂ ಕಾಣುವುದು ದಾಂಪತ್ಯ ಜೀವನದ ಒಂದು ಸಹಜಗುಣ ಕೂಡಾ ಇರಬಹುದು ಎನ್ನುವ ತೀರ್ಮಾನಕ್ಕೆ ಇತ್ತೀಚೆಗೆ ನಾನು ತಲುಪಿಬಿಟ್ಟದ್ದೇನೆ. ತಮ್ಮ ಸಂಗ್ರಹಾಲಯದ ಯಾವುದೋ ರಬ್ಬರ್ ತುಣುಕಿನಿಂದ, ಹಳೆಯ ಮುಚ್ಚಳದಿಂದ ಇಸ್ತ್ರಿಯಾವುದಕ್ಕೋ ಒಂದು ವಾಷರ್ ತಯಾರಿಸಿ ಹಾಕಿಬಿಟ್ಟರು ಅಂದರೆ ರಾಯರಿಗೆ ಅದೇನು ಜಂಭವೋ? 'ನೋಡಿದೆಯಾ, ಇದು ಇದ್ದಿದ್ದಕ್ಕೆ ಸಕಾಲದಲ್ಲಿ ಉಪಯೋಗಕ್ಕೆ ಬಂತು' ಎನ್ನುವಂತೆ ನನ್ನತ್ತ ಒಂದು ಗತ್ತಿನ ನೋಟ ಎಸೆಯುತ್ತಾರೆ. 'ನಾಲ್ಕೈದು ರೂಪಾಯಿ ಬಿಸಾಕಿದ್ದರೆ ಇದರ ಅಪ್ಪನಂತಾ ಹೊಸದೇ ಬರುತ್ತಿತ್ತಲ್ಲಾ, ಇದಕ್ಕಾಗಿ ವೃಥಾ ಹಾಳು ಮಾಡಿದ ಕಾಲ ಎಷ್ಟು?' ಎನ್ನಲು ನನ್ನ ನಾಲಿಗೆ ತುರಿಸುತ್ತಿದ್ದರೂ ಅವರ ಅಭಿಮಾನವನ್ನು ಕೆಣಕಿ ಕದನದ ಕಹಳೆಯೂದಲು ಹಿಂಜರಿದು ನಾನು ನಾಲಿಗೆ ಬಿಗಿ ಹಿಡಿಯುತ್ತೇನೆ. ಹೀಗೆ ಪರಸ್ಪರರ ಅಭಿಪ್ರಾಯಗಳನ್ನು ಸಭ್ಯ ನಾಗರಿಕರಂತೆ ಗೌರವಿಸುತ್ತಾ ನಾಲಿಗೆ ಬಿಗಿ ಹಿಡಿದಿದ್ದರ ಪರಿಣಾಮ ನಮ್ಮ ಮನೆಯೆನ್ನುವುದು ಒಂದು ಕಸದ ತೊಟ್ಟಿಯಾಗಿದೆ. ಯಾವುದರಲ್ಲೂ ಒಂದು ಶಿಸ್ತು, ಕ್ರಮ ಇರಬೇಕೆನ್ನುವ ನಾನು ಇದೀಗ ಹೇಳಬೇಕಾದ್ದನ್ನು ಕ್ರಮಪ್ರಕಾರ ತಮ್ಮ ಅವಗಾಹನೆಗಾಗಿ ತರುತ್ತೇನೆ, ಓದಿ. ನಮ್ಮ ಮನೆಯ ವರಾಂಡದಲ್ಲಿ ತುಂಬಿ ತುಳುಕಾಡುತ್ತಿರುವ ಒಂದು ಚಪ್ಪಲಿ ಗೂಡು ಇದೆ. ಒಂದು ಜೊತೆ ಚಪ್ಪಲಿಯೋ ಬೂಟೋ ಉಪಯೋಗಕ್ಕೆ ಬರದಂತಾದ ಮೇಲೆ ಎಸೆದು ಹೊಸದು ಕೊಂಡುಕೊಳ್ಳುವುದು ಸರಿಯಾದ ಪದ್ಧತಿ. ಆದರೆ ಯಾರ ಮನೆಯಲ್ಲಿ ಇದು ಹೀಗೆಯೇ

ನಡೆಯುತ್ತದೆ ? ಚಪ್ಪಲಿ ಹಳೆಯದಾಗುತ್ತಾ ಬಂತು ಎಂದು ಮನಸ್ಸಿಗೆ ಅನ್ನಿಸಿದೊಡನೆ ಹೊಸದೊಂದು ಜೊತೆ ಕೊಂಡು ತರುತ್ತೇವೆ. ಹಳೆಯದು ಇನ್ನೂ ಉಪಯೋಗಕ್ಕೆ ಬರುವಂತಿದ್ದು ಬಿಸಾಡಲು ಮನಸ್ಸಾಗುವುದಿಲ್ಲ 'ಇರಲಿ ಅದೂ, ಆಗ, ಈಗ ಅದನ್ನೂ ಹಾಕಿದರಾಯ್ತು' ಅಂದುಕೊಂಡರೂ ಹಳೆ ಚಪ್ಪಲಿ ಮೂಲೆಗುಂಪಾಗಿ ಹೊಸದು ಮಾತ್ರ ವಿಜೃಂಭಿಸತೊಡಗುತ್ತದೆ. ಎಸೆಯಲು ಕೈ ಬಾರದ ಹಳೆಯದು ಧೂಳು ತಿನ್ನುತ್ತಾ ವ್ಯರ್ಥ ತನ್ನ ಸರದಿಗೆ ಕಾದು ಕೂರುತ್ತದೆ. ಚಪ್ಪಲಿಯೋ, ಬೂಟೋ, ಅನುಕೂಲಕ್ಕೇ ಹೊರತು ಆಡಂಬರಕ್ಕಲ್ಲ ಎನ್ನುವ ನಮ್ಮ ಮನೆಯ ಪಾಡೇ ಹೀಗಾದರೆ ಮ್ಯಾಚಿಂಗ್ ಚಪ್ಪಲಿಗಳು, ಮನೆಯೊಳಗೆ ಓಡಾಡುವ ನಾಜೂಕಿನವು, ಎಂದೆಲ್ಲಾ ಕಲೆ ಹಾಕುವ ಮಂದಿ ಮನೆಯನ್ನು ಚಪ್ಪಲಿ ಅಂಗಡಿ ತರಹ ಮಾಡಿಕೊಂಡಿರುತ್ತಾರೇನೋ ಎಂದು ನನಗನ್ನಿಸಿದರೆ ಅದು ನನ್ನ ಕುತರ್ಕ ಎಂದು ಹೀಯಾಳಿಸಬೇಡಿ. ಚಪ್ಪಲಿಯನ್ನೋ, ಬೂಟನ್ನೋ, ಸಂದರ್ಭಕ್ಕೆ ಮನೋಸ್ಥಿತಿಗೆ ತಕ್ಕಂತೆ ಧರಿಸುವ ಅಭ್ಯಾಸದ ರಾಯರು ಈ ಮೊದಲು ಹೇಳಿದಂತೆ ಹಳೆಯದಾಗುವ ಮುನ್ನ ಹೊಸ ಜೊತೆ ಖರೀದಿಸಿ ತಂದು ಮನೆಯಲ್ಲಿ ತುಂಬಿಟ್ಟು ಬಿಡುತ್ತಾರೆ. ಯಾವುದರಲ್ಲಿ ಹೆಚ್ಚು ಧೂಳು ಶೇಖರಣೆಯಾಗಿರುತ್ತದೆಯೋ ಅವನ್ನು ಕಾಲ್ಬೆರಳ ತುದಿಯಲ್ಲಿ ನಿರ್ದೇಶಿಸಿ, 'ಇದನ್ನು ಬಿಸಾಕ್ತೀನಿ' ಎಂದು ನಾನು ಅಸಮಾಧಾನ ಸೂಚಿಸಿದರೆ ಸಾಕು, ರಾಯರು ಹೌಹಾರುತ್ತಾರೆ. 'ಅಯ್ಯಯ್ಯೋ, ಎಷ್ಟು ಚೆನ್ನಾಗುಂಟು, ಅದನ್ನು ಮಾತ್ರಾ ಎಸೀಬೇಡ..., ಎಂದು ಕಟ್ಟಪ್ಪಣೆಯಾಗುತ್ತದೆ. ಪ್ರತಿ ದಿನ ಮನೆ ಚೊಕ್ಕ ಮಾಡುವಾಗ ಈ ಚಪ್ಪಲಿಗಳನ್ನು ಪಟ್ಟನೆ ನೆಲಕ್ಕೆ ಕುಕ್ಕಿ ಧೂಳು ಜಾಡಿಸಿ, ಗುಂಯ್ಗುಡುತ್ತಾ ಗೂಡಿನಿಂದ ಹೊರ ಹಾರಿ ಬರುವ ಸೊಳ್ಳೆಗಳ ದಂಡನ್ನು ಅಸಹಾಯಕತೆಯಿಂದ ವೀಕ್ಷಿಸುವ ಪಾಡು ನನಗೆ ತಪ್ಪಿದ್ದಲ್ಲ.



ಬನ್ನಿ ಈ ಹೊರಗಿನ ರೂಮಿಗೆ. ಅದೆಷ್ಟೊಂದು ಪುಸ್ತಕಗಳು ಜಮಾವಣೆಯಾಗಿವೆ ಎಂದರೆ ಸಣ್ಣ ದೊಂದು ಗ್ರಂಥಾಲಯ ಮಾಡಲು ಧಾರಾಳವಾಗಿ ಸಾಕು. ಪುಸ್ತಕ ಎಂದರೆ ಮೂಗು ಕೊಯ್ಯಿಸಿಕೊಳ್ಳುವ, ದಿನದ ಊಟ, ತಿಂಡಿಯ ವೇಳೆಯಲ್ಲಿ ಪ್ರಯಾಣದ ಸಂದರ್ಭದಲ್ಲಿ ವಾಮಹಸ್ತದಲ್ಲೊಂದು ಪುಸ್ತಕ ರಾರಾಜಿಸದಿದ್ದರೆ ಜಗತ್ತೇ ಶೂನ್ಯವಾದಂತೆ ಚಡಪಡಿಸುವ ನಾನು ಕೊಂಡು ತಂದು, ಓದಿ ಬಿಸಾಕಿರುವ ಈ ಪುಸ್ತಕಗಳು ನನ್ನ ಆಸ್ತಿ. ಯಾರಾದರೂ ನೂರು ರೂಪಾಯಿ ಸಾಲ ಕೇಳಿದರೆ ಸಲೀಸಾಗಿ ಕೊಡುತ್ತೇನಾದರೂ ಪುಸ್ತಕ ಕೇಳಿದರೆ ಇರಿಸುಮುರಿಸಾಗುವ ನನಗೆ ಈ ಸರಸ್ವತಿ ಸಂಗ್ರಹಾಲಯವನ್ನು ಕಸದ ವಿಭಾಗಕ್ಕೆ ಸೇರಿಸಲು ಅಂತರಂಗ ಒಪ್ಪದಿರುವುದರಿಂದ ಅವನ್ನು ಜೋಪಾನವಾಗಿ ಕಾದಿಟ್ಟದ್ದೇನೆ. ಸಾಹಿತ್ಯಕ ಮೌಲ್ಯದಂತಾ ದೊಡ್ಡ ಪದ ಉಪಯೋಗಿಸಿದರೆ ಅರ್ಥಕ್ಕರ್ಥ ನಾಪಾಸಾಗುವಂತಹವೇ ತುಂಬಿದ್ದರೂ ಬಿಳಿಹಾಳೆಗಳ ಮೇಲಿನ ಕಪ್ಪುಕಪ್ಪು ಅಕ್ಷರಗಳ ಕುರಿತು ನನಗೆ ಅತೀವ ಮೋಹ. ಈ ಮೋಹದಿಂದಾಗಿ ಹಲ್ಲಿಗಳು, ಜಿರಳೆಗಳು ನನ್ನನ್ನು ಆಶೀರ್ವದಿಸುತ್ತಾ ಪುಸ್ತಕಗಳ ಮರೆಯಲ್ಲಿ ಸುಖಸಂಸಾರ ಮಾಡಿಕೊಂಡು ಮಕ್ಕಳು ಮರಿಗಳೊಂದಿಗೆ ಹಾಯಾಗಿವೆ. ಎಂದೋ ಒಂದು ದಿನ ತಿಕ್ಕಲು ತಿರುಗಿ ನಾನು ಈ ಪುಸ್ತಕಗಳ ಸ್ವಚ್ಛತಾ ಕಾರ್ಯಕ್ಕೆ ಕೈ ಇಕ್ಕಿದರೆ ಉಂಡ ಮನೆ ಗಳ ಎಣಿಸುವ ಬುದ್ಧಿಯ ಈ ಕೀಟ ಸಂಕುಲಗಳಿಗೆ ತಮ್ಮ ಸಾಮ್ರಾಜ್ಯದ ಮೇಲೆ ಅನ್ಯರು ದಾಳಿ ಮಾಡಿದಂತೆ ಆಗ್ರಹ ಹುಟ್ಟಿ ನನ್ನನ್ನು ಬೆದರಿಸಿ ಓಡಿಸಲು ಅಡ್ಡಾದಿಡ್ಡಿ ಆಕ್ರಮಣ ಮಾಡುತ್ತವೆ. ನಾನು ಬೆದರಿ ಕಿರುಚಾಡಿದರೆ ಕೇಳಿಯೂ ಕೇಳದಂತೆ ರಾಯರು ದಿವ್ಯ ನಿರ್ಲಕ್ಷ್ಯ ತೋರಿಸುತ್ತಾರೆ. 'ನಾನು ಸಂಗ್ರಹಿಸಿಡುವುದೆಲ್ಲಾ ಕಸ, ನೀನು ಇಟ್ಟರುವುದು ಮಾತ್ರಾ ಅಷ್ಟೈಶ್ವರ್ಯವೇ?' ಎನ್ನುವ ಕುಹಕ ಕಂಡೂ ಕಾಣದ ನಗೆಯ ರೂಪದಲ್ಲಿ ಅವರ ಮೊಗದಲ್ಲಿ ಸುಳಿದಾಡುತ್ತಿರುವಂತೆನಿಸಿ ನನಗೆ ಮೈಪರಚಿಕೊಳ್ಳುವಂತಾಗುತ್ತದೆ. 'ಪುಸ್ತಕಗಳು ಯಾಕೆ ಕಸ? ಎರಡು ವರ್ಷ ಬಿಟ್ಟು ಮತ್ತೊಂದು ಸಲ ಓದಿದರೆ ಮೊದಲ ಓದಿಗೆ ದಕ್ಕದಿದ್ದ ಯಾವುದೋ ಹೊಸ ಅರ್ಥ ಕಾಣಿಸುತ್ತದೆ. ನಾಲ್ಕು ವರ್ಷ ಬಿಟ್ಟು ಓದಿದರೆ ಎರಡನೆಯ ಓದಿಗೆ ಹೊಸ ಅರ್ಥ ಕಾಣಿಸುತ್ತದೆ. ನಾಲ್ಕು ವರ್ಷ ಬಿಟ್ಟು ಓದಿದರೆ ಎರಡನೆಯ ಓದಿಗೆ ದಕ್ಕದ ಮತ್ತೊಂದು ಅರ್ಥ......' ಎಂದು ಗ್ರಾಂಥಿಕ ಭಾಷೆಯಲ್ಲಿ ನಾನು ಸಮರ್ಥಿಸಿಕೊಳ್ಳಲು ಹೋದರೆ 'ಈಗ ನಾನೇನಂದೆ?' ಎಂದು ರಾಯರು ಸುಳ್ಳೇ ಅಚ್ಚರಿ ತೋರಿಸುತ್ತಾರೆ. ಆಡದಿದ್ದದ್ದನ್ನು ಆಡಿದಂತೆ ವರ್ತನೆಯಲ್ಲಿ ತೋರಿಸಿಕೊಳ್ಳಬಹುದೆಂದು ನಾನು ಸಮಜಾಯಿಸಿ ಕೊಡುತ್ತೇನೆ. ಈ ನನ್ನ ಗ್ರಂಥ ಸಂಗ್ರಹಾಲಯದಲ್ಲಿ ಭಾವನಾತ್ಮಕವಾದ ಒಂದು ಎಳೆಯೂ ಸೇರಿಕೊಂಡಿದೆ. ನನ್ನ ಮಕ್ಕಳು ಸಣ್ಣವರಿದ್ದಾಗ ಬರೆದ ಕೆಲವು ನೋಟು ಪುಸ್ತಕಗಳು ಇದರಲ್ಲಿ ಸೇರ್ಪಡೆಗೊಂಡಿವೆ. ತಪ್ಪುತಪ್ಪು ಕಾಗುಣಿತದ ಸೊಟ್ಟ ಅಕ್ಷರಗಳು ನನ್ನನ್ನು ಗತಕಾಲಕ್ಕೆ ಹಿನ್ನಡೆಸುತ್ತವೆ. ಒಂದೊಂದು ತಪ್ಪಿಗೆ ಒಂದೊಂದು ಏಟು ಕೊಟ್ಟು ಅವರನ್ನು ದಂಡಿಸಿದ ಕುರಿತು ತಪ್ಪಿತಸ್ಥ ಮನೋಭಾವನೆಯಿಂದ ನಾನು ವ್ಯಾಕುಲಗೊಳ್ಳುತ್ತೇನೆ. ಕಾಲ ಎನ್ನುವುದು ಹೇಗೆ ಸದ್ದಿಲ್ಲದೆ, ಕ್ಷಣವೂ ವಿರಮಿಸದೆ, ನಿನ್ನಿನ ಮಕ್ಕಳು ಇಂದು ನನಗೇ ಬುದ್ಧಿ ಹೇಳುವಷ್ಟು ದೊಡ್ಡವರಾಗಿ ಬೆಳೆದುನಿಂತ ಪರಿ ಕೌತುಕವೆನಿಸಿದರೂ ನಿನ್ನಿನ ಅವರ ಅಮಾಯಕತೆಗೆ, ಮುಗ್ಧ ಬಾಲ್ಯಕ್ಕೆ, ಸಾಕ್ಷಿ ಯಾಗಿರುವ ಕುರುಹುಗಳನ್ನು ಕೈಯಾರೆ ಅಳಿಸಿಹಾಕಲು ಮನಸ್ಸೊಪ್ಪುವುದಿಲ್ಲ.

ಪುಸ್ತಕಗಳನ್ನು ಅಷ್ಟಕ್ಕೆ ಬಿಟ್ಟು ಪೆನ್ನಿನ ವಿಷಯಕ್ಕೆ ಬಂದರೆ ನಾನಾ ಬಣ್ಣದ ಬಾಲ್‌ಪೆನ್ನುಗಳ ಒಂದು ಪರಿಷೆಯೇ ಮನೆಯಲ್ಲಿ ಜಮಾವಣೆಯಾಗಿವೆ. ರೀಫಿಲ್ ಹಾಕಿದರೆ ಪ್ರತಿಯೊಂದೂ ಸೇವೆಗೆ ಸಿದ್ಧ. ಆದರೆ ಯಾವುದರಲ್ಲೂ ರೀಫಿಲ್ ಇಲ್ಲ. ಅರ್ಜೆಂಟಾಗಿ ಒಂದು ಫೋನ್ ನಂಬರ್ ಗುರುತು ಹಾಕಿಕೊಳ್ಳಬೇಕೆಂದರೆ ಒಂದೆಂದರೆ ಒಂದೂ ಬರೆಯುವುದಿಲ್ಲ. ಸಿಟ್ಟು ಏರಿ, ತಲೆ ಕಾದು, 'ಎಸೆದುಬಿಡುತ್ತೇನೆ' ಎಂದು ಮುಷ್ಟಿಯಲ್ಲಿ ತುಂಬಿಕೊಂಡರೂ, 'ಇರ್ಲಿ ಬಿಡು, ರೀಫಿಲ್ ತಂದು ಹಾಕಿದರಾಯ್ತು' ಎನ್ನುವ ರಾಯರ ಮಾತಿನೊಡನೆ ಅವುಗಳ ಕಾಮನಬಿಲ್ಲಿನಂತಾ ಬಣ್ಣಗಳೂ ಸೇರಿ ಮನಸ್ಸಿಗೆ ಮಂಕು ಕವಿಸಿ ಬಾಲ್‌ಪೆನ್ನುಗಳು ಚಿರಸ್ಥಾಯಿಯಾಗಿಬಿಟ್ಟಿವೆ. ಈಗ ಮನೆ ಕಟ್ಟಿಸುವವರು ನಡುಮನೆಯಲ್ಲಿ 'ಶೋಕೇಸ್' ಎನ್ನುವ ಪ್ರದರ್ಶನದ ಗಾಜಿನ ಬೀರುವನ್ನು ಕೈಬಿಟ್ಟಿದ್ದಾರಂತೆ. ಅದು ಫ್ಯಾಷನ್ ಎಂದು ಅವರ ಅಂಬೋಣ. ನಾವು ಮನೆ ಕಟ್ಟಿಸಿದ ಕಾಲದಲ್ಲಿ ಅದು ಕಡ್ಡಾಯವಾಗಿ ನಡುಮನೆಯ ಅಲಂಕಾರದ ಒಂದು ಭಾಗವಾಗಿ ಪರಿಗಣಿಸಲ್ಪಡುತ್ತಿದ್ದುದರಿಂದ ನಮ್ಮ ನಡುಮನೆಯಲ್ಲಿ ಒಂದು ಶೋಕೇಸ್ ಇದೆ. ನಮ್ಮ ರಾಯರು ಪ್ರಚಂಡ ಭಾಷಣಕಾರರಾಗಿರುವುದರಿಂದ ಅಥವಾ ಜನರ ನಡುವೆ ಅಂತಾ ಒಂದು ತಿಳುವಳಿಕೆ

ಪ್ರಚಾರದಲ್ಲಿರುವುದರಿಂದ ವರ್ಷಕ್ಕೆ ಹದಿನೈದು ದಿನಗಳಾದರೂ ಸ್ಥಳದಲ್ಲಾಗಲೀ, ಪರಸ್ಥಳದಲ್ಲಾಗಲೀ, ಅವರು ಅನಿವಾರ್ಯವಾಗಿ ವೇದಿಕೆ ಅಲಂಕರಿಸ ಬೇಕಾಗುತ್ತದೆ. ಈ ಸಂದರ್ಭದ ನೆನಪಿನ ಕಾಣಿಕೆಗಳಿಂದ ನಮ್ಮ ಶೋಕೇಸು ಅಜೀರ್ಣ ಹಿಡಿದು ಹೊಟ್ಟೆ ಬಿರಿಯುವಂತಾಗಿದೆ. ಇಟ್ಟುಕೊಳ್ಳುವ ಹಾಗಿಲ್ಲ ಬಿಸಾಡುವ ಹಾಗಿಲ್ಲ, ತೀರಾ ಬೆಲೆ ಬಾಳುವಂತಹವಲ್ಲ, ಬೆಲೆ ಇಲ್ಲದವೂ ಅಲ್ಲ, ಯಾರಿಗಾದರೂ ಉಡುಗೊರೆಯ ನೆಪದಲ್ಲಿ ಕೊಡೋಣವೆಂದರೆ ಅದೂ ಸಾಧ್ಯವಿಲ್ಲ, ಕೊಟ್ಟವರು ತಮ್ಮ ಸಂಘ, ಸಂಸ್ಥೆಯ ಹೆಸರುಗಳನ್ನು ಅಳಿಸಲಾಗದಂತೆ ಕೊರೆಸಿಬಿಟ್ಟಿರುತ್ತಾರೆ. ಇನ್ನು ಯಾರಿಗಾದರೂ ಪುಗಸಟ್ಟೆ ಹಂಚಬೇಕು. ಹಾಗೆ ಹಂಚುವಷ್ಟು ಚಿಲ್ಲರೆ ವಸ್ತುಗಳೂ ಅಲ್ಲ. ಈಗಾಗಲೇ ನಿಮ್ಮ ಮನಸ್ಸಿನಲ್ಲಿ ನನ್ನ ಉದಾರತೆಯ ಬಗ್ಗೆ ಸಣ್ಣ ಗುಮಾನಿ ಹುಟ್ಟಿರಬಹುದು. ನಿಜ ಅನ್ನಿ ಯಾವ ಉಪಯೋಗಕ್ಕೂ ಬರದಿದ್ದವುಗಳನ್ನು ಕಸ ಅಥವಾ ವ್ಯರ್ಥ ಪದಾರ್ಥದ ಪಟ್ಟಿಗೆ ಸೇರಿಸಬಹುದಾದರೆ ಇವೂ ಒಂದರ್ಥದಲ್ಲಿ ನನ್ನ ವ್ಯಾಮೋಹಕ್ಕೆ ಬ್ರಹ್ಮಕಪಾಲದಂತೆ ತಗುಲಿಕೊಂಡಿರುವ ಕಸ. ಮನೆಯ ಅಂತರಂಗವನ್ನು ಹೊಕ್ಕಂತೆ ಇಂತಹ ಬೇಡದ ವಸ್ತುಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಒಳರೂಮಿನ ಬೀರುವಿನಲ್ಲಿರುವ ನಿತ್ಯೋಪಯೋಗಿ ಬಟ್ಟೆಬರೆಗಳ ನಡುವೆ ಬಣ್ಣ ಮಾಸಿದರೂ ಹರಿಯದ ಗಟ್ಟಿಮುಟ್ಟಾದ ಸೀರೆಗಳು, ಒಂದು ಕಾಲದಲ್ಲಿ ಫ್ಯಾಷನ್ ಎಂದು ಹೊಲಿಸಿಯೋ ಅಥವಾ ಹೊಲಿಗೆ ಮನಸ್ಸಿಗೆ ಒಗ್ಗದೆಯೋ ಹೇರಳವಾಗಿ ಸಂಗ್ರಹವಾಗಿರುವ ರಾಯರ ಪ್ಯಾಂಟು, ಶರ್ಟುಗಳು, ಹಳೆಯ ಬ್ಯಾಗುಗಳು, ಸೂಟ್‌ಕೇಸ್‌ಗಳು, ಛತ್ರಿಚಾಮರಗಳು, ನೆಲ ಒರೆಸುವುದಕ್ಕೆ ಉಪಯೋಗವಾಗುತ್ತವೆಂದು ಕೂಡಿಟ್ಟ ಹರಿದ ಒಳಲಂಗ, ಬನಿಯನ್ನು ಇತ್ಯಾದಿ ಇತ್ಯಾದಿ ಹತ್ತಿ ಬಟ್ಟೆಗಳು ತುಂಬಿ ತುಳುಕಾಡುತ್ತಿರುತ್ತವೆ.

ಊಟದ ಕೋಣೆಯ ಗೋಡೆಯ ಅರೆಗಳಲ್ಲಿ ಪಾತ್ರೆ ಪಡಗಗಳ ಜಾತ್ರೆ. ಯಾವ್ಯಾವುದೋ ಸಮಾರಂಭಗಳಲ್ಲಿ ಉಡುಗೊರೆಯಾಗಿ ಬಂದ, ಕೊಟ್ಟವರ ಹೆಸರಿನ ಮುದ್ರೆ ಹಾಕಿಸಿಕೊಂಡ ತಟ್ಟೆ, ಬಟ್ಟಲು, ಲೋಟ, ವಿವಿಧಾಕೃತಿಯ ಪಾತ್ರೆಗಳು ಮುಂತಾದುವುಗಳ ರಾಶಿ. ಎಷ್ಟೋ ಪಾತ್ರೆಗಳು ಒಮ್ಮೆ ಕೂಡಾ ಉಪಯೋಗವಾಗಿದ್ದಿಲ್ಲ. ಧೂಳು ಒರೆಸುವುದಕ್ಕೆ ಮುಟ್ಟುವುದೆಷ್ಟೋ ಅಷ್ಟೇ ಅವುಗಳ ಸಂಪರ್ಕ. ಇನ್ನು ಅಡುಗೆ ಮನೆ ಅಂದರೆ ಅದೊಂದು ಬ್ರಹ್ಮಾಂಡ. ಹಳೆಯ ಡಬ್ಬಿ, ಬಾಟಲಿಗಳನ್ನೆಲ್ಲಾ ಸೋಪ್‌ಪೌಡರಿನಲ್ಲಿ ಅಚ್ಚುಕಟ್ಟಾಗಿ ತೊಳೆದು ಲಕಲಕ ಮಾಡಿ ಬಿಸಿಲಲ್ಲಿ ಒಣಗಿಸಿ ಕೂಡಿಟ್ಟುಕೊಂಡು ಸಂದರ್ಭಾನುಸಾರ ಅವನ್ನು ಬಳಸಿಕೊಳ್ಳುವುದು ಸದ್ಗೃಹಿಣಿಯ ಲಕ್ಷಣ ಎಂದು ನಾನೆಂದುಕೊಂಡಿದ್ದರೆ ರಾಯರ ಕಣ್ಣಿಗೆ ಅಡುಗೆಮನೆ ಗೋದಾಮಿನಂತೆ ಕಾಣುತ್ತದೆ. ನಿಜವಾದ ಗೋದಾಮು ಇರುವುದು ಅಟ್ಟದ ಮೇಲೆ ಎನ್ನುವುದು ನನ್ನ ಹೇಳಿಕೆ. ಇಪ್ಪತ್ತು ವರ್ಷಗಳ ಹಿಂದೆ ಮನೆ ಕಟ್ಟಿಸಿದ ನಂತರ ಯಾವ ಯಾವ ಸಾಮಗ್ರಿಗಳು ಉಳಿದಿದ್ದವೋ, ಅವನ್ನೆಲ್ಲಾ ಅಟ್ಟದ ಮೇಲೆ ರಾಯರು ಜತನದಿಂದ ಕಲೆಹಾಕಿಕೊಂಡಿದ್ದಾರೆ. ಈ ಮನೋಧರ್ಮ ಇದ್ದಿದ್ದರಿಂದಲೇ 'ದೊಡ್ಡ ಅಟ್ಟ ಬೇಕು' ಎಂದು ಉದ್ದೇಶಪೂರ್ವಕ ಕಟ್ಟಿಸಿಕೊಂಡಿದ್ದಾರೆ ಎಂದು ನಾನು ನಿಸ್ಸಂಶಯವಾಗಿ ಹೇಳಬಲ್ಲೆ. ಆ ಅಟ್ಟದ ಮೇಲೆ ಏನುಂಟು? ಏನಿಲ್ಲ? ನಲ್ಲಿಯ ಲೈನಿಗೆ ಉಪಯೋಗಿಸಿ ಉಳಿದ ಪೈಪಿನ ತುಂಡುಗಳು, ಮೊಸಾಯಿಕ್ ಟೈಲ್ಸ್‌ಗಳು, ತುಕ್ಕು ಹಿಡಿದು ಮಣ್ಣಬಣ್ಣಕ್ಕೆ ತಿರುಗಿರುವ ನಾನಾ ಗಾತ್ರದ ಮೊಳೆಗಳು ತುಂಬಿದ ಪ್ಲಾಸ್ಟಿಕ್ ಕವರುಗಳು, ಎಲೆಕ್ಟ್ರಿಕ್ ವೈರಿನ ತುಂಡುಗಳು, ತಳದಲ್ಲಿ ಒಂದಿಷ್ಟು ಉಳಿದುಕೊಂಡಿದ್ದು ಈಗ ಗಟ್ಟಿಕಲ್ಲಾಗಿರುವ ಪೆಯಿಂಟಿನ ಡಬ್ಬಗಳು, ಬ್ರಷ್‌ಗಳು, ನಲ್ಲಿಗಳು, ಸಿಮೆಂಟಿನ ಖಾಲಿ ಚೀಲಗಳು, ರಿಪೀಸುಗಳು... ಹೇಳುತ್ತಾ ಹೋಗಿ ನಿಮ್ಮ ತಲೆ ತಿನ್ನಲಾರೆ. ಅಂತೂ ರಾಯರಿಗೆ ಎಲ್ಲಾ ಬೇಕು. ಯಾವುದನ್ನೂ ನಾನು ಎಸೆಯುವಂತಿಲ್ಲ, ಮನೆಯ ಯಾವುದಾದರೂ ವಸ್ತು ಕೆಟ್ಟುಹೋದರೆ ಸ್ವತಃ ರಿಪೇರಿ ಮಾಡಿ ಇನ್ನಷ್ಟು ಕೆಡಿಸಿಡುವ ಚಪಲದ ಇವರಿಗೆ ಅಂತಾ ಸಂದರ್ಭ ಸಿಕ್ಕಿತೆಂದರೆ ಬೆಲ್ಲ ಮೆದ್ದಂತೆ ಖುಷಿ. ಯಾವ ಮೆಕ್ಯಾನಿಕ್‌ಗೂ ಕಡಿಮೆ ಇಲ್ಲದ ಪೋಸು ಕೊಟ್ಟುಕೊಂಡು, ಅಟ್ಟದಿಂದ ಏನನ್ನೋ ಇಳಿಸಿಕೊಂಡು, ನೆಲದ ಮೇಲೆ ಸುರುವಿಕೊಂಡು, ದಿನದ ಇಪ್ಪತ್ನಾಲ್ಕು ಘಂಟೆ ಬೇಕಾದರೂ ಮಗ್ನತೆಯಿಂದ ಕಟ್ಟರಿ ಕೆಲಸ ಮಾಡಬಲ್ಲರು. ಅವರಷ್ಟಕ್ಕೆ ಅವರು ಏನಾದರೂ ಮಾಡಿಕೊಳ್ಳಲಿ ಎಂದು ನಾನು ನಿರುಮ್ಮಳವಾಗಿರುವಂತೆಯೂ ಇಲ್ಲ. 'ಸ್ಕ್ರೂಡ್ರೈವರ್ ಕೊಡು', 'ಬ್ಲೇಡು ಕೊಡು', 'ಕತ್ತರಿ ಕೊಡು' ಎಂದು ಪದೇಪದೇ ಕರೆದು ಮೈ ಪರಚಿಕೊಳ್ಳುವಂತೆ ಮಾಡಬಲ್ಲರು. ಅವರು ಇಷ್ಟೆಲ್ಲಾ ಶ್ರಮಪಡುತ್ತಿರುವಾಗ ಚೂರು ಸಹಾಯ ಮಾಡಲು ನನಗೇನು ಧಾಡಿ ಎನ್ನುವುದು ಅವರ ವಿಚಾರ. ಇಂಥಾ ಸಂದರ್ಭಗಳಲ್ಲಿ ಅವರಿಗೆ ಸಿಟ್ಟು ಮೂಗಿನ ತುದಿಯಲ್ಲಿ ತಕಪಕ ಕುಣಿಯುತ್ತಿರುತ್ತದೆ. ಯಾಕೆಂದರೆ ಅವರು ಮಾಡಬೇಕಾದ ಕೆಲಸಕ್ಕೆ ತಕ್ಕ ಹತ್ಯಾರುಗಳಿರುವುದಿಲ್ಲ ಎನ್ನುವುದು ಒಂದು ಕಾರಣವಾದರೆ ಈ ಹತ್ಯಾರುಗಳು ಅಥವಾ ಆಯುಧಗಳು ಒಂದೊಮ್ಮೆ ಇದ್ದರೂ ಸಹ 'ಅಭ್ಯಾಸವಿಲ್ಲದವನು ಅಗ್ನಿಕಾರ್ಯ ಮಾಡಿದಂತೆ' ಆಯಾಯಾ ಕೆಲಸದ ಪರಿಣಿತರು ಕೆಲಸ ಮಾಡುವಾಗ ಎಷ್ಟು ಸಲೀಸು ಸುಲಭ ಅನ್ನಿಸುತ್ತದೆಯೋ ಅದು ರಾಯರ ಕೈಯಲ್ಲಿ ಸಾಧ್ಯವಾಗದೆ ಅವರು ಇದೆ ಎಂದು ಆರೋಪಿಸಿಕೊಂಡಿರುವ ಅವರ ಸಾಮರ್ಥ್ಯಕ್ಕೆ ಸವಾಲೊಡ್ಡಿದಂತಾಗಿ ಅಸಹನೆ ಏರುತ್ತಿರುವುದು ಮತ್ತೊಂದು ಕಾರಣವಾಗಿರುತ್ತದೆ. ತಟಪಟಗುಟ್ಟುವ ನಲ್ಲಿಯಾಗಲೀ, ಗೊರಗುಟ್ಟುವ ರೇಡಿಯೋ ಆಗಲಿ, ಕಾಲು ಅಲುಗುವ ಕುರ್ಚಿಯಾಗಲೀ, ರಾಯರ ರಿಪೇರಿಯ ಹುರುಪು ಯಾವುದನ್ನೂ ಆಗುವುದಿಲ್ಲ ಅನ್ನಿಸುವುದಿಲ್ಲ. ನೀವೇ ಹೇಳಿ, ಒಂದು ಜುಜುಬಿ ಮೊಳೆಗಾಗಿ ಸರ್ಕಸ್ ಮಾಡಿ ಅಟ್ಟ ಹತ್ತಿ ಮೈತುಂಬಾ ಬಲೆ, ಧೂಳು ಮೆತ್ತಿಸಿಕೊಂಡು 'ಏಯ್ ತಗೊಳ್ಳೇ....' ಎಂದು ಅಟ್ಟದ ಮೇಲಿಂದ ಸಶರೀರವಾಣಿ ಮೊಳಗಿಸಿ, ನಾನು ಬಿಟ್ಟ ಕೆಲಸ ಬಿಟ್ಟು ಅವರ ಸಹಾಯಕ್ಕೆ ಧಾವಿಸುವಂತೆ ಮಾಡಿ, ನಂತರ ಸರ್ಕಸ್ಸಿನ ಪುನರಾವರ್ತನೆಯಾಗಿ ರಾಯರು ಅಟ್ಟದಿಂದಿಳಿದು ಬಂದು 'ಆಕ್ಷೀ....' ಎಂದು ಧೂಳಿಗೆ ಪ್ರತಿಸ್ಪಂದಿಸುತ್ತಾ ತಮ್ಮೆದುರು ಒಂದು ಗುಡ್ಡೆ ತುಕ್ಕು ಹಿಡಿದ ಮೊಳೆಗಳನ್ನು ಸುರುವಿಕೊಂಡು ಆರಿಸುತ್ತಾ ಕೂತರೆಂದರೆ ಓದುತ್ತಿರುವ ನಿಮ್ಮಂತಾ ನಿಮಗೇ ಹೇಗೇಹೇಗೋ ಆಗುತ್ತಿರುವಾಗ ಅನುಭವಿಸುತ್ತಿರುವ ನಾನು ಹೇಗೆ ಸೈರಿಸಬೇಕು?

ಇಷ್ಟಾಗಿಯೂ ಅಡ್ಡಕಸುಬಿಗಳು ಮಾಡಿದ ಕೆಲಸ ನೂರಕ್ಕೆ ನೂರು ಸರಿಯಾಗುವುದುಂಟೇ? 'ಇದು ಸರಿಯಾಗಲಿಲ್ಲ' ಎಂದು ಹೇಳುವಂತೆಯೂ ಇಲ್ಲ. ಹುಳುಕು ಹುಡುಕುವುದಕ್ಕೇ ನಾನು ಕಾದು ಕೂತಿರುತ್ತೇನೆ ಎಂಬುದು ರಾಯರ ತಕರಾರು. ವಿಷಯಾಂತರವಾಯ್ತು ಕ್ಷಮಿಸಿ. ಅಟ್ಟದ ಮೇಲೆ ಒಟ್ಟಿರುವ ಐಟಮ್ಮುಗಳಲ್ಲಿ ನನಗೆ ಬೇಕಾದಂತವೂ ಸೇರಿಕೊಂಡಿವೆ. ರಾಯರದು ವ್ಯವಹಾರ ಪ್ರಪಂಚವಾದರೆ ನನ್ನದು ಭಾವನಾ ಪ್ರಪಂಚ. ಮಕ್ಕಳು ಮಲಗಿದ ತೊಟ್ಟಿಲು, ಮಗ ಆಟದಲ್ಲಿ ಗೆದ್ದು ಕೊಳ್ಳೆ ಹೊಡೆದು ತಂದ ತರಾವರಿ ಗೋಲಿಗಳು ತುಂಬಿದ ಚೀಲ, ಪೆನ್ಸಿಲ್ ತುಣುಕುಗಳ ಡಬ್ಬಿ, ರಂಗೋಲಿ ಕೊಳವೆ... ನಿಜ, ನಮ್ಮ ಮನೆಯಲ್ಲಿ ಬೇಕಾದ್ದಕ್ಕಿಂತಾ, ನಿತ್ಯೋಪಯೋಗಿ ವಸ್ತುಗಳಿಗಿಂತಾ, ಬೇಡವಾದದ್ದೇ ಹೆಚ್ಚಾಗಿ ತುಂಬಿಕೊಂಡು ಮನೆ ಒಂದು ಕಸದ ತೊಟ್ಟಿಯಾಗಿದೆ ಅಂದರೆ ಉತ್ಪ್ರೇಕ್ಷೆಯಲ್ಲ. ಯಾಕೆ ಹೀಗಾಗುತ್ತದೆ? ಬೇಡವಾಗಿರುವುದನ್ನು ನಿರ್ದಾಕ್ಷಿಣ್ಯವಾಗಿ ನಾವೇಕೆ ವಿಲೇವಾರಿ ಮಾಡಿ ಕೈ ತೊಳೆದುಕೊಳ್ಳುವುದಿಲ್ಲ ಎನ್ನುವುದಕ್ಕೆ ನನಗೆ ತೋಚಿದ ಉತ್ತರ ಹೇಳಿದ್ದೇನೆ. ಬೇಕು ಎಂದು ಕಟ್ಟಿಕೊಳ್ಳಲು ಹುಮ್ಮಸ್ಸಿರದ, ಬೇಡ ಎಂದು ಕಡಿದುಕೊಳ್ಳಲು ಮನಸ್ಸಿರದ, ಕೆಲ ಸಂಬಂಧಗಳ ಹಾಗೆ ಈ ವಸ್ತುಗಳ ಸಹವಾಸವೂ ಏನೋ ಅಂಟು, ಯಾವುದೋ ನಂಟು, ಅನ್ನಲೇ?



**ವಸುಮತಿ ಉಡುಪ**
'ಗೌರಿ', ೧ನೇ ಕ್ರಾಸ್, ಗಾಂಧೀನಗರ 'ಎ' ಬ್ಲಾಕ್
ಶಿವಮೊಗ್ಗ - ೫೭೭ ೨೦೧

'ಆ ಯ್ತೇನೇ...'

'ಆಯ್ತೊಂದ್ರೆ. ಇನ್ನೊಂದೈದು ನಿಮಿಷ. ತಲೆ ಬಾಚ್ಕೊಂಡು, ಸೀರೆ ಉಟ್ಕೊಂಡ್ರಾಯ್ತುರೀ...'

'ಒಂದು ಗಂಟೆಯಿಂದ ಅದೇ ಮಾತು ಹೇಳ್ತಾ ಇದಿಯಲ್ಲೇ ?'

'ನಿಮ್ದು ಒಳ್ಳೆ ಕಥೆ ಆಯ್ತೂರೀ. ಹೀಗೆ ನೀವು ಆತ್ರ ಮಾಡಿದ್ರೆ ನಾನು ನಿಮ್ಜೊತೆಗೆ ಎಲ್ಲಿಗೂ ಬರೋಲ್ಲ... ನೀವೇ ಹೋಗಿ...'

ಇದು, ನಿಮ್ಮ ಮನೆಯಲ್ಲೂ ನಡೆಯಬಹುದಾದ, ಬಹುದಾದ ಏನು, ನಡೆಯುವ ಸಂಭಾಷಣೆಯ ಸ್ಯಾಂಪಲ್ಲು. ಏನಂದ್ರಿ ? ನಿಮ್ಮ ಮನೆಯಲ್ಲಿ ನಡೆಯುವುದಿಲ್ವೇ ಅಂತ ಕೇಳಿದ್ರಾ ? ನಡೀದೆ ಏನು ಸ್ವಾಮಿ ? ಸಂಸಾರವಂದಿಗರ ಎಲ್ಲರ ಮನೆಯಲ್ಲೂ ಇಂಥ ಮಾತುಗಳು ಸರ್ವೇಸಾಮಾನ್ಯ.

ಗೋದಾನ, ಭೂದಾನ, ಕನ್ಯಾದಾನ, ಅನ್ನದಾನಗಳಿಗಿಂತ ಅತಿಶ್ರೇಷ್ಠವಾದ ದಾನ 'ನಿಧಾನ'. 'ಅರಿವೇ ಗುರು' ಎನ್ನುವ ರೀತಿಯಲ್ಲೆ 'ತಡವೇ ಗುರು' ಎನ್ನುವ ಸರಳ ತತ್ವವನ್ನು ಸೋದಾಹರಣವಾಗಿ ಸಾಕ್ಷೀಭೂತವಾಗಿ ನಮಗೆ ತಿಳಿಸಿಕೊಟ್ಟು ಕಣ್ಣು ತೆರೆಸುವ ಮಂದಿಯೇ ಈ 'ಸಿದ್ಧವಾಗುತ್ತಲೇ ಇರುವವರು'. ''ತಾಳ್ಮೆಯೇ ಬಾಳಿನ ಗೆಲ್ಮೆ'' ಎಂಬ ನುಡಿಗಟ್ಟು ಪ್ರಚಲಿತಕ್ಕೆ ಬಂದದ್ದೇ ಇಂಥವರಿಂದ ಎಂಬುದು ನಾನು ಕಂಡುಹಿಡಿದ ಸತ್ಯ. ಹೀಗಾಗಿ ಉಕ್ಕುವ ಕೋಪಕ್ಕೆ ಕಡಿವಾಣ ಹಾಕಿ ಸಮಾಧಾನ ಸಮಚಿತ್ತವನ್ನು ಕಾಪಾಡಿಕೊಳ್ಳುವುದು 'ಸ್ಥಿತಪ್ರಜ್ಞೆ'ಗೆ ದಾರಿಮಾಡಿಕೊಡುತ್ತೆ ಅಲ್ಲವೆ? ಆ ದ್ವಾಪರಯುಗದಲ್ಲಿ ಆ ಶ್ರೀಕೃಷ್ಣ ಯುದ್ಧಕ್ಕೆ ಸಿದ್ಧವಾಗುತ್ತಲೇ ಇದ್ದ ಆ ಅರ್ಜುನನಿಗೆ ಬೋಧಿಸಿದ ಗೀತಾಮೃತದ ಸಾರವೇ ಇದು. 'ಆತುರಗಾರರಿಗೆ ಬುದ್ಧಿ ಮಟ್ಟ' ಎನ್ನುವ ಗಾದೆಯ ಪರಿಧಿಯೊಳಗೆ ಬಾರದವರು ಈ ಸಿದ್ಧವಾಗುತ್ತಲೇ ಇರುವವರು.

ಸಿದ್ಧವಾಗುತ್ತಲೇ ಇರುವವರ ಬಗ್ಗೆ ಯೋಚಿಸುವಾಗ ನನಗೆ ತಟ್ಟನೆ ನೆನಪಾಗುವವರು ನನ್ನ ಪ್ರೀತಿಯ ವಿದ್ಯಾರ್ಥಿಮಿತ್ರರು. ಧರಣಿ, ಮುಷ್ಕರ, ಬಂದ್‌ಗಳಿಂದ ಶಾಲಾಕಾಲೇಜುಗಳು ವರ್ಷದಲ್ಲಿ ಕೆಲವೇ ತಿಂಗಳುಗಳು ನಡೆದು ಪಾಠ ನಡೆಯಲಿ, ನಡೆಯದಿರಲಿ ಪರೀಕ್ಷೆಗಂತೂ ಸಿದ್ಧವಾಗಲೇಬೇಕಾದ ಅನಿವಾರ್ಯ ಪರಿಸ್ಥಿತಿ. ಇಡೀ ದಿನ ನಿದ್ದೆಗೆಟ್ಟು, ಪಾಪ ಮನೆಯಲ್ಲಿ ತಿಂಡಿ ತಿನ್ನುವಾಗ, ಊಟಕ್ಕೆ ಕೂತಾಗ ಪುಸ್ತಕಗಳನ್ನು ಪಕ್ಕದಲ್ಲೆಲ್ಲ ಹರಡಿಕೊಂಡು ಇತ್ತ ಹೊಟ್ಟೆತುಂಬಾ ಊಟ ಮಾಡಲಾಗದೆ, ಅತ್ತ ಸಂಪೂರ್ಣವಾಗಿ ಓದಿ ಮುಗಿಸಲಾಗದೆ ಬೆಲ್ಲು ಹೊಡೆದರೂ ಶಾಲಾ ಕೊಠಡಿಯ ಹೊರಗೆ ನಿಂತು ಪುಟಗಳನ್ನು ತಿರುವುತ್ತ ಸಿದ್ಧವಾಗುತ್ತಲೇ ಇರುವ ಅವರ ಧಾವಂತಿಕೆಯನ್ನು ಕಂಡಾಗ ಯಾರಿಗೆ ತಾನೇ ಕರುಣೆ ಉಕ್ಕಿ ಬರುವುದಿಲ್ಲ ಹೇಳಿ ? ಕರುಳು ಕಿತ್ತು ಬಂದಂತಾಗುವುದಿಲ್ಲ ಹೇಳಿ ? ಪಕ್ಕದಲ್ಲಿ ಇದೇ ಸ್ಥಿತಿಯಲ್ಲಿ ಇರುವ ಸಹಪಾಠಿಯನ್ನು 'ಅದು ಓದಿದಿಯಾ... ಇದು ಓದಿದಿಯಾ' ಎಂದು ಕೇಳಿ ಗೊಂದಲ ಉಂಟುಮಾಡಿ ತಾವೂ ಗಲಿಬಿಲಿಗೊಳ್ಳುತ್ತಲೇ ಸಿದ್ಧವಾಗುತ್ತಲೇ ಇರುವವರನ್ನು ನೀವೂ ಗಮನಿಸಿದ್ದೀರಲ್ಲ?

ಇನ್ನು ಪ್ರಯಾಣಕ್ಕೆ ಸಿದ್ಧವಾಗುವವರ ಮೋಜೇ ಮೋಜು! ಪ್ರಯಾಣಕ್ಕೆ ಹೊರಡುವವರು ಒಬ್ಬರೇ ಆದರೂ ಇವರ ಸಹಾಯಕ್ಕೆ ಮನೆಮಂದಿಯೆಲ್ಲಾ ಸಿದ್ಧವಾಗುತ್ತಿರಬೇಕಾಗುತ್ತದೆ. ನನ್ನ ಬೆಲ್ಟ್ ಎಲ್ಲೇ? ಎಂದು ಹೆಂಡತಿಯನ್ನು ಕೇಳುತ್ತ, 'ಸೋಪು, ಪೇಸ್ಟ್ ಸೂಟ್‌ಕೇಸ್‌ಗೆ ಹಾಕಿದಿಯಾ' ಎಂದು ಮಗನನ್ನು ಆತುರಪಡಿಸಿ, 'ಆ ಡೈರಿಲಿ ಅಡ್ರೆಸ್, ಫೋನ್ ನಂಬರು ಇದೆ, ಈ ಕಡೆ ಕೊಡು' ಎಂದು ಮಗಳನ್ನು ಗಲಿಬಿಲಿಗೊಳಿಸಿ, ಅಮ್ಮನಿಗೆ 'ಬೇಗ ಕಾಫಿ ಬಿಸಿ ಮಾಡಿಕೊಡಮ್ಮ... ತುಂಬಾ ಬಿಸಿ ಬೇಡ... ಓ ಟೈಂ ಆಗ್ಹೋಯ್ತು, ಹಾಳಾದ್ದು ಎಷ್ಟು ಬೇಗ ಓಡುತ್ತೆ!' ಎಂದು ಶಾಪ ಹಾಕುತ್ತಲೇ ಸಿದ್ಧವಾಗುತ್ತಲೇ ಇರುವುದರಿಂದ ಇವರು ಪ್ರಯಾಣಿಸಬೇಕಾದ ರೈಲು ಅಥವಾ ಬಸ್ಸು ತಪ್ಪಿ ಹೋಗಿರುತ್ತೆ.

ಸಿದ್ಧವಾಗುತ್ತಲೇ ಇರುವವರಿಂದ ನಮಗೂ ಕೆಲವೊಮ್ಮೆ ಒಳ್ಳೆಯದೇ ಆಗುತ್ತದೆ. ವಿಳಂಬ ನೀತಿ ಅನುಸರಿಸುವುದರಿಂದ ಸರಿಯಾದ ವೇಳೆಗೆ ಪ್ರಯಾಣ ಸಾಗದೇ ಹೋದರೂ ಪ್ರಾಣಾಂತಿಕ ಸಂದರ್ಭಗಳಿಂದ ಬಚಾವ್ ಆದ ಉದಾಹರಣೆಗಳು ನನ್ನಲ್ಲಿವೆ.

ಅಂದು ಬೆಂಗಳೂರಿಗೆ ಸಮಾರಂಭವೊಂದಕ್ಕೆ ಹೋಗಬೇಕಾಯಿತು. ಸ್ನಾನ ಮಾಡೋಣವೆಂದರೆ ಟ್ಯಾಂಕಿಗೆ ನೀರು ಹತ್ತಿರಲಿಲ್ಲ, ಕರೆಂಟ್ ಇಲ್ಲದ್ದರಿಂದ ಇದ್ದ ನೀರು ಬಿಸಿಯೂ ಆಗಿರಲಿಲ್ಲ, ಸ್ನಾನ ಮಾಡದೇ ಹೊರಡುವಂತೆಯೂ ಇರಲಿಲ್ಲ. ಅಂತೂ ಇಂತೂ ಸಂಪಿನಿಂದ ನೀರು ತಂದು ಸ್ನಾನ ತಿಂಡಿ ಮುಗಿಸಿ ಕನ್ನಡಿ ಮುಂದೆ ನಿಂತೆ. ಶುರುವಾಯಿತು ನೋಡಿ ನನ್ನವಳ ರಾಗ. 'ಅದೇನ್ರಿ ನೀವು... ಹೆಂಗಸರು ಅಲಂಕಾರ ಮಾಡಿಕೊಳ್ಳೋ ಹಾಗೆ ಗಂಟೆಗಟ್ಲೆ ಲೇಟು ಮಾಡ್ತೀರಪ್ಪ. ನಿಮಗೋಸ್ಕರ ಬೇಗ



# ಸಿದ್ಧವಾಗುತ್ತಲೇ ಇರುವವರು

ಶ್ರೀಕಂಠ ಗುಂಡಪ್ಪ

ಎದ್ದು ಎಲ್ಲಾ ಸಿದ್ಧ ಮಾಡಿಕೊಟ್ರು ನೀವಂತು ಸಿದ್ಧವಾಗ್ತಾನೇ ಇರ್ತೀರಿ' ಎಂಬ ಬೈಗಳ ಬೇಗೆ ತಾಳಲಾರದೆ ಆಟೋ ಹಿಡಿದು ರೈಲ್ವೇ ಸ್ಟೇಷನ್ ತಲುಪುವ ಹೊತ್ತಿಗೆ ನನ್ನ ದುರದೃಷ್ಟವಶಾತ್ತು ರೈಲು ಅವತ್ತು ನಿಗದಿತ ವೇಳೆಗೆ ಹೊರಟು ಬಿಡೋದೆ ? ಎಷ್ಟು ಸಿಟ್ಟು ಬಂದಿತ್ತೂ ಅಂತೀರಿ ನನ್ನ ಗಡಿಯಾರದ ಮೇಲೆ! ಮತ್ತೊಂದು ಆಟೋ ಹಿಡಿದು ಬಸ್ಸಲ್ಲಿ ಬೆಂಗಳೂರು ತಲುಪಿದ ತಕ್ಷಣ ಬಂದ ವರ್ತಮಾನ ನಾವು ಪ್ರಯಾಣಿಸಬೇಕಾದ ರೈಲು ಮದ್ದೂರಲ್ಲಿ ಹಳಿ ತಪ್ಪಿ ಪಾಪ ಹಲವರಿಗೆ ಗಾಯ. ನಾಯವಾಗದ ಏನ ರಿಪೇರಿ

ಆಗುವವರೆಗೂ ಬೋಗಿಯಲ್ಲೇ ಕೂತು ಮಸಾಲೆ ತಿನ್ನುತ್ತಿದ್ದರಂತೆ. ನಾನು ಸಿದ್ಧವಾಗುತ್ತಲೇ ಇದ್ದುದರಿಂದ ಅಲ್ಲವೇ ಪ್ರಾಣಾಂತಿಕ ಅನಾಹುತ ತಪ್ಪಿತು. ಈ ಬಗ್ಗೆ ಬೀಗುತ್ತ ಹೆಂಡತಿಗೆ ಹೇಳಿದೆ. ಯಾರ ಹೆಂಡ್ತೀರು ತಾನೇ ಗಂಡಂದಿರ ಕೆಲಸಕ್ಕೆ 'ಶಹಬಾಷ್'ಗಿರಿ ಕೊಡ್ತಾರೆ ಹೇಳಿ.

ಬಂದವರ ಮುಂದೆ ತಲೆ ತಗ್ಗಿಸಿ, ತಗ್ಗಿಸಿ ಕೇಸರಿಭಾತು, ಖಾರಾಭಾತು ಆತಿಥ್ಯ ನೀಡಿ ನೀಡಿ 'ವರವಿಕ್ರಯ' ವ್ಯಾಪಾರದಲ್ಲಿ ಚೌಕಾಸಿ ಕುದರದೆ ಪದೇ ಪದೇ ಅಲಂಕಾರ ಮಾಡಿ ಕೊಳ್ಳುತ್ತ ಸಿದ್ಧವಾಗುತ್ತಲೇ ಇರುವ ಕನ್ಯಾರತ್ನಗಳು, ಕಪಿಗಳು ಕ್ಷಮಿಸಿ ಕನ್ಯಾಪಿತೃಗಳು ಕಣ್ಣಮುಂದೆ ಕದಲುತ್ತಾರೆ. ದೇಶ, ಕಾಲ ಮತ್ತು ಪರಿಸ್ಥಿತಿಗಳಿಗನುಗುಣವಾಗಿ ಆಷಾಢ ಮಾಸವೊಂದನ್ನು ಬಿಟ್ಟು ಉಳಿದ ತಿಂಗಳುಗಳಲ್ಲಿ ದಿನನಿತ್ಯ ೩೦ ರಿಂದ ೪೫ ಕನ್ಯಾಮಣಿಗಳು ಇಂಥ 'ಎಗ್ಜಿಬಿಷನ್'ಗೆ ಸಿದ್ಧವಾಗುತ್ತಲೆ ಇರುತ್ತಾರೆ ಎಂಬುದು ನನ್ನ ಖಾಸಗಿ ಅಂದಾಜು.

ಆ ಕಡೆ ಇಂಪೋರ್ಟೆಡ್ ವರಗಳು ಅಂದರೆ ಅಮೆರಿಕಾ ಲಂಡನ್ ಇತ್ಯಾದಿ ಹೊರದೇಶಗಳಿಂದ ಕಡಿಮೆ ಅವಧಿಯ ರಜೆಯಲ್ಲಿ ಬಂದಿರುವುದರಿಂದ ಒಂದೇ ದಿನ ೪ ಅಥವಾ ೫ ಹೆಣ್ಣುಗಳನ್ನು 'ನೋಡಿಕೊಂಡು ಹೋಗುವ' ಕಾರ್ಯಕ್ರಮ ಹಾಕಿಕೊಂಡು, ಊಟದ ಖರ್ಚನ್ನು ಉಳಿಸಿಕೊಂಡು ಮರಗಟ್ಟಿ ಹೋಗಿರುವ ನಾಲಿಗೆಗೆ ಮತ್ತೆ ಭಾರತದ ಅಡಿಗೆಯ ರುಚಿ ಸವಿಯಲು ಸ್ವಲ್ಪವೂ ಬೇಸರ ಮಾಡಿಕೊಳ್ಳದೆ ಅದೇ ಉಪ್ಪಿಟ್ಟು ಕೇಸರಿಭಾತುಗಳನ್ನು ತಿನ್ನಲು ಸಿದ್ಧವಾಗುತ್ತಲೇ ಇರುತ್ತಾರೆ.

ಸಿದ್ಧವಾಗುತ್ತಲೇ ಇರುವವರ ಬಗ್ಗೆ ನಾನು ಹೇಳೋದು ಲಘುವಾಗಿ ಕಾಣಬಹುದು. ಆದರೇ ಸ್ವಲ್ಪ ಗಂಭೀರವಾಗಿ ಯೋಚಿಸಬೇಕಾಗುತ್ತದೆ. ಕಾಲವನ್ನು ಗೆಲ್ಲುವ ನಿಟ್ಟಿನಲ್ಲಿ ಸಿದ್ಧತೆ ನಡೆಸುವುದೇ ಚಲನಶೀಲತೆಗೆ ಸಾಕ್ಷಿ ಎಂಬುದು ನನ್ನ ಅಭಿಮತ. ಇದಕ್ಕೆ ತಮ್ಮ ಸಹಮತವೂ ಇದೆ ಎಂದು ಭಾವಿಸುತ್ತೇನೆ. ಸಿದ್ಧವಾಗುತ್ತಲೇ ಇರುವವರ ಬಗ್ಗೆ ಚಿಂತಿಸುತ್ತಿದ್ದಾಗ ನನಗೆ ಬಸವಣ್ಣ ನೆನಪಾದರು. ಅವರ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ ನೆನಪಾಗಿ ಅಷ್ಟೇ ಮುಖ್ಯವಾಗಿ ಕಂಡದ್ದು ಈ ಅಂತರಂಗ ಸಿದ್ಧತೆ ಬಹಿರಂಗ ಸಿದ್ಧತೆ. ಕೆಲವರು ಅಚ್ಚುಕಟ್ಟಾಗಿ ಸಿದ್ಧರಾದರೇ ಕೆಲವರು ಗಡಿಬಿಡಿಯಲ್ಲಿ ಸಿದ್ಧರಾಗುತ್ತಾರೆ. ಈ ಭಾನುವಾರ ಆ ಕೆಲಸ ಮುಗಿಸೇಬಿಡಬೇಕೆಂದು ಸಿದ್ಧತೆ ಮಾಡಿಕೊಳ್ಳುವಷ್ಟರಲ್ಲೆ ಭಾನುವಾರ ಓಡಿಹೋಗಿರುತ್ತೆ. ಏಕೆ ಅಂತ ಕೇಳಿ, ನೀವು. ನಾ ಹೇಳ್ತೀನಿ. ಅಲ್ರೀ ಒಂದು ಕೆಲಸ ಕೈಗೂಡಬೇಕಾದ್ರೆ ಅದಕ್ಕೆ ಬೇಕಾದ ಪರಿಕರಗಳನ್ನೆಲ್ಲ ಸಿದ್ಧ ಮಾಡಿಕೊಳ್ಳದೆ ಅರ್ಧಂಬರ್ಧ ಮಾಡಿ ದಾರಿತಪ್ಪಿ ಮತ್ತೆ ಮೊದಲಿನಿಂದ ಸಿದ್ಧತೆ ನಡೆಸುತ್ತಲೇ ಇರುವವರನ್ನ ನೀವು ನೋಡಿದಿರಿ. ಅದೇನೆ ಇರಲಿ. ಸಿದ್ಧವಾಗುತ್ತಲೇ ಇರುವವರನ್ನು ಕಂಡರೆ ನನಗಂತೂ ಖುಷಿಯೋ ಖುಷಿ. ಇಡೀ ದಿನ ಚಟುವಟಿಕೆಯಿಂದ ಇರುತ್ತಾರೆ. ಒತ್ತಡಕ್ಕೆ ಆತುರಕ್ಕೆ ಎಂದೂ ಮಣಿವವರಲ್ಲ.

ಹೀಗಾಗಿ ಇವರ ಬಗ್ಗೆ ಗಮನಿಸಬಹುದಾದ ಮತ್ತೊಂದು ಮಹತ್ವದ ಸಂಗತಿ ಎಂದರೆ ಆರೋಗ್ಯಕ್ಕೆ ಸಂಬಂಧಿಸಿದ್ದು. ಯಾರೇ ಹೋರಾಡಲಿ, ಕೂಗಾಡಲಿ, ನೆಮ್ಮದಿಗೆ ಭಂಗ ತಂದುಕೊಳ್ಳದ ಮನೋಭಾವವಿರುವುದರಿಂದ ರಕ್ತದೊತ್ತಡ, ಮಧುಮೇಹ, ಉಸಿರಾಟಕ್ಕೆ ಸಂಬಂಧಿಸಿದ ರೋಗಗಳು ಸಿದ್ಧವಾಗುತ್ತಲೇ ಇರುವವರನ್ನು ನೋಡಿ ಓಡಿ ಹೋಗುತ್ತವೆ. ಆದರೆ ಇವರೊಂದಿಗೆ ವ್ಯವಹಾರ ಮಾಡೋ ಮಂದಿಯ ಬಗ್ಗೆ ತದ್ವಿರುದ್ಧದ ಪರಿಣಾಮ ಅಂತ ಬೇರೆ ಹೇಳಬಾರದು ಅಲ್ವೆ ?

ಸಿದ್ಧವಾಗುತ್ತಲೇ ಇರುವವರ ಬಗ್ಗೆ ಯೋಚನೆ ಮಾಡುವಾಗ ಥಟ್ಟನೆ ನೆನಪಾಗುವವರು ಭಾಷಣಕಾರರು. 'ಸಭಿಕರೇ ಈಗಾಗಲೇ ಸಾಕಷ್ಟು ವೇಳೆಯಾಗಿದೆ. ನಾನಾಡಬೇಕೆಂದ ಮಾತುಗಳೆಲ್ಲ ವೇದಿಕೆಯಲ್ಲಿರುವ ಈ ಗಣ್ಯರು ಆಡಾಗಿದೆ. ನಾನು ಹೆಚ್ಚು ವೇಳೆಯನ್ನು ತೆಗೆದುಕೊಳ್ಳಲು ಇಷ್ಟಪಡುವುದಿಲ್ಲ. ಕೇವಲ ಎರಡೇ ಎರಡು ಮಾತು ಹೇಳಿ ನನ್ನ ಮಾತು ಮುಗಿಸಿಬಿಡುತ್ತೇನೆ' ಎಂದು ಆರಂಭಿಸಿ ಮೊದಲನೆಯದಾಗಿ, ಎರಡನೆಯದಾಗಿ, ಕೊನೆಯದಾಗಿ... ಕೊನೆ ಎಲ್ಲಿ ಬಂತು ! ಗಂಟೆಗಟ್ಟಳೆ ಕೊರೆಯುವ ಸಿದ್ಧತೆ ಮಾಡಿಕೊಂಡೇ ಬರುವ ಈ ಮಂದಿಯ ಬಗ್ಗೆ ನನಗಿಂತ ನಿಮಗೆ ಹೆಚ್ಚು ಗೊತ್ತಿರಬಹುದು ಅಲ್ಲವೇ ?

ನಮ್ಮ ನಿಮ್ಮ ಮನೆಗಳಲ್ಲಿ ಅಜ್ಜಿ, ಅತ್ತೆ ಹೀಗೆ ವಯಸ್ಸಾದವರಿದ್ದರೆ ಅವರೂ ಒಂದು ರೀತಿ ಸಿದ್ಧವಾಗುತ್ತಲೇ ಇರುತ್ತಾರೆ. ಏಕೆ ಅಂತಿರಾ ? ಸಂಡಿಗೆ ಹಪ್ಪಳ ಉಪ್ಪಿನಕಾಯಿ ಇಂಥ ಪದಾರ್ಥಗಳು ಕೊಂಡುತಂದು ತಿನ್ನುವುದು ಆ ಹಿರಿಯರಿಗೆ ಇಷ್ಟವಾಗದು. ಅದಕ್ಕೆ ಬಿಸಿಲು ಕಾಲ ಬರುತ್ತೆ ಅನ್ನುವ ಹೊತ್ತಿಗೆ ಅಟ್ಟದ ಮೇಲೆ ಧೂಳು ಹಿಡಿದು ಕೂತ ಅಗಲವಾದ ತಟ್ಟೆಗಳು, ಪ್ಲಾಸ್ಟಿಕ್ ಹೊದಿಕೆಗಳು ಹೀಗೆ ಅದಕ್ಕೆ ಸಂಬಂಧಿಸಿದ ಎಲ್ಲಾ ಸಿದ್ಧತೆಗಳು ಆರಂಭವಾಗುತ್ತವೆ. ಸರಿಯಾದ ಬಿಸಿಲು ಬಾರದೇ ಕೈ ಕೊಟ್ಟರೆ ಪಾಪ ! ಮುಂದಿನ ಬಿಸಿಲು ಕಾಲದವರೆಗೆ ಸಿದ್ಧವಾಗುತ್ತಲೇ ಇರುತ್ತಾರೆ.

ನಮ್ಮ ನಿಮ್ಮಂಥವರ ಶ್ರೀಸಾಮಾನ್ಯರ ಪಾಡು ಬಿಡಿ. ಮಹಾಪುರುಷರು ಸಿದ್ಧವಾಗುತ್ತಲೇ ಇರುತ್ತಾರೆ. ವಿಶ್ವಶಾಂತಿಗಾಗಿ, ಲೋಕಕಲ್ಯಾಣಕ್ಕಾಗಿ. ಅವರು ಸಿದ್ಧರಾಗುತ್ತಲೇ ಬುದ್ಧರಾದವರು ಪ್ರಬುದ್ಧರಾದರು. ನಾವು ನೀವು ಸಿದ್ಧರಾಗುತ್ತಲೇ ಇರುತ್ತೇವೆ ಯಾರ ಕಲ್ಯಾಣಕ್ಕೋ, ಅರ್ಥಾತ್ ಯಾರ ಮದುವೆಗೋ... ಯಾರ ಪುರುಷಾರ್ಥಕ್ಕೋ... ಹಲೋ ನಿಮ್ಮನ್ನೇ ಅಂದಹಾಗೆ ಈ ಹರಟೆ ಓದುವುದಕ್ಕೇ ನೀವು ಸಿದ್ಧವಾಗುತ್ತಲೇ ಇದ್ದೀರಿ ಅಂತ ಕಾಣುತ್ತೆ... ಆದರೆ ಅಷ್ಟರಲ್ಲಿ ನನ್ನ ಹರಟೆ ಮುಗಿದೇ ಹೋಗಿದೆ...

ಶ್ರೀಕಂಠ ಗುಂಡಪ್ಪ
ನಂ : ೫೭, 'ಈಶಾನ್ಯ', ಬ್ಯಾಂಕ್ ಕಾಲೋನಿ, ಬೋಗಾದಿ, ಮೈಸೂರು – ೫೭೦ ೦೦೬

## ನಿನ್ನದೇ ನೆನಪು

೧

ಅಳತೆಯೇ ಇಲ್ಲದ
ಆಗಸದ ತುಂಬೆಲ್ಲಾ
ನಿನ್ನದೇ ನೆನಪು ನಿನ್ನದೇ

೨

ಸುಳಿದಾಟವಿದೆ ಮನದಲ್ಲಿ
ನೋಡಿದ್ದು ಕೇಳಿದ್ದು
ಆಡಿದ್ದು ಓಡಿದ್ದು
ಎಲ್ಲವನೂ ಮೀರಿ
ಬಂದು ನಿಂತಿದೆ ಎದುರು
ನಿನ್ನದೇ ನೆನಪು ನಿನ್ನದೇ

೩

ಬೀಜದಲ್ಲಿ ಮರ ಇರುವಂತೆ
ಶೂನ್ಯದಲ್ಲಿ ಧ್ವನಿ ಇರುವಂತೆ
ಮನದಲ್ಲಿ ನೀನೇ ಗುಣವಂತೆ
ನೆನಪಲ್ಲಿ ನೀನೇ ಸಿರಿವಂತೆ
ಕಾಲದಲ್ಲಿ ಸಿಹಿ ಸೇರಿದಂತೆ !

೪

ಕೆಲಸದಲಿ ತೊಡಗಿರಲು
ತಿಳಿಯದು ಕಾಲ ಸರಿಯುವುದು
ಸಂಗೀತ ಕೇಳುತಿರಲು
ತಿಳಿಯದು ಕಾಲ ಸರಿಯುವುದು
ನಿನ್ನ ನೆನಪಾಗುತಿರಲು
ಕಾಲ ಸರಿದು ಬಳಿ ಇರುವ ತನಕ ! (ತವಕ !)
ತಿಳಿಯದು
ಕಾಲವೇತಕೆ ಸರಿಯದು ?

ಬಂದಗದ್ದೆ ರಾಧಾಕೃಷ್ಣ
ಕೆಳದಿ, ಸಾಗರ, ಶಿವಮೊಗ್ಗ ಜಿಲ್ಲೆ ೫೭೭ ೪೦೧



ಮಾತು ಅನಿವಾರ್ಯ ಮೌನದಷ್ಟೇ! ಮಾತು ಅತಿಯಾದಾಗ ಮೌನಕ್ಕೆ, ಮೌನ ಅತಿಯಾದಾಗ ಮಾತಿಗೆ ನಾವು ನಮ್ಮ ಹೃದಯ ಸಂವಾದವನ್ನು ಅವಸ್ಥಾಂತರಿಸಿಕೊಳ್ಳದಿದ್ದರೆ, ಆ ಮೌನಕ್ಕಾಗಲೀ, ಈ ಮಾತಿಗಾಗಲೀ ಯಾವುದೇ ಅರ್ಥವಿರದು.



# ಮೌನ [illegible]

ಗಿರಿಜಾ ಶಾಸ್ತ್ರಿ

ನಾವು ಹೀಗೆ ಗೆಳತಿಯರೆಲ್ಲ 'ಸೃಜನಾ' ಎನ್ನುವ ಹೆಸರಿನಡಿಯಲ್ಲಿ ಕೂಡಿಕೊಂಡು, 'ಕತೆ ಹೇಳೇ...' ಎನ್ನುವ ನಮ್ಮದೇ ಆದ ಕಥಾ ಸಂಗ್ರಹವೊಂದನ್ನು ಸಂಪಾದಿಸಿ ಪ್ರಕಟಿಸಿ ಹೊರತಂದಿದ್ದೆವು. ಅದರ ಸಂಪಾದಕಿಯರಲ್ಲಿ ಒಬ್ಬಳಾದ ನಾನು ಬಿಡುಗಡೆಯ ಸಂದರ್ಭದಲ್ಲಿ ಮಾತನಾಡುತ್ತಾ ''ನಾವು ಮಹಿಳೆಯರು ಸ್ಟೇಜಿಗೆ ಹೆದರಬೇಕಾಗಿಲ್ಲ, ಸ್ಟೇಜು ನಮಗೆ ಹೆದರುವಂತಿರಬೇಕು.... ಜನಕರಾಜನ ಆಸ್ಥಾನದಲ್ಲಿ ಗಾರ್ಗಿ ಕುಳಿತಿದ್ದ ಹಾಗೆ... ಆದರೆ ಗಾರ್ಗಿಯ ಸ್ಥಿತಿ ಇಂದು ನಮ್ಮದಲ್ಲ. ''ನೀನು ಇನ್ನೊಂದು ಶಬ್ದ ಮಾತನಾಡಿದರೆ ನಿನ್ನ ತಲೆ ಒಡೆದು ಹೋಳಾದೀತೆಂದು'' ಯಾವ ಯಾಜ್ಞವಲ್ಕ್ಯನೂ ಬಂದು ಹೇಳಲಾರ,'' ಎಂದು ಹೀಗೆ ಜೋಕು ಹೊಡೆದು ಬಹಳ ಜಂಭದಿಂದ ಮಾತನಾಡಿ ನನ್ನ ಕೋಡಿಗೆ ಗರಿ ಮೂಡಿಸಿಕೊಂಡಿದ್ದೆ. ನನ್ನ ಈ ಬರೀ ಮಾತುಗಳಿಗೆ ಬ್ರೇಕು ಹಾಕುವಂತೆ, ಈ ಮಾತು, ಭಾಷೆ ಎನ್ನುವುದು ಹೇಗೆ ಮನುಷ್ಯನ ಸಂಬಂಧಗಳನ್ನೂ ಸಂಸ್ಕೃತಿಯನ್ನೂ ರೂಪಿಸುತ್ತಲೇ ಅದರ ನಾಶಕ್ಕೂ ಕಾರಣವಾಗಿಬಿಡುತ್ತದೆ ಎಂಬ ಸಂಕೀರ್ಣವಾದ ಅಮೂರ್ತ ಚಿಂತನೆಯನ್ನು ಮೂರ್ತ ವಿವರಗಳ ಮೂಲಕ ಒಂದು ಸುಂದರವಾದ ''ಕವಿ ಸಮಯ'' ಎನ್ನುವ ರಂಗ ರೂಪಕದ ಮೂಲಕ ನನ್ನ ಗೆಳತಿ ಹಾಗೂ ಕವಯಿತ್ರಿ ಹಾ. ಮಾ. ಕನಕ ಪ್ರಯೋಗ ಮಾಡಿ ತೋರಿಸಿದ್ದಳು. ಕೆ. ವಿ. ಅಕ್ಷರ ಅವರ ಪರಿಕಲ್ಪನೆಯಲ್ಲಿ ಮೂಡಿದ ಇದನ್ನು ಕನ್ನಡದ ಪ್ರಸಿದ್ಧ ಕವಯಿತ್ರಿಯರಾದ ಪ್ರತಿಭಾ, ಸವಿತಾ ನಾಗಭೂಷಣ್, ಚ. ಸರ್ವಮಂಗಳ, ಎಂ. ಆರ್. ಭಗವತಿ ಮುಂತಾದವರ ಕವಿತೆಗಳ ಆಯ್ದ ಸಾಲುಗಳಿಂದ ಸಿದ್ಧಪಡಿಸಿದ್ದ ಕನಕ ಜೊತೆಗೆ ತನ್ನ ಕವಿತೆಯ ಸಾಲುಗಳನ್ನೂ ಆಯ್ದುಕೊಂಡಿದ್ದಳು.

ಕನಕಾಳ ಮಾತಿನ ಬೆಳಕಿನಲ್ಲಿಯೇ ನಾನು ಅಕ್ಕ ಮಹಾದೇವಿಯನ್ನು ಮೆಲಕು ಹಾಕುತ್ತಾ ಮನೆಗೆ ಬಂದಿದ್ದೆ. ಯಾಕೆಂದರೆ ಮಾರನೆಯ ದಿನ ನಾನು ವಿಚಾರಸಂಕಿರಣವೊಂದರಲ್ಲಿ ಅಕ್ಕನ ಕುರಿತಾಗಿ ಮಾತನಾಡಬೇಕಿತ್ತು. ಹಾಗಾಗಿ ಅಂದು ಬೆಳಿಗ್ಗೆ ನಾನು ಅಕ್ಕನನ್ನು ಅವಳ ಅನುಭಾವ, ಕಾಯದ ಪರಿಕಲ್ಪನೆ ಮತ್ತು ನಿಸರ್ಗದ ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವ ಪ್ರಯತ್ನದಲ್ಲಿ ಬಹಳ ಪ್ರೀತಿಯಿಂದ, ಅಷ್ಟೇ ಅಭ್ಯಾಸಪೂರ್ಣವಾಗಿ ಈಗಾಗಲೇ ಸಿದ್ಧಪಡಿಸಿದ್ದ ಪ್ರಬಂಧವನ್ನು ಪ್ರಸ್ತುತ ಪಡಿಸಲು ತೆಗೆದುಕೊಂಡು ಹೋಗಿದ್ದೆ. ಈ ಪ್ರಬಂಧವು 'ಹೊಸತು' ಪತ್ರಿಕೆಯಲ್ಲಿ ವರ್ಷಗಳ ಹಿಂದೆ ಪ್ರಕಟವಾಗಿದ್ದರಿಂದ ನನ್ನ ಆತ್ಮವಿಶ್ವಾಸಕ್ಕೆ ಕೊರತೆಯೇನೂ ಇರಲಿಲ್ಲ. ನನ್ನ ಗೆಳೆಯರೊಬ್ಬರು ಅವರ ಪ್ರೀತಿಯ ಜಗನ್ನಾಥದಾಸರ ಕುರಿತಾಗಿ ಮಾತನಾಡುವವರಿದ್ದರು. ಕರ್ನಾಟಕದಿಂದ ಬಂದಿದ್ದ, ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಸುಪ್ರಸಿದ್ಧ ಉದ್ದಾಮ ಪಂಡಿತರೆಂದೆನಿಸಿಕೊಂಡ ಆಚಾರ್ಯರೊಬ್ಬರು ಈ ಸಂಕಿರಣದ ಅಧ್ಯಕ್ಷತೆ ವಹಿಸಿದ್ದರು. ಹಿಂದಿನ ದಿನದ ನೆನಪು ನನಗೆ ಇನ್ನೂ ಹಸುರಾಗಿಯೇ ಇದ್ದುದರಿಂದ ನಾನೇನೂ ಹೆದರದೇ ನನ್ನ ಮಾತುಗಳನ್ನು ಮೂವತ್ತು ನಿಮಿಷಗಳಿಗೆ ಸರಿಯಾಗಿ ಮುಗಿಸಿ ಕುಳಿತುಕೊಂಡೆ. ಧಾರ್ಮಿಕ ಕಾರ್ಯಕ್ರಮಕ್ಕೆಂದು ಬಂದಿದ್ದ ಭಕ್ತಾದಿಗಳಾಗಲೀ, ಉಪಸ್ಥಿತರಿದ್ದ ''ಆಚಾರ್ಯರಾಗಲೀ'' ನನ್ನ ಮಾತುಗಳಿಗೆ ಅವರ ಕಿವಿಗಳನ್ನು ಮಾತ್ರ ತೆರೆದುಕೊಂಡಿದ್ದಿರಬೇಕು. ಬಹುಶಃ ಅದೂ ಇಲ್ಲವೇನೋ. ಈ ವಿಚಾರಸಂಕಿರಣ ಪ್ರಾರಂಭವಾಗುವ ಮುನ್ನ ಸಂಗೀತದ ಕಾರ್ಯಕ್ರಮವೂ ಇದ್ದಿತು. ನಮ್ಮ ಮಾತುಗಳು ಮುಗಿದ ತಕ್ಷಣ ಇನ್ನು, ಅಧ್ಯಕ್ಷರ ಭಾಷಣ. ಮೈಯೆಲ್ಲಾ ಕಿವಿಯಾಗಿ ಕುಳಿತ ಭಕ್ತಾದಿಗಳನ್ನು ನೋಡುತ್ತ ಒಮ್ಮೆ ''ಈ ಒಣ ಮಾತುಗಳನ್ನು ಕೇಳುವುದಕ್ಕಿಂತ ಸಂಗೀತವನ್ನೇ ಕೇಳುತ್ತ ಇದ್ದುಬಿಡಬಹುದಿತ್ತು'' ಎಂದು ಒಮ್ಮೆಲೆ ಗುಡುಗಿದಂತೆ, ಸಂಗೀತದಿಂದ ಅವರ ಕಣ್ಣಂಚು ಒದ್ದೆಯಾದುದನ್ನು ಹೇಳುತ್ತ ಆದೇಶ ಹೊರಡಿಸಿದರು. ''ಸಂಗೀತಕ್ಕೆ ತನ್ಮಯ ಗೊಳಿಸುವ ಶಕ್ತಿ ಇದ್ದರೆ, ಮಾತಿಗೆ ಇನ್ನೊಬ್ಬರನ್ನು ಮೆಚ್ಚಿಸ ಬೇಕೆಂಬ ಅಹಂಕಾರವಿರುತ್ತದೆ. ಆದುದರಿಂದ ನಾವು ಸಂಗೀತವನ್ನೇ ಕೇಳುತ್ತಾ ಇದ್ದುಬಿಡಬಹುದಿತ್ತು. ನಮಗೆ ಅನುಭವವಿಲ್ಲದ ವಿಚಾರಗಳನ್ನು ನಮ್ಮ ತರ್ಕಕ್ಕೆ ಒಗ್ಗಿಸಿ ಕೊಳ್ಳುತ್ತಾ ಬಹಳ ಬುದ್ಧಿವಂತರೆಂದು ತೋರಿಸಿಕೊಳ್ಳುವ ಆಸೆ ನಮಗೆ. ಆದರೆ ನಿಜವಾಗಿ ಹೀಗೆ ಮಾಡುವುದರಿಂದ ನಾವು ನಮ್ಮ ಹೆಡ್ಡತನವನ್ನೇ ಪ್ರದರ್ಶಿಸಿಕೊಳ್ಳುತ್ತಿರುತ್ತೇವೆ. ಈ ಮಾತೆಂಬುದು ಮಹಾ ಸುಳ್ಳು'' ಎಂದು ಹೇಳುತ್ತಲೇ ಮಧ್ಯಾಹ್ನ ಒಂದು ಗಂಟೆಯ ಸುಮಾರಿಗೆ ಪ್ರಾರಂಭಿಸಿ ದವರು ಎರಡೂ ಕಾಲು ಗಂಟೆಯವರೆಗೆ ಮಾತ ನಾಡಿದರು. ಅವರ ಅಧ್ಯಕ್ಷೀಯ ಮಾತುಗಳಲ್ಲಿ ಜಗನ್ನಾಥ ದಾಸರು ಕ್ವಚಿತ್ತಾಗಿ ಬಂದರೇ ಹೊರತು ಅಕ್ಕ ಸುಳಿಯಲಿಲ್ಲ. ಅಕ್ಕ ಬಂದಿದ್ದರೂ ಅದು ಅವಳ ಆಧ್ಯಾತ್ಮಿಕ ವಿಚಾರಗಳನ್ನು ಅರ್ಥಮಾಡಿಕೊಳ್ಳಲಾರದೇ ಹರಟುವವರ ಹೆಡ್ಡತನದ ಟೀಕೆಯಾಗಿ ಬಂದಿತ್ತು. ಈ ಟೀಕೆ ನನ್ನನ್ನು ಕುರಿತಾದದ್ದೇ ಎಂದು ತಿಳಿಯದೇ ಹೋಗುವಷ್ಟು ಹೆಡ್ಡತನ ನನಗಿರಲಿಲ್ಲ.

ಕನಕಳ ''ಮಾತಿನ ಕತೆ''ಯ ಗುಂಗಿನಲ್ಲಿಯೇ

ಬಂದಿದ್ದವಳಿಗೆ, ನನ್ನೊಳಗಿಳಿದ ಅಕ್ಕನ ಮಾತುಗಳು ಶುಷ್ಕ ತರ್ಕವಾಗಿ, ಅಕಾಡೆಮಿಕ್ ಕಸರತ್ತಾಗಿ ಆಚಾರ್ಯರಿಗೆ ಕಂಡ ಸ್ವರೂಪ ಮಾತ್ರ ನನ್ನನ್ನು ಬೆಚ್ಚಿಬೀಳಿಸುವಂತಿತ್ತು. ಹಿಂದಿನ ರಾತ್ರಿಯಷ್ಟೇ ಗಾರ್ಗಿಯ ನೆನಪಿನಿಂದಾಗಿ ಆತ್ಮವಿಶ್ವಾಸದ ಹೊಸಗಾಳಿಯನ್ನು, ಶಕ್ತಿಯನ್ನು ತುಂಬಿಕೊಳ್ಳುತ್ತಿದ್ದ ಪುಪ್ಪಸದೊಳಕ್ಕೆ ಚೂಪಾಗಿ ಸಣ್ಣಗೆ ಸೂಜಿ ಚುಚ್ಚಿದ ಹಾಗೆ......

ಸರಿ, ಆಚಾರ್ಯರ ಮಾತುಗಳನ್ನು ನಾನು ಸಂಪೂರ್ಣವಾಗಿಯಲ್ಲವಾದರೂ ಸ್ವಲ್ಪಮಟ್ಟಿಗಾದರೂ ಒಪ್ಪುತ್ತೇನೆ. ಆದರೆ ಕನಕಳ ''ಕವಿಸಮಯ'' ನನ್ನನ್ನು ಕಲಕಿದ ಪರಿ ಬೇರೆಯೇ. ಆಚಾರ್ಯರ ಪ್ರಶ್ನೆಗಳಿಗೆಲ್ಲಾ ಕನಕಳ ರಂಗರೂಪಕದಲ್ಲಿ ಉತ್ತರವಿದೆ ಎಂಬ ನಂಬಿಕೆಯಿಂದಲೇ, ''ಕವಿಸಮಯ'' ನನ್ನೊಳಗೆ ಇಳಿದ ಬಗೆಯನ್ನು ಈ ಬರಹದ ಮೂಲಕ ಇಲ್ಲಿ ಹಂಚಿಕೊಳ್ಳಲು ಪ್ರಯತ್ನಿಸುತ್ತೇನೆ.

ಹೌದು, ಈ ಶಬ್ದ, ಮಾತು ಕೇವಲ ಸಂಕೇತ ಮಾತ್ರವೇ ಹೊರತು ಅದೇ ವಸ್ತುವಲ್ಲ. ಆಚಾರ್ಯರೇ ಹೇಳಿದಂತೆ "Form is not the meaning of an object but the essence is its meaning......"

ಈ ಮಾತು ನಮ್ಮ ಜೀವನದೊಳಕ್ಕೆ ಮೊದಲು ನುಸುಳುವುದು ಸುಖವಾದ ನಿದ್ದೆಗೆ ನಮ್ಮನ್ನು ಕೊಂಡೊಯ್ಯುವ ಅಮ್ಮನ ಲಾಲಿ ಹಾಡಿನ ಮೂಲಕ. ಅದು ಅನಂತರ ಗದ್ದರಿಸುವ ಎಚ್ಚರವಾಗಿ ಬೆಳೆಯುತ್ತದೆ. ನಮ್ಮ ತೊಟ್ಟಿಲಿಗೆ ಕಟ್ಟಿದ ಗಿಲಗಿಚ್ಚಿಗಳು, ನಮ್ಮ ಆಟದ ಸಾಮಾನುಗಳು ನಮಗೆ ಮಾತನ್ನು ಕಲಿಸಲು ಪ್ರಾರಂಭಿಸುತ್ತವೆ. ಆದರೆ ಇವು ಈ ಲೌಕಿಕದ ಮನುಷ್ಯ ಕಟ್ಟಿಕೊಂಡ ಮಾತುಗಳಲ್ಲ, ಬದಲಾಗಿ, ನಮ್ಮದೇ ಮಾತುಗಳು, ನಮ್ಮ ಒಳ ಲೋಕದಿಂದ ನೇರವಾಗಿ ಬಂದಂತಹ ಮಾತುಗಳು. ವ್ಯಾಕರಣದ ಹಂಗನ್ನು ತೊರೆದ, ಭಾಷಾ ವಿಜ್ಞಾನದ ಮುಲಾಜನ್ನು ಇರಿಸಿಕೊಳ್ಳದ ನಮ್ಮದೇ ಮಾತುಗಳು. ಅಚ್ಚರಿಯೆಂದರೆ ಈ ಮಾತುಗಳಲ್ಲಿ ಪ್ರಥಮ ಪುರುಷನೇ ಗೈರು ಹಾಜರಿ! ಅಲ್ಲಿ ನಾನು, ನನ್ನದು ಇರುವುದೇ ಇಲ್ಲ. ಎಲ್ಲವೂ ದ್ವಿತೀಯ ಪುರುಷಾಭಿವ್ಯಕ್ತಿಗಳು. ಅಲ್ಲಿ ನನ್ನ ಹೆಸರು ಮತ್ತು ನಾನು ಬೇರೆಯೇ ಆಗಿರುತ್ತವೆ. ಇಂತಹ ನಂದನಲೋಕದೊಳಕ್ಕೆ ದಂಡು ಹಿಡಿದು ಪ್ರವೇಶಿಸಿಬಿಡುತ್ತದೆ ವ್ಯಾಕರಣ, ಮಾತು, ಶಿಷ್ಟಾಚಾರ, ಅಪ್ಪ ಅಮ್ಮನ ರೂಪದಲ್ಲಿ. ನಮ್ಮ ಒಳಲೋಕದ ಮೌನ, ಮುಗ್ಧತೆ, ವಿಸ್ಮಯ ಅವುಗಳನ್ನು ವಿರೋಧಿಸುತ್ತಲೇ ದಂಡದ ನಿಯಂತ್ರಣಕ್ಕೆ ಒಳಗಾಗುತ್ತಾ ಮುಗ್ಧತೆಯನ್ನು ಇಷ್ಟಿಷ್ಟೇ ಬಿಟ್ಟುಕೊಡುತ್ತಾ ಭ್ರಷ್ಟವಾಗುತ್ತಾ ಹೋಗುತ್ತವೆ. ಬ್ಲೇಕ್ ಕವಿ ತನ್ನ "Songs Of Experience and Songs of Innocence"ನಲ್ಲಿ ಹೇಳುವುದೂ ಇದನ್ನೇ. ಆದರೆ ಮುಗ್ಧತೆಯ ಜೊತೆಗೆ ಅಜ್ಞಾತವೂ ಇರುತ್ತದಲ್ಲ, ಹಾಗಾಗಿ ಅದನ್ನು ಕಳೆದುಕೊಳ್ಳಬೇಕೆಂದರೆ ನಮಗೆ ಮಾತು ಅನಿವಾರ್ಯ, ವ್ಯಾಕರಣ ಬೇಕೇ ಬೇಕು, ಕೇವಲ ಅದನ್ನು ಮುರಿಯಲಿಕ್ಕಾಗಿ, ಮರೆಯಲಿಕ್ಕಾಗಿ, ಮರೆತು ನಮ್ಮೊಳಗಿನ ಮಾತುಗಳನ್ನು ಜ್ಯೋತಿಯಾಗಿಸಲಿಕ್ಕಾಗಿ.

ಹೀಗೆ ಮಾತನಾಡುತ್ತ, ಮಾತನಾಡುತ್ತ ದೊಡ್ಡವರಾಗಿ ಕಾಲೇಜು ಮೆಟ್ಟಿಲು ಹತ್ತಿ ಕಣ್ಣಂಚಿನಲ್ಲಿಯೇ ಎಲ್ಲ ಆಸೆಗಳನ್ನು ಹೀರಿ ಗೃಹಸ್ಥಾಶ್ರಮಕ್ಕೆ ಬಂದುಬಿಡುತ್ತೇವೆ. ಆಗಲೂ ಪರಸ್ಪರ ಮಾತನಾಡುತ್ತಲೇ ಇರುತ್ತೇವೆ. ಆ ಮಾತುಗಳಿಗೆ ನಾವು ನಮ್ಮ ಕಿವಿ ಮೂಗು ಕಣ್ಣುಗಳನ್ನು ಮಾತ್ರ ತೆರೆದಿಟ್ಟುಕೊಂಡಿರುತ್ತೇವೆ. ಆದರೆ ಹೀಗೆ ಕೇಳಿಸಿಕೊಳ್ಳುವುದು, ಕಾಣುವುದು ನಮ್ಮ ಇಂದ್ರಿಯಗಳಲ್ಲ ಎನ್ನುವುದು ನಮಗೆ ಗೊತ್ತಿದೆ. ಮಾತುಗಳನ್ನು ನಮ್ಮ ಕಿವಿಗಳು ಕೇಳುತ್ತಿರುತ್ತವೆ, ಆದರೆ ನಾವು ಕೇಳುತ್ತಿರುವುದಿಲ್ಲ, ಯಾಕೆಂದರೆ ಈ ನಮ್ಮೊಳಗೆ ಈಗಾಗಲೇ 'ನನ್ನದೆನ್ನುವುದು' ಹೊಕ್ಕಿಬಿಟ್ಟಿರುತ್ತದೆ. ಆದುದರಿಂದಲೇ ನಮಗೆ ಇನ್ನೊಬ್ಬರ ಮಾತುಗಳು ಕೇಳುವುದೇ ಇಲ್ಲ. ಎಲ್ಲಿಯತನಕ ಇನ್ನೊಬ್ಬರ ಮಾತು ಕೇಳುವುದಿಲ್ಲವೋ ಅಲ್ಲಿಯತನಕ ನಾವು ಹಾಡಿದ್ದನ್ನೇ ಹಾಡುತ್ತಿರುತ್ತೇವೆ, ಕಿಸಬಾಯಿದಾಸರಂತೆ. ಮತ್ತೆ ಮತ್ತೆ ಹಾಡುತ್ತೇವೆ ಅಕ್ಕನನ್ನು, ಪ್ರಭುವನ್ನು, ಪಂಪ, ರನ್ನ, ಬಸವಣ್ಣ, ಶೇಕ್ಸ್‌ಪಿಯರ್, ಹೋಮರ್, ಡಾಂಟೆ, ಯಾಕೆ ಹೀಗೆ!

ಮಾತಿನ ಆತ್ಯಂತಿಕ ನೆಲೆ ಮೌನವೆನ್ನುವುದಾದರೆ ಮೌನದ ಅಂತಿಮ ಸತ್ಯ ಕೂಡ ಮಾತೇ ಅಲ್ಲವೇ? ಈ ಮೌನವೆಂಬುದು ಯಾವುದೋ ಅಮೂರ್ತ ಯೋಗದಿಂದ ಹುಟ್ಟಿದುದಲ್ಲ. ಅದು ಮಾತಿನ, ಭಾಷೆಯ ಯೋಗದಿಂದಲೇ ಹುಟ್ಟಿದುದು. ಸಂಗೀತಕ್ಕೆ ಭಾಷೆ ಇಲ್ಲದಿರಬಹುದು ಆದರೆ, ಸಂಗೀತ ಚಲಿಸುವುದು, ತಲುಪುವುದು ಸಾಹಿತ್ಯದ ಮೂಲಕ. ಸಂಗೀತಕ್ಕೆ ಭಾವ ಸಮೃದ್ಧಿಯನ್ನು ಒದಗಿಸುವುದು ಸಾಹಿತ್ಯ. ಆದುದರಿಂದಲೇ ಈ ಸಂಗೀತವಾಗಲೀ, ಬೆಳಕಿನಂತಹ ಸಾಹಿತ್ಯದ ಸಾಲುಗಳಾಗಲೀ ನಮ್ಮೊಳಗೆ ಹೊಕ್ಕಕ್ಷಣ ನಾವು ಮಾತುಗಳನ್ನು ಕಳೆದುಕೊಂಡುಬಿಡುತ್ತೇವೆ. "I have no words" ಎಂದೋ, ''ಮಾತಿಗೆ ಮೀರಿದ್ದು'' ಎಂದೋ, ''ಮೂಕ ವಿಸ್ಮಿತರೆಂದೋ'', ಹೀಗೆ ಹೇಳಲಾಗದ ಆದರೆ 'ಹೇಳದಿದ್ದರೆ ತಾಳಲಾಗದ' ಒತ್ತಡ ಒಳಸೆಳೆತಗಳ ನಡುವೆ ಸಿಕ್ಕು ಏನೇನೋ ಬಡಬಡಿಸಿ ಕೊನೆಗೆ ಹೇಳಬೇಕಾದುದನ್ನು ಹೇಳದೆಯೇ ಹೋಗಿಬಿಡುತ್ತೇವೆ. ಅಂದರೆ ನಾವು ಮಾತಿನಿಂದ ಮೌನಕ್ಕೆ ಚಲಿಸುತ್ತೇವೆ. ಆ ಮೌನದಿಂದ ಮತ್ತೆ ಮಾತಿಗೆ ಬರುತ್ತೇವೆ, ಅಲ್ಲವೇ? ಅಂದು ಅಕ್ಕಮಹಾದೇವಿ ತನ್ನೊಳಗಿನ ಮೌನಕ್ಕೆ ಮಾತಿನ ಉಡುಗೆಯನ್ನು ತೊಡಿಸದಿದ್ದರೆ ಅವಳು ಇಂದು ನಮ್ಮೀವರೆಗೆ ಬರುತ್ತಿದ್ದಳೇ? ಅವಳೊಳಗೆ ಅಡಗಿದ ಮೌನವನ್ನು ನಾವು ಮಾತಿನ ಮೂಲಕವಾದರೂ ಸರಿಯೆ ಇಂದು ಸೆರೆಹಿಡಿಯುವ ಪ್ರಯತ್ನ ಮಾಡುತ್ತಿದ್ದೆವೆ? ಅಂದು ಬೇಂದ್ರೆ ತಾವು ಪಟ್ಟ ಪಾಡನ್ನೆಲ್ಲ ಹುಟ್ಟು ಹಾಡಾಗಿಸದಿದ್ದರೆ ಇಂದು ನಾವು ಆ ಗಾರುಡಿಗ ತನಕ್ಕೆ ಮರುಳಾಗುತ್ತಿದ್ದೆವೆ? ಆ ಕವಿತೆ ನಮ್ಮೊಳಗೆ ಅಡಗಿದ ಮೌನವನ್ನು ಎಚ್ಚರ ಗೊಳಿಸಲು ಸಾಧ್ಯವಿತ್ತೆ? ''ಬ್ರಹ್ಮನನರಿದರೆ ಕೆಮ್ಮನಿರಬೇಕು'' ಎಂದ ಆ ಮುಕ್ತಾಯಕ್ಕ ನಾದರೂ ಸುಮ್ಮನಿದ್ದಳೆ? ಜಗತ್ತಿನ ಕಲೆ, ಸಾಹಿತ್ಯ, ವಿಜ್ಞಾನ ಈ ಎಲ್ಲ ಶಿಸುಗಳೂ ಮಾಡುವುದು ಇದನ್ನೇ. ಮೂಲಭೂತ ನೆಲೆಯಲ್ಲಿ ಅವು ಬೇರೆ ಬೇರೆಯಾಗಿಯೇ ಕಂಡರೂ, ಅವುಗಳ ಆತ್ಯಂತಿಕ ಹಂತದಲ್ಲಿ ಹೊರಡಿಸುವ ಸತ್ಯ ಇದೊಂದೇ!

ಈ ಮಾತೆಂಬುದಾದರೂ ಏನು? ನಮ್ಮೊಳಗಿನ ಸತ್ಯವನ್ನು ಮುಚ್ಚಿಡುವ ಸುಳ್ಳೂ ಹೌದು, ಅದೇ ಸುಳ್ಳನ್ನು ಬಿಚ್ಚಿಡುವ ಸತ್ಯವೂ ಹೌದು. ಹಾದಿ ಬೀದಿ ರಂಪ ಮಾಡಿ ನಮ್ಮನ್ನು ರೋದನದ ಮೂಲೆಗೆ ತಳ್ಳಿಬಿಡುವ ಕತ್ತಲೆಯೂ ಹೌದು, ಅದು ನಮ್ಮ ಎದೆ ಗೂಡೊಳಗೆ ಹಣತೆ ಹಚ್ಚುವ ಬೆಳಕೂ ಹೌದು. ನಮ್ಮನ್ನು ಗಾಢವಾಗಿ ತಬ್ಬಿಕೊಳ್ಳುವ ಬಂಧನವೂ ಹೌದು. ಹೀಗೆ ತಬ್ಬಿಕೊಂಡಿದ್ದು ಸಾಕೆನಿಸಿದಾಗ ನಿರುಂಬಳ ಬಯಲಿಗೆ ಒಡ್ಡುವ ಬಿಡುಗಡೆಯೂ ಹೌದು. ಶಬ್ದಗಳು ಸತ್ತಾಗ ಜೀವ ತುಂಬುವ ಮೌನವೂ ಹೌದು, ಮೌನ ಬೇಸತ್ತಾಗ ಹಾಡಾಗಿ ಕುಣಿಸುವ ಕೊಳಲೂ ಹೌದು. ಅದು ಎಂಥ ನವನೀತ! ''ಮಾತು ಮಾತು ಮಥಿಸಿ ಬಂದ ನಾದದ ನವನೀತ.'' ಅದು ವಿಷ ಉಣಿಸುವ ರಕ್ಕಸಿ, ''ಅಮೃತಬಳ್ಳಿಯ ಕಷಾಯವನ್ನು ಹಂಚುವ ತಾಯಿ.'' ಅದು ಹೊದಿಕೆ, ಹೂರಣ. ಅದು ಸಾವು ಅದು ಬದುಕು.

ಹೀಗೆ ಪಟ್ಟಿ ಮಾಡುತ್ತಾ ಜಗತ್ತಿನ ಎಲ್ಲ ವಿವರಗಳ ಮೇಲೆ ಅಮರಿಕೊಳ್ಳಬಹುದು. ಈ ಮಾತು ಮತ್ತು ಮೌನಗಳು ಪರಸ್ಪರ ವಿರೋಧಿ ತತ್ವಗಳಲ್ಲ, ಅವು ಪರಸ್ಪರ ಪೂರಕವಾದವುಗಳು. ''ಶಬ್ದಾರ್ಥಗಳು ಮೌನವಾದಾಗ ಎದೆಯ ತಂತಿಯನ್ನು ಮೀಟಿದಾಗ ಧ್ವನಿ ಹುಟ್ಟುತ್ತದೆ. ಕಾವ್ಯ ರೂಪುಗೊಳ್ಳುತ್ತದೆ.'' ಮಾತು ಅನಿವಾರ್ಯ ಮೌನದಷ್ಟೇ! ಮಾತು ಅತಿಯಾದಾಗ ಮೌನಕ್ಕೆ, ಮೌನ ಅತಿಯಾದಾಗ ಮಾತಿಗೆ ನಾವು ನಮ್ಮ ಹೃದಯ ಸಂವಾದವನ್ನು ಅವಸ್ಥಾಂತರಿಸಿಕೊಳ್ಳದಿದ್ದರೆ, ಆ ಮೌನಕ್ಕಾಗಲೀ, ಈ ಮಾತಿಗಾಗಲೀ ಯಾವುದೇ ಅರ್ಥವಿರದು.

''ಏನು ಬಂದಿರಿ ಹದುಳವಿದ್ದಿರೆ ಎಂದರೆ ನಿಮ್ಮ ಮೈಸಿರಿ ಹಾರಿಹೋಹುದೇ?'', ''ಆನು ಒಲಿದಂತೆ ಹಾಡುವೆನಯ್ಯ'', ''ನೀ ಕೇಳಿದರೆ ಕೇಳು ಕೇಳದಿದ್ದರೆ ಮಾಣು ನಾ ಹಾಡಿದಲ್ಲದೆ ಸೈರಿಸಲಾಪೆನಯ್ಯ'', ''ಯಾರು ಕಿವಿ ಮುಚ್ಚಿದರೂ ಎನಗಿಲ್ಲ ಚಿಂತೆ'',...... ನಮ್ಮ ಅಹಂಕಾರವನ್ನು ಹೀಗೆ ಕಳೆದುಕೊಳ್ಳಲಿಕ್ಕೆ ಅದರ ಮೂಲಕ ಇನ್ನೊಬ್ಬರ ಅಹಂಕಾರವನ್ನೂ ಕಳೆಯಲಿಕ್ಕೆ ಮಾತಿನಿಂದಲ್ಲದೆ ಇನ್ನಾತರಿಂದ ಸಾಧ್ಯ? ''ಮಾತಿನಿಂ ಸರ್ವ ಸಂಪದವು ಮಾತೇ ಮಾಣಿಕ್ಯ ಸರ್ವಜ್ಞ.''

ಅನೇಕ ವೈವಿಧ್ಯಮಯ ವಿರೋಧಾಭಾಸಗಳ ಶ್ರೇಣಿಗಳಲ್ಲಿ ಹಂಚಿಹೋಗಿರುವ ನಮ್ಮ ಸಾಮಾಜಿಕ ಬದುಕು ಭ್ರಷ್ಟವಾಗದ ಹಾಗೆ, ನಮ್ಮ ''ಬಾಳು ಬೇಳೆಯಾ''ಗದ ಹಾಗೆ, ಬದುಕು ರಂಪವಾಗದ ಹಾಗೆ ಈ ನಮ್ಮ ಮಾತುಗಳನ್ನು ನಾವು ಎಚ್ಚರದಿಂದ ಕಾಯಬೇಕಾಗಿದೆ. ಈ ಮಾತು ಜ್ಯೋತಿರ್ಲಿಂಗವಾಗುವಂತೆ ನೋಡಿಕೊಳ್ಳಬೇಕಾಗಿದೆ. ಆದುದರಿಂದಲೇ ತಮ್ಮೊಳಗಿಲ್ಲದ ಯಾವುದೇ ಮಾತನ್ನು ಆಡರು ನಮ್ಮ ಶರಣರು. ಅವರು ''ನುಡಿದು ಸೂತಕಿಗಳಾಗಲಾರರು.'' ಈ ಮಾತು ಹಣತೆ ಹಚ್ಚುವ ಬೆಳಕು ಅಂದೆ, ಅದು ಬೆಳಕಾಗದಿದ್ದರೆ ವಿನಾಶದ ಬೆಂಕಿಯಾಗಿಬಿಡುವ ಅಪಾಯವಿದೆ.

ಇಂತಹ ಸತ್ಯದ ಸಾಕ್ಷಾತ್ಕಾರವನ್ನು ಯಾವುದೇ ಬೋಧಿ ವೃಕ್ಷದ ಅಡಿ ಕುಳಿತು ತಪಸ್ಸು ಮಾಡಿಯೇ ಸಾಧಿಸಿಕೊಳ್ಳಬೇಕೆಂಬುದೇನೂ ಇಲ್ಲ. ನಮ್ಮ ಮುಂಬಯಿ ನಗರದ ಯಾವ ಗಲ್ಲಿಗಳೂ ಕೂಡ ಇಂತಹ ಅನುಭವವನ್ನು ಕೊಡಬಹುದು, ದರ್ಶನವನ್ನು ಒದಗಿಸಬಹುದು. ಅವುಗಳ ತೀವ್ರ ಅನುಭವಕ್ಕೆ ಒಡ್ಡಿಕೊಂಡ ಹಾಗೂ ಅವುಗಳೊಳಗೆ ಅಡಗಿರುವ ಮನುಷ್ಯನನ್ನು ಶೋಧಿಸಲು ತಹತಹಿಸುವ ಎಲ್ಲರೂ ಒಂದು ರೀತಿಯಲ್ಲಿ ಅನುಭಾವಿಗಳೇ.

ನನ್ನೊಳಗಿನ ಈ ಮಾತುಗಳನ್ನು ಪ್ರಾಮಾಣಿಕವಾಗಿ ನುಡಿಸಲು ಕಾರಣರಾದ ಹಾ. ಮಾ. ಕನಕಳಿಗೆ ಹಾಗೂ ಆಚಾರ್ಯರಿಗೆ ಈ ಲೇಖನ ಬರೆಯುವುದರ ಮೂಲಕ ನಾನು ಅತ್ಯಂತ ಆಭಾರಿಯಾಗಿದ್ದೇನೆ.

**ಗಿರಿಜಾ ಶಾಸ್ತ್ರಿ**

೨೦೩, ಡಿ-೬, ಹಿಮಗಿರಿ ಸಿ.ಎಚ್.ಎಸ್. ಲೋಕಧಾರ,

'ಕಲ್ಯಾಣ್' (ಪೂರ್ವ) ಥಾಣೆ ಜಿಲ್ಲೆ, ಮಹಾರಾಷ್ಟ್ರ - ೪೨೧ ೩೦೬




ಟಿ. ಎಸ್. ಗೊರವರ

ಹನ್ನೆರಡನೆಯ ಶತಮಾನದ ಶರಣರ ಸಾಮಾಜಿಕ ಧೋರಣೆಗಳು ಕ್ರಾಂತಿಕಾರಕವಾಗಿದ್ದವು. ಶರಣರ ಚಳುವಳಿ ಸಾಮಾಜಿಕ ಸ್ಥಾನಮಾನ ಮತ್ತು ಆರ್ಥಿಕ ನೆಲೆಗಳನ್ನು ಪರಿಗಣಿಸದೆ ಎಲ್ಲರನ್ನೂ ಸಮುದಾಯದೊಳಗೆ ಸ್ವಾಗತಿಸಿತು. ಹೀಗೆ ವಿವಿಧ ಮುಖಗಳಲ್ಲಿ ಬಿಚ್ಚಿಕೊಂಡ ಚಳುವಳಿಯು ನವೀನ ಜೀವನ ಪದ್ಧತಿಯನ್ನು ತನ್ನ ಗುರಿಯನ್ನಾಗಿ ಮಾಡಿಕೊಂಡಿತ್ತು. ಸಂಪ್ರದಾಯವಾದಿ ಮಡಿ-ಮೈಲಿಗೆ ನಿಯಮಗಳನ್ನು ವಚನಕಾರರು ಖಂಡಿಸಿದರು. ಏಕೆಂದರೆ ಒಬ್ಬನೇ ದೇವರ ಭಕ್ತರನ್ನೂ ಮಾನವ ನಿರ್ಮಿತ ಕಟ್ಟುಪಾಡುಗಳಿಂದ ವಿಭಜಿಸುವದು ಸಾಧುವಲ್ಲ ಎಂದು ಶರಣರು ನಂಬಿದ್ದರು.

ಜನರ ಮುಗ್ಧತೆ ಹಾಗೂ ಮೌಢ್ಯತೆಗಳು ಎಷ್ಟೆಂದರೆ ತಮ್ಮ ಎಷ್ಟೋ ನಡತೆಗಳು ತಮ್ಮ ಮನೋಭಾವಕ್ಕೆ ವಿರುದ್ಧವಾಗಿರುವವೆಂಬುದನ್ನೇ ಅವರು ಗುರುತಿಸಲಾರರು. ಇಂತಹ ಸಂದರ್ಭಗಳಲ್ಲಿ ವಚನಕಾರರು ತಮ್ಮ ವ್ಯಂಗ್ಯದ ಮಾತಿನಿಂದ ಚುಚ್ಚುತ್ತಾರೆ. ಸಮಾಜವನ್ನು ಕೃತಕವಾಗಿ ಜಾತಿಯೆಂಬ ಹೆಸರಿನಿಂದ ವಿಂಗಡಿಸಿದುದರ ವಿರುದ್ಧ ವಚನಕಾರರು ಎಂಥ ತೀವ್ರ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರೆನ್ನುವದು ವಿದಿತವಾದ ವಿಷಯವೇ. ಶಾಸ್ತ್ರಗಳನ್ನು ಓದಿ, ಒಂದೆಡೆ ಅವುಗಳನ್ನು ಬೋಧಿಸುತ್ತ ಮತ್ತೊಂದೆಡೆ ಅದಕ್ಕೆ ವಿರುದ್ಧವಾಗಿ ನಡೆಯುವವರು, ಶಾಸ್ತ್ರಗಳಲ್ಲಿ ಹೇಳಿರುವ ಮಾತುಗಳಿಗೆ ಅರ್ಥವನ್ನೇ ತಿಳಿಯದೆ ಭಾಷಣ ಬಿಗಿಯುವವರು, ವಚನಕಾರರ ಅನೇಕ ವಚನಗಳಿಗೆ ವಸ್ತುವಾಗಿದ್ದಾರೆ.

ತಮ್ಮ ಮಾತುಗಳಿಂದ ದೇವರು-ದಿಂಡರುಗಳೆಂದು ಕೇವಲ ಮರ-ಗಿಡಗಳಂತಹ ವಸ್ತುವನ್ನು ಸಾಂಪ್ರದಾಯಿಕವಾಗಿ, ಯಾಂತ್ರಿಕವಾಗಿ ಪೂಜಿಸುವವರ ವಿರುದ್ಧ ವಚನಕಾರರು ಕತ್ತಿ ಮಸೆದರು; ಹೊಸದಾದ ತಮ್ಮ ಮತಕ್ಕೆ ಸೇರಿದ ಕೆಲವರು ಹಿಂದಿನ ಅನುಷ್ಠಾನಗಳನ್ನು ಬಿಡಲಾರದುದಕ್ಕೆ ಹೊಸದನ್ನು ನಂಬಲಾರದುದಕ್ಕೆ ಕ್ರೋಧಗೊಳ್ಳುವ ವಚನಕಾರರು ತಮ್ಮ ಪರಿತಾಪವನ್ನು ವ್ಯಕ್ತಪಡಿಸುತ್ತಾರೆ.

ಶರಣ ಚಳುವಳಿಯ ಸಾಮಾಜಿಕ ಸ್ವರೂಪದ ಮೂರು ಮುಖ್ಯ ಅಂಶಗಳ ಪರಾಮರ್ಶೆ ನನ್ನ ಪ್ರಬಂಧದ ವಸ್ತುವಾಗಿದೆ. ಅವುಗಳು ಯಾವುವೆಂದರೆ :

೧. ಜಾತಿವ್ಯವಸ್ಥೆಯ ಬಗ್ಗೆ ಶರಣರ ನಿಲುವು

೨. ಮಹಿಳೆಯ ಸ್ಥಾನ-ಮಾನ

೩. ಅಂಧಶ್ರದ್ಧೆಗಳು

ಈ ಮೂರು ಅಂಶಗಳ ಪರಿಶೀಲನೆಯು ಶರಣರ ವಚನಗಳಲ್ಲಿ ಸಾಮಾಜಿಕ ಸ್ವರೂಪವನ್ನು ಮತ್ತು ಘನತರವಾದ ಅನುಭಾವ ಹಾಗೂ ಜಾಗೃತಿಗಳನ್ನು ಅದು ಹೇಗೆ ಪರಸ್ಪರ ಸಂಯೋಜಿಸಿತ್ತು ಎಂಬುದನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತದೆ.

**೧. ಜಾತಿ ವ್ಯವಸ್ಥೆಯ ಬಗ್ಗೆ ಶರಣರ ನಿಲುವು**

ಮಾನವನ ಘನತೆಯನ್ನು ಹೊಸ ರೀತಿಯಲ್ಲಿ ಅರ್ಥಮಾಡಿಕೊಳ್ಳುವಲ್ಲಿ ಬಸವಣ್ಣ ಮತ್ತು ಆತನ ಸಮಕಾಲೀನ ವಚನಕಾರರು ನೀಡಿದ ಕಾಣಿಕೆ ಅಪಾರವಾದುದು. ಮಾನವರೆಲ್ಲರೂ ಸಮಾನರು ಎಂಬ ಆತನ ವಿಚಾರವು ಮಹತ್ವದ ಪರಿಣಾಮ ಬೀರಿತು. ತಾರತಮ್ಯವಿಲ್ಲದ ಸಮಾಜವೊಂದನ್ನು ಕಲ್ಪಿಸಿಕೊಂಡು ಅದನ್ನು ವಾಸ್ತವವಾಗಿಸಲು ತಮಗಾದಷ್ಟು ಪ್ರಯತ್ನಪಟ್ಟರು. ತನ್ನ ಪದವಿ ಹಾಗೂ ಜಾತಿಗೆ ಸಂಬಂಧಿಸಿದ ಪ್ರತಿಷ್ಠೆಗಳನ್ನು ಬಿಟ್ಟುಕೊಟ್ಟು ಬಸವಣ್ಣ ತಾನೇ ಒಂದು ನಿದರ್ಶನವಾಗಿ ನಿಂತನು. ಸಮಾಜದ ಕೆಳ ಜಾತಿಗೆ ಸೇರಿದ ಶಿವಶರಣರ ಸಂಬಂಧಿಕ ಎಂದು ತನ್ನನ್ನು ತಾನು ವಚನಗಳಲ್ಲಿ ಘೋಷಿಸಿಕೊಂಡ.

ತನಗೆ ಶಿವ ಕೃಪೆ ದೊರೆತಿರುವುದಕ್ಕೆ ಕೆಳಜಾತಿ ಶರಣರಿಗೆ ಋಣಿಯಾಗಿದ್ದೇನೆ ವಿನಾ ಬ್ರಾಹ್ಮಣರ ಕುಟುಂಬಕ್ಕಲ್ಲ ಎಂದು ಬಸವಣ್ಣ ಹಲವಾರು ವಚನಗಳಲ್ಲಿ ಒತ್ತಿ ಹೇಳಿದ್ದಾರೆ. ಅಸ್ಪೃಶ್ಯ ಭಕ್ತರ ಜೊತೆ ತಾನು ಇಟ್ಟುಕೊಂಡ ಸಂಬಂಧದಿಂದಾಗಿಯೇ ತನಗೆ ದೈವ ಕೃಪೆಯಾಗಿದೆ ಎಂದು ಬಸವಣ್ಣ ವಾದಿಸುತ್ತಾನೆ :

ಅಪ್ಪನು ನಮ್ಮ ಮಾದರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯ ನಮ್ಮಯ್ಯ ಕಾಣಯ್ಯ
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ
ಎನ್ನನೇತಕ್ಕರಿಯರಿ ಕೂಡಲ ಸಂಗಯ್ಯ.

ಜಾತಿ ಪೂರ್ವಗ್ರಹಗಳನ್ನು ಹೊಡೆದೋಡಿಸಲು ಬಸವಣ್ಣ ಈ ತೋರಿಕೆಯ ಕೌಟುಂಬಿಕ ಸಂಬಂಧಗಳನ್ನು ಸಾಧನಗಳನ್ನಾಗಿ ಬಳಸಿದ್ದಾನೆ.

ಸಮಾಜದ ನಾನಾ ಅವಶ್ಯಕತೆಗಳನ್ನು ಪೂರೈಸಲು ಹಲವಾರು ವೃತ್ತಿಗಳನ್ನು ಜನರು ಅವಲಂಬಿಸಬೇಕಾಯಿತು; ಈ ವೃತ್ತಿ ಭೇದವು ಸಾಮಾಜಿಕ ತಾರತಮ್ಯಗಳಿಗೆ ಕಾರಣವಾಗಬೇಕಾದುದಿಲ್ಲ. 'ಕೊಲುವವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ !' ಎಂದು ವ್ಯಕ್ತಿಯ ಗುಣಕೃತ್ಯಗಳಿಗೆ ಪ್ರಾಮುಖ್ಯ ನೀಡಬೇಕೆಂದು ಶರಣರು ಘೋಷಿಸಿದರು. 'ನೀಚ ಶ್ರೇಷ್ಠವೆಂಬೆರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ' ಎಂದು ತಮ್ಮ ಅಭಿಪ್ರಾಯವನ್ನು ಮಂಡಿಸಿದರು. ಈ ರೀತಿ ಉಪದೇಶ ಮಾಡಿ ತಮ್ಮ ಪಾಡಿಗೆ ತಾವಿದ್ದುಬಿಟ್ಟಿದ್ದರೆ ಈ ಚಳುವಳಿಯು ಪರಿಣಾಮಕಾರಿಯಾಗುತ್ತಿರಲಿಲ್ಲ. ತಾವು ಹೇಳಿದುದನ್ನು ಮಾಡಿ ತೋರಿಸಿದರು.

ಸಮಾಜವನ್ನು ಕೃತಕವಾಗಿ ಜಾತಿಯೆಂಬ ಹೆಸರಿನಿಂದ ವಿಂಗಡಿಸಿದುದರ ವಿರುದ್ಧ ವಚನಕಾರರು ಎಂಥ ತೀವ್ರ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರೆನ್ನುವದು ವಿದಿತವಾದ ವಿಷಯವೇ. ಶಾಸ್ತ್ರಗಳನ್ನು ಓದಿ, ಒಂದೆಡೆ ಅವುಗಳನ್ನು ಬೋಧಿಸುತ್ತ ಮತ್ತೊಂದೆಡೆ ಅದಕ್ಕೆ ವಿರುದ್ಧವಾಗಿ ನಡೆಯುವವರು, ಶಾಸ್ತ್ರಗಳಲ್ಲಿ ಹೇಳಿರುವ ಮಾತುಗಳಿಗೆ ಅರ್ಥವನ್ನೇ ತಿಳಿಯದೆ ಭಾಷಣ ಬಿಗಿಯುವವರು ವಚನಕಾರರ ಅನೇಕ ವಚನಗಳಿಗೆ ವಸ್ತುವಾಗಿದ್ದಾರೆ.

ಕಲ್ಯಾಣದ ಶರಣ ಸಮೂಹದಲ್ಲಿ ಮಹತ್ವದ ಒಬ್ಬ ಭಕ್ತನೆಂದರೆ ಅಂಬಿಗರ ಚೌಡಯ್ಯ. ಅವನ ವಚನಗಳಲ್ಲಿ ನೆಮ್ಮದಿಯ ಬದುಕನ್ನು ಸಾಗಿಸುವ ಜನರ ಬಗ್ಗೆ ಟೀಕೆ ವ್ಯಕ್ತವಾಗಿದೆ. ಮೇಲು ಜಾತಿಯ ಜನರ ಆಡಂಬರಗಳು ಇವನಿಗೆ ಹಾಸ್ಯಾಸ್ಪದವಾಗಿ ಕಾಣುತ್ತವೆ. ಅಸ್ಪೃಶ್ಯರಿಗೂ ದೇವರ ಆಶೀರ್ವಾದ ಸಾಧ್ಯ ಎಂಬುದರ ಬಗ್ಗೆ ಇವನಿಗೆ ಅಚಲ ವಿಶ್ವಾಸವಿದೆ. ಈತನ ಅಭಿವ್ಯಕ್ತಿ ಕ್ರಮವು ಉಗ್ರವಾದದ್ದು. ಈತನ ಸ್ವತಂತ್ರ ಮನೋಭಾವವನ್ನು ವಚನಕಾರರು ಅಪಾರವಾಗಿ ಹಾಡಿ ಹೊಗಳಿದ್ದಾರೆ.

ಸಮಾಜದ ಕೆಳವರ್ಗ ಚಮ್ಮಾರ ಜಾತಿಗೆ ಸೇರಿದ ಮತ್ತೊಬ್ಬ ಪ್ರಮುಖ ಶಿವಶರಣ ಹರಳಯ್ಯ. ಹರಳಯ್ಯ ಅತ್ಯಂತ ಕೆಳಜಾತಿಗೆ ಸೇರಿದ ಶಿವಶರಣ. ಏಕೆಂದರೆ ಚಪ್ಪಲಿ ಮಾಡುವವರು ಸಾಮಾನ್ಯವಾಗಿ ಅಸ್ಪೃಶ್ಯರಾಗಿರುತ್ತಾರೆ. ಇವರು ತಯಾರಿಸುವ ಚಪ್ಪಲಿಗೆ ಬಳಸುವ ಕಚ್ಚಾ ವಸ್ತು ಸತ್ತ ದನದ ಚರ್ಮ. ಅದು ಅತ್ಯಂತ ಅಪವಿತ್ರ ವಸ್ತು. ಇಂತಹ ಅಪವಿತ್ರ ವೃತ್ತಿಯನ್ನು ಕೈಗೊಂಡವರೂ ಸಹ ಭಕ್ತರಾಗಬಹುದು ಎನ್ನುವುದನ್ನು ಹರಳಯ್ಯನ ಕಥೆ ತಿಳಿಸುತ್ತದೆ.

ಎಲ್ಲಾ ಜಾತಿಯ ಜನರಿಗೂ ಕಲ್ಯಾಣದ ವೀರಶೈವ ಸಮಾಜದೊಳಗೆ ಪ್ರವೇಶವಿತ್ತು. ಇದರಿಂದಾಗಿ ಹೊಸ ಚಳುವಳಿಯಲ್ಲಿ ಹಲವು ಅಸ್ಪೃಶ್ಯರೂ ಸೇರಿಕೊಂಡಿದ್ದರು. ಜಾತಿರಹಿತ ಸಮಾಜದ ವಿಚಾರವನ್ನು ಪ್ರಚುರಪಡಿಸಲು ನಿಸ್ಸಂದೇಹವಾಗಿ ಬಸವಣ್ಣನದು ಪ್ರಮುಖ ಪಾತ್ರವಾಗಿದೆ. ತನ್ನ ಬ್ರಾಹ್ಮಣ ಮೂಲವನ್ನು ತಿರಸ್ಕರಿಸಿ, ಕೆಳಜಾತಿ ಶರಣರೊಂದಿಗಿನ ಸಂಬಂಧವನ್ನು ಹಾಡಿ ಹೊಗಳಿದ್ದಾನೆ. ಅಂತಹ ಒಂದು ಕ್ರಾಂತಿಕಾರಿ ವಚನ ಇಲ್ಲಿದೆ :

*ಚೆನ್ನಯ್ಯನ ಮನೆಯ ದಾಸನ ಮಗನು*
*ಕಕ್ಕಯ್ಯನ ಮನೆಯ ದಾಸಿಯ ಮಗಳು*
*ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು*
*ಇವರಿಬ್ಬರಿಗೆ ಹುಟ್ಟಿದ ಮಗ ನಾನು*
*ಕೂಡಲಸಂಗಮದೇವ ಸಾಕ್ಷಿಯಾಗಿ.*

ಇಲ್ಲಿ ಬ್ರಾಹ್ಮಣ ಮಂತ್ರಿ ತನ್ನ ಉತ್ತಮ ಜನನದ ಪ್ರತಿಷ್ಠೆಯನ್ನು ಸಂಪೂರ್ಣವಾಗಿ ತ್ಯಜಿಸಿಬಿಟ್ಟಿದ್ದಾನೆ. ಕೆಳವರ್ಗದ ಜನರ ಜೊತೆ ತನ್ನನ್ನು ತಾನು ನಿಲ್ಲಿಸಿಕೊಂಡಿದ್ದಾನೆ.

ಬಸವಣ್ಣನು ಜಾತಿ ಭೇದಗಳ ಬಗ್ಗೆ ತನ್ನ ಅಸಹ್ಯವನ್ನು ವ್ಯಕ್ತಪಡಿಸಿದ್ದಾನೆ. ತನ್ನ ಬ್ರಾಹ್ಮಣ್ಯದ ಮೂಲವನ್ನೇ ಲೇವಡಿಗೆ ಒಳಪಡಿಸಿದ್ದಾನೆ. ತಮ್ಮ ವಚನಗಳಿಂದ ಕೆಳಜಾತಿಯಿಂದ ಬಂದ ಶಿವಶರಣರು ಎಷ್ಟು ಪ್ರಭಾವಶಾಲಿಗಳಾಗಿದ್ದರು ಎಂಬುದು ಅಂಬಿಗರ ಚೌಡಯ್ಯ ಮತ್ತು ಪಾದರಕ್ಷೆ ಮಾಡುವ ಕಾಯಕ ಹೊಂದಿದ್ದ ಹರಳಯ್ಯನವರ ಉದಾಹರಣೆಗಳಿಂದ ತಿಳಿದುಬರುತ್ತದೆ. ಅಸ್ಪೃಶ್ಯರಾದಿಯಾಗಿ ಕೆಳಜಾತಿ ಶಿವಶರಣರು ಚಳುವಳಿಯಲ್ಲಿ ಪೂರ್ಣ ಭಾಗಿಗಳಾಗಿದ್ದು ಬಸವಣ್ಣ ಹಾಗೂ ಆತನ ಸಮಕಾಲೀನ ಶಿವಶರಣರ ಬೋಧನೆಯ ತೀವ್ರ ಪರಿಣಾಮಕ್ಕೆ ನಿದರ್ಶನವಾಗಿದೆ.



**ಮಡಿಕೇರಿಯಲ್ಲಿ ಪುಸ್ತಕ ಪ್ರದರ್ಶನ**

ಓದುಗರಿರುವಲ್ಲಿಗೆ ಪುಸ್ತಕ ಒಯ್ಯುವ ಕೈಂಕರ್ಯದಲ್ಲಿ ತೊಡಗಿಕೊಂಡಿರುವ ನವಕರ್ನಾಟಕ ಪ್ರಕಾಶನದ ಪುಸ್ತಕ ಪ್ರದರ್ಶನ ಏಪ್ರಿಲ್ ೨೮ರಂದು ಮಡಿಕೇರಿಯಲ್ಲಿ ಪ್ರಾರಂಭವಾಯಿತು. ಖ್ಯಾತ ನ್ಯಾಯವಾದಿ ಹಾಗೂ ಸಾಹಿತಿ ಶ್ರೀ ಬಾಲಸುಬ್ರಹ್ಮಣ್ಯ ಕಂಜರ್ಪಣೆ (ಎಡದಿಂದ ಎರಡನೆಯವರು) ಪ್ರದರ್ಶನ ಉದ್ಘಾಟಿಸಿದರು.

**೨. ಮಹಿಳೆಯ ಸ್ಥಾನಮಾನ ಕುರಿತು**

ಭಾರತದ ಸಾಮಾಜಿಕ ಇತಿಹಾಸದಲ್ಲಿ ಸ್ತ್ರೀಯರ ಮೇಲೆ ವಿಪರೀತ ನಿರ್ಬಂಧವನ್ನು ಹೇರಿ ಅವಳು ಸ್ವಾತಂತ್ರ್ಯಕ್ಕೆ ಸ್ವಲ್ಪವಾದರೂ ಅರ್ಹಳಲ್ಲ ಎಂದು ಸಾರಿದ ಕಾಲವೆಂದರೆ ಸ್ಮೃತಿಗಳ ಯುಗ. ಧರ್ಮಸೂತ್ರಗಳಲ್ಲಿ ಸ್ತ್ರೀಯರ ಬಗ್ಗೆ ತೋರಿಸುವ ಮನೋಭಾವವು ವಿಚಿತ್ರವಾದುದು. ಒಂದು ಕಡೆ ಅವಳನ್ನು ಪೂಜ್ಯ ವ್ಯಕ್ತಿಯೆಂದು ಪರಿಗಣಿಸಿದ್ದರೆ, ಮತ್ತೊಂದೆಡೆ ಮನೆಯಲ್ಲಿನ ಇತರ ಯಾವುದೇ ವೈಯಕ್ತಿಕ ಆಸ್ತಿಗಿಂತ ಹೆಚ್ಚಿನ ಸ್ಥಾನವನ್ನು ಆಕೆಯು ಪಡೆದಿರಲಿಲ್ಲ.

ಸಂಪ್ರದಾಯಬದ್ಧ ಸಮಾಜದ ವಿರುದ್ಧ ಬಂಡೆದ್ದ ವಚನಕಾರರು ಸ್ತ್ರೀಯರನ್ನು ಕ್ಷುಲ್ಲಕವೆಂದೂ ಮೋಕ್ಷಾರ್ಹಳಲ್ಲವೆಂದೂ ಸಮಾಜವು ಕಾಣುತ್ತಿದ್ದ ಬಗೆಯನ್ನು ವಿರೋಧಿಸಿದರು. ಹೆಣ್ಣು, ಗಂಡಿನಂತೆಯೇ ಮೋಕ್ಷವನ್ನು ಗಳಿಸಬಲ್ಲಳೆಂದು ಬೋಧಿಸಿದರು.

ಶರಣರ ಮನೋಭಾವದಿಂದಾಗಿ ವಚನಯುಗದಲ್ಲಿ ಹಿಂದೆಂದೂ ಇಲ್ಲದಷ್ಟು ಸಂಖ್ಯೆಯಲ್ಲಿ ಮಹಿಳೆಯರು ಸಾರ್ವಜನಿಕ ಜೀವನದಲ್ಲಿ ಕಾಣಿಸಿಕೊಂಡರು. ಯಾರ ಕೈಕೆಳಗೂ ತಾನಿರದೆ ಸ್ಥೈರ್ಯದಿಂದ ತಾನು ಸರಿಯೆಂದು ನಂಬಿರುವ ಜೀವನ ಮಾರ್ಗವನ್ನನುಸರಿಸಲು ಸಂಸಾರವನ್ನು ತ್ಯಜಿಸಿದ ಮಹಾದೇವಿಯಕ್ಕನ ನಿದರ್ಶನವು ವಚನಕಾರರ ಈ ಚಳುವಳಿಯಿಂದ ಆ ಕಾಲದ ಸ್ತ್ರೀಯರಲ್ಲಿ ಮೂಡಿದ ಭರವಸೆಯ ಸಂಕೇತವಾಗಿದೆ.

ಶರಣರ ಚಳುವಳಿಯ ಪ್ರಧಾನ ಭಾಗವೆಂದರೆ ಮಹಿಳೆ ಬಗ್ಗೆ ಅದು ತಳೆದ ನಿಲುವು ಎಂಬುದು ಸ್ಪಷ್ಟವಾಗಿ ಇದೆ. ಕಲ್ಯಾಣದಲ್ಲಿನ ಹೊಸ ಸನ್ನಿವೇಶದಲ್ಲಿ ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ಹೊಸ ದೃಷ್ಟಿಕೋನವೊಂದರ ಅಗತ್ಯವಿತ್ತು. ವಚನ ಸಾಹಿತ್ಯದಲ್ಲಿ ಈ ಬಗೆಯ ವಿಚಾರಗಳ ಬೆಳವಣಿಗೆಯನ್ನು ನಾವು ನೋಡಬಹುದಾಗಿದೆ. ಇದು ನಿಜವಾದ ಕ್ರಾಂತಿಯನ್ನು ಸೃಷ್ಟಿಸಿತು.

ಗೊಗ್ಗವ್ವೆ ಎಂಬ ವಚನಕಾರ್ತಿಯ ವಚನ ಹೀಗಿದೆ :

*ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಮೀಸೆ ಕಾಸೆ ಬಂದಡೆ ಗಂಡೆಂಬರು*
*ಈ ಉಭಯದ ಜ್ಞಾನ*
*ಗಂಡೊ ಹೆಣ್ಣೊ ನಾಸ್ತಿನಾಥ.*

ಅತ್ಯಂತ ನಾವೀನ್ಯತೆಯಿಂದ ಕೂಡಿರುವ ಗೊಗ್ಗವ್ವೆಯ ತೀರ್ಮಾನ ಲಿಂಗ ಭೇದದ ಜ್ಞಾನ ಗಂಡೋ-ಹೆಣ್ಣೊ ಎಂಬ ಪ್ರಶ್ನೆಯ ರೂಪದಲ್ಲಿ ಮಂಡಿತವಾಗಿದೆ. ಲಿಂಗ ಭೇದವನ್ನು ಮೀರಿದ್ದು ನಿಜವಾದ ಜ್ಞಾನ. ಲಿಂಗ ಭೇದವನ್ನು ನಂಬುವವರು ಕೇವಲ ಅಜ್ಞಾನಿಗಳು ಎಂಬುದು ಗೊಗ್ಗವ್ವೆಯ ನಿಲುವಾಗಿದೆ.

ಅಕ್ಕನಂತಹ ಉಗ್ರ ಉಪಾಸಕರು ತಮ್ಮ ಹೆಣ್ತನಕ್ಕೆ ತಿಲಾಂಜನಕೊಟ್ಟು ತಮ್ಮನ್ನು ತಾವು ಪುರುಷರಿಗೆ ಸರಿಸಮವೆಂದು ಘೋಷಿಸಿಕೊಂಡರು. ಪುರುಷಶಾಹಿಯನ್ನು ಇಲ್ಲಿ ಖಂಡಿಸಲಾಗಿದೆ. ದೇವರ ಮುಂದೆ ಎಲ್ಲರೂ ಅಡಿಯಾಳುಗಳೇ ಆಗಿರುವುದರಿಂದ ಎಲ್ಲರದೂ ಅಧೀನ ಹೆಣ್ಣು ಸ್ಥಿತಿಯೇ ಆಗಿದೆ. ಈ ಸಂಗತಿಯನ್ನು ಅಕ್ಕನು ತನ್ನ ಅನೇಕ ವಚನಗಳಲ್ಲಿ ವ್ಯಕ್ತಪಡಿಸಿದ್ದಾಳೆ.

*''.............................*
*ಗಂಡ ಗಂಡರೆಲ್ಲರ ಹೆಂಡಿರಾಗಿ ಆಳುವ*
*ಗರುವನ ಕಂಡೆ ನಾನು................*
*.....................................*
*ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗರುವಂಗೆ*
*ಜಗವೆಲ್ಲಾ ಹೆಣ್ಣು ನೋಡಾ ಅಯ್ಯ.''*

ವಚನಕಾರರಿಗೆ ಅನುಭವ ಕಲಿಸಿದ ಪಾಠವೆಂದರೆ ಸ್ತ್ರೀ-ಪುರುಷರ ನಡುವೆ ಭಿನ್ನತೆಯಿಲ್ಲ ಎಂಬುದು ತುಂಬಾ ಸ್ಪಷ್ಟವಾಗಿದೆ.

*ಸತಿಪತಿಯರಿಬ್ಬರು*
*ಪ್ರತಿದೃಷ್ಟಿಯಾಡಿ ಮಾಡಬಲ್ಲಡೆ*
*ಅದೆ ಮಾಟ*
*ಕೂಡಲಸಂಗಮದೇವರ ಕೂಡುವ ಕೂಟ*

೪೪ನೇ ಪುಟಕ್ಕೆ

ಯಾವುದೇ ಮನುಷ್ಯನ ಗುಣ, ನಡತೆ, ಯೋಗ್ಯತೆ ನಿರ್ಧಾರವಾಗುವುದು ಮುಖ್ಯವಾಗಿ ಅವನ ಪರಿಸರ, ಒಡನಾಟ, ಸಾಮರ್ಥ್ಯಗಳಿಂದಲೇ ವಿನಾ ಅವನು ಹುಟ್ಟಿದ ಜಾತಿ ಮಾತ್ರದಿಂದಲ್ಲ. ಪ್ರಾಚೀನ ಸಾಹಿತ್ಯದ ನೆಲೆಯಲ್ಲೂ ಈ ಮಾತು ವಡ್ಡಾರಾಧನೆಯ ಎರಡು ಗಿಳಿಗಳ ಕತೆಯಲ್ಲಿ ಅಂತರ್ಗತವಾಗಿದೆ. ಸನ್ನಡತೆ, ಛಲ, ಸ್ವಅಭಿಮಾನ, ಶೌರ್ಯಗಳೇ ಕ್ಷತ್ರಿಯ ಕುಲ ನಿರ್ಧಾರದ ಅಂಶಗಳು ಎಂಬಂತೆ ಪಂಪ ರನ್ನರಲ್ಲೂ ವ್ಯಕ್ತವಾಗಿವೆ. ಆದರೆ ವ್ಯಕ್ತಿ ಯಾವ ಜಾತಿಯಲ್ಲಿ ಹುಟ್ಟಿದ ಎಂಬುದು ಅವನ ಯೋಗ್ಯತೆ-ಸಾಮರ್ಥ್ಯಗಳನ್ನು ನಿರ್ಧರಿಸುತ್ತದೆ ಮತ್ತು ಅವನಿಗೆ ಅದೇ ಮೇಲು ಅಥವಾ ಕೀಳು ಅಂತಸ್ತನ್ನು ನೀಡುತ್ತದೆ ಎಂಬ ಭಾವನೆ ಗದುಗಿನ ಭಾರತದಲ್ಲಿ ಕರ್ಣನ ಕುರಿತಾಗಿ ಇರುವಂತೆ ಕಾಣುತ್ತದೆ. ಸಮಾಜದಲ್ಲಿ ನಿರ್ದಿಷ್ಟ ಸ್ಥಾನಮಾನಗಳನ್ನು ಪಡೆಯುವ ಅರ್ಹತೆ ಎಂಬಂತೆ, ವ್ಯಕ್ತಿಯ ಐಡೆಂಟಿಟಿಯ ಕುರುಹು ಎಂಬಂತೆ ಕರ್ಣನ ವಿಚಾರದಲ್ಲಿ ಆಗಾಗ ಜಾತಿಯ ಪ್ರಶ್ನೆ ಕುಮಾರವ್ಯಾಸನಲ್ಲಿ ಚರ್ಚೆಗೆ ಬಂದಿದೆ. ವ್ಯಕ್ತಿಯು ಒಡನಾಡುವ ಪರಿಸರದಲ್ಲಿ ಅವನ ಜಾತಿ ಬಹುಮಟ್ಟಿಗೆ ಇದ್ದೇ ಇರುತ್ತದೆ; ಅಂದರೆ ಜಾತಿಯು ಮನುಷ್ಯನನ್ನು ಪ್ರಭಾವಿಸುವ ಪರಿಸರವೇ ಎಂಬುದು ಇವನ ತಿಳುವಳಿಕೆಯಾಗಿದೆ. ಇವನಲ್ಲಿ ಕರ್ಣ ಸೂತಕುಲದಲ್ಲಿ ಹುಟ್ಟಿದವನು ಎಂಬುದು ಕೀಳ್ತನದ ಸಂಕೇತವಾಗಿರುವ ಹಾಗೆ ಕರ್ಣ ಕ್ಷತ್ರಿಯ ಪರಿಸರದ ಒಡನಾಟ ಪಡೆದವನು ಎಂಬುದು ಅವನ ಹೆಗ್ಗಳಿಕೆಯ ಅಥವಾ ಶ್ರೇಷ್ಠತೆಯ ಸಂಕೇತವಾಗಿ ಬೆಳೆದಿಲ್ಲ. ಇವನಲ್ಲಿ ಹುಟ್ಟು ಮತ್ತು ಬೆಳವು ಈ ಎರಡರಲ್ಲಿ ವ್ಯಕ್ತಿಯ ಯೋಗ್ಯತಾ ನಿರ್ಧಾರಕ್ಕೆ ಹೆಚ್ಚಿನ ತೂಕ ಇರುವುದು ಹುಟ್ಟಿಗೇ.

ಆದರೂ ಕುಮಾರವ್ಯಾಸನಲ್ಲಿ ಕುಲ ಜಾತಿಯ ವಿಚಾರದಲ್ಲಿ ತುಂಬಾ ವೈರುಧ್ಯಗಳಿವೆ. ಈತನು ಅನೇಕ ಕಡೆ ವರ್ಣ ವ್ಯವಸ್ಥೆಯನ್ನು ಸಮರ್ಥಿಸುವ ಹಾಗೆ ಮಾತನಾಡುತ್ತಾನೆ. ಅದೇ ರೀತಿ ಕಥನದ ಒಳ ನಡೆಗಳಲ್ಲಿ ಕುಲವೆಂಬುದು ನಿಂತ ನೀರಲ್ಲ ಅದು ನಿರಂತರ ಚಲನಶೀಲವಾದದ್ದು ಎಂಬ ತಿಳುವಳಿಕೆಯೂ ಇದೆ. ಹಾಗೆ ಗಳೆರಡೂ ಇದ್ದು ಜೊತೆಗೆ ನೀತಿಯೂ ಇದ್ದರೆ ಅವನು ಉತ್ತಮ ಕ್ಷತ್ರಿಯ, ಅವನಿಗೆ ದೈವ ಬೆಂಬಲವೂ ಜಯವೂ ಸದಾ ಇರುತ್ತವೆ ಎಂಬುದು ಕುಮಾರವ್ಯಾಸನ ಸ್ಥೂಲ ಪ್ರತಿಪಾದನೆಯಾಗಿದೆ. ಆದರೆ ಇವನಲ್ಲಿ ಜಾತಿ, ವಂಶದ ವಿಚಾರ ಬಂದಾಗೆಲ್ಲ ಕುಲದ ಕುರಿತ ಇವನ ಬಿಡಿ ಬಿಡಿ ಮಾತುಗಳನ್ನು ಕಂಡಾಗ ತುಂಬಾ ನಿರಾಸೆಯಾಗುತ್ತದೆ.

ತಾಯಿಗೆ ಕೊಟ್ಟ ಮಾತಿನಂತೆ ಕರ್ಣ ರಣದಲ್ಲಿ ತೊಟ್ಟ ಬಾಣವನ್ನು ತೊಡುವುದಿಲ್ಲ ಎಂದಾಗ ಸಾರಥಿಯಾಗಿದ್ದ ಶಲ್ಯ ಅವನ ಈ ಸೆಂಟಿಮೆಂಟನ್ನು ಕ್ಷತ್ರಿಯರ ಗುಣವಲ್ಲವಿದು, ಇದು ಶೂದ್ರ ಗುಣ ಎನ್ನುತ್ತಾ ಅವನನ್ನು ಕುಲದ ಮಾತೆತ್ತಿ ಜರಿಯುತ್ತಾನೆ. 'ಕುಲವಿಹೀನನಲಿ ಗುಣವರಸಲೇನಹುದು!' ಇವನ ಪ್ರಕಾರ ಹೀನ ಕುಲದವನಿಗೆ ಗುಣವಿರುವುದಿಲ್ಲ.

ಇದೇ ಶಲ್ಯ 'ಸಾಕಿದ ಹೊಲೆಯನ್ ಅವಸರಕೆ ಒದಗುವನು ನೀ ಕಷ್ಟ ಹೋಗು' (ಕರ್ಣಪರ್ವ ೨೫-೩೯) ಎನ್ನುತ್ತಾ ಹೊಲೆಯರವನಾದರೂ ಆಪತ್ತಿನಲ್ಲಿ ಸಾಕಿದ ಸ್ವಾಮಿಗೆ ಕಷ್ಟಕ್ಕೆ ಒದಗಿಬರುತ್ತಾನೆ. ಆದರೆ ನೀನು ಅಂಥಾ ಸಾಕಿದ ಹೊಲೆಯನಿಗಿಂತಾ ಕಡೆ. ಕೌರವನಿಗೆ ನಿನ್ನಂಥ ನೀಚ ಜಾತಿಯವರಿಂದ ಎಳ್ಳಷ್ಟು ಪ್ರಯೋಜನವಿಲ್ಲ ಎಂದು ಬಯ್ಯುತ್ತಾನೆ. ಇಲ್ಲಿ ಕರ್ಣನನ್ನು ಶಲ್ಯ ನಿಂದಿಸುವುದು ಅವನ ಮಾತೃವಾಕ್ಯ ಪರಿಪಾಲನೆಗಾಗಿ. ಆದರೂ ಅವನ ಮಾತಿನ ಬಾಣ ನಾಟುವುದು ಜಾತಿಗೆ. ಕ್ಷತ್ರಿಯರಿಗೆ ರಣದಲ್ಲಿ ಅಪ್ಪ, ಅಮ್ಮ, ಬಂಧು ಬಳಗ ಯಾರೂ ಮುಖ್ಯರಲ್ಲವಲ್ಲ.

ಪಂಪನಲ್ಲಿ – 'ಕುಲಂ ಕುಲಮಲ್ತು, ಛಲಂ ಕುಲಂ, ಗುಣಂ ಕುಲಂ, ಅಭಿಮಾನ ಪೊಂದೆ ಕುಲಂ ಅಣ್ಣು ಕುಲಂ' ಎಂದೆಲ್ಲ (ಪಂಪಭಾರತ ೧೦-೨೧) ಹೇಳುವ ಕರ್ಣನೇ ಕುಮಾರವ್ಯಾಸನಲ್ಲಿ ಕೌರವನನ್ನು ಅಭಿಮಾನದಿಂದ 'ಕುಲದ ಮಲಿನತೆಯ ತೊಳೆದ ಕೌರವ'ನೆಂದು ಸ್ಮರಿಸಿಕೊಳ್ಳುತ್ತಾನೆ. ಇಲ್ಲಿ ಸ್ವಯಂ ಕರ್ಣನೇ ತನ್ನ ಜಾತಿಯ ಬಗ್ಗೆ ಕೀಳರಿಮೆ ಉಳ್ಳವನಾಗಿದ್ದಾನೆ. ತೊಡೆಸೋಂಕಿನಲ್ಲಿ ಕುಳ್ಳಿರಿಸಿಕೊಂಡ ಕೃಷ್ಣನಿಗೆ (ಕರ್ಣನೇನು ಅಸ್ಪೃಶ್ಯನೇ?) ಕರ್ಣ 'ವಂಶವಿಹೀನನನ್ನು ನಿಮ್ಮ ಸಮಾನವಾಗಿ ಕಾಣುವುದೇ'

# ಕುಮಾರವ್ಯಾಸನಲ್ಲಿ ಕುಲ ಚರ್ಚೆ

**ಜಾತಿ ಕುಲ ವಿಚಾರದ ತರತಮ ನಂಬಿಕೆಗಳು ನಮ್ಮಲ್ಲಿಂದು ತೀಕ್ಷ್ಣ ವಿಮರ್ಶೆಗೆ ಗುರಿಯಾಗುತ್ತಿವೆ. ಹೊಸ ವರ್ಗ ಸಮೀಕರಣಕ್ಕೆ ಹೊರಳಿಕೊಳ್ಳುತ್ತಿರುವ ಇವತ್ತಿನ ಆಧುನಿಕ ರೂಪಾಂತರ ಸ್ಥಿತಿಯಲ್ಲಿ ನಿಂತು ನಾವು ಕುಮಾರವ್ಯಾಸನ ಕುಲವಿಚಾರಗಳನ್ನು ನೋಡಿದರೆ, ಭಾರತ ಕಥಾ ಭಿತ್ತಿಯ ಕುಲಮೌಲ್ಯಗಳಿಗೆ ತದ್ವಿರುದ್ಧವಾದ ನಂಬಿಕೆಗಳನ್ನೇ ಈ ಕಥನ ತನ್ನ ಬಿಡಿಮಾತುಗಳಲ್ಲಿ ಪ್ರತಿಪಾದಿಸುತ್ತಿರುವಂತೆ ಕಾಣುತ್ತದೆ.**

ರಾಮಲಿಂಗಪ್ಪ ಟಿ. ಬೇಗೂರು

ನೋಡಿದರೆ ಭಾರತ ಕಥನವೇ ಜಾತಿಕುಲಗಳನ್ನು ಪ್ರಶ್ನಿಸುವ ಕಥನ. ಕರ್ಣನು ಕ್ಷತ್ರಿಯ ನಾಗುವ ಕಡೆ, ಭೀಮನು ಹಿಡಿಂಬೆಯನ್ನು ವಿವಾಹವಾಗುವ ಕಡೆ, ಅರ್ಜುನನು ಪಾಂಡ್ಯ ರಾಜಕುಮಾರಿ, ನಾಗ ಕುಮಾರಿಯನ್ನು ವಿವಾಹವಾಗುವ ಕಡೆ, ಹಾಗೇ ಯಾದವ ಕುಲದ ಕೃಷ್ಣನ ಸೋದರಿ ಸುಭದ್ರೆಯನ್ನು ಅರ್ಜುನ ಪ್ರೇಮಿಸಿ ವಿವಾಹ ವಾಗುವ ಕಡೆ – ಹೀಗೆ ಹಲವಾರು ಕಡೆ ಕುಲಗಳು ಚಲನೆಯನ್ನು ಪಡೆದಿವೆ. ಅಷ್ಟೇ ಯಾಕೆ, ಕುರು ಪಾಂಡವರ ಅಜ್ಜಿ ಯೋಜನಗಂಧಿಯೇ ಬೆಸ್ತರ ಹುಡುಗಿ.

ನಾಲ್ಕು ವರ್ಣಗಳಲ್ಲಿ ಕ್ಷತ್ರಿಯ ಕುಲ ಭಾರತ ಕಥನದಲ್ಲಿ ಸದಾ ಪ್ರವೇಶಕ್ಕೆ ಮುಕ್ತವಾದ ವರ್ಣ. ಮೇಲ್ಮುಖ ಅಥವಾ ಕೆಳಮುಖ ಚಲನೆ ವರ್ಣವ್ಯವಸ್ಥೆಯಲ್ಲಿ ಸಾಧ್ಯವಿರುವುದು ಈ ಕುಲಕ್ಕೆ ಮಾತ್ರ. ಮಿಕ್ಕ ವರ್ಣಗಳಲ್ಲಿ ಅದರಲ್ಲೂ ಬ್ರಾಹ್ಮಣ ವರ್ಣಕ್ಕೆ ಕೆಳಜಾತಿಯವರ ನುಗ್ಗುವಿಕೆ ಎಲ್ಲೂ ಕಾಣುವುದಿಲ್ಲ (ವಿಶ್ವಾಮಿತ್ರನಂಥವರು ಅಪವಾದವಿರಬಹುದು). ಶೌರ್ಯವುಳ್ಳವರು ಕ್ಷತ್ರಿಯರಾಗಬಹುದು; ಕನಿಷ್ಠಪಕ್ಷ ಯೋಧರಾಗಬಹುದು – ಎಂಬ ತಾತ್ವಿಕತೆ ಭಾರತ ಕಥನದಲ್ಲಿರುವಂತೆ ಕಾಣುತ್ತದೆ. ಕ್ಷತ್ರಿಯರಿಗೆ ಜಾತಿ ಮುಖ್ಯವೋ -ಶೌರ್ಯ ಮುಖ್ಯವೋ ಎಂಬ ಪ್ರಶ್ನೆಯೇ ವಿಸಂಗತ ವಾದದ್ದು. ಆದರೆ ಕರ್ಣನನ್ನು ಕುರಿತಂತೆ ಅವನು ಕ್ಷತ್ರಿಯ ಎಂಬುದಕ್ಕಿಂತ ಸೂತ ಎಂಬ ವಿಚಾರವೇ ದೊಡ್ಡ ಚರ್ಚೆಯ ವಸ್ತುವಾಗಿದೆ. ಕುಮಾರ ವ್ಯಾಸನಲ್ಲಿ ಹುಟ್ಟಿನ ಜಾತಿ ಮತ್ತು ಶೌರ್ಯ ಕ್ಷಾತ್ರ ಗುಣಗಳ ಬಗ್ಗೆ ಬಹಳ ವಿಸ್ತಾರವಾದ ಚರ್ಚೆ ನಡೆದಿದೆ. ಜಾತಿ ಶೌರ್ಯ ಎಂದು ವಿನಮ್ರದಿಂದ ಧನ್ಯನೆಂಬಂತೆ ಕೇಳುತ್ತಾನೆ. (ಉದ್ಯೋಗಪರ್ವ ೧೦-೪).

ಯುದ್ಧಕ್ಕೆ ಮುನ್ನ ಪಟ್ಟದ ಸಂದರ್ಭದಲ್ಲಿ ಭೀಷ್ಮ ಕೂಡ ಕರ್ಣನನ್ನು ಗದರಿಸಿ 'ಗಳಹದಿರು ರಾಧೇಯ ನಿನ್ನ ಕುಲವ ನೋಡದೆ' ಎಂದು ಸುಮ್ಮನಿರಿಸುತ್ತಾನೆ (ಭೀಷ್ಮ ಪರ್ವ ೧-೩೯). ಭೀಮನು ರಣದಲ್ಲಿ ಕರ್ಣನೊಂದಿಗೆ ಹೋರಾಡುವುದಕ್ಕೂ ಕೂಡ 'ಆತುಕೊಂಬರೆ ಸರಿಸನಲ್ಲ, ವಿಜಾತಿಯಲಿ ಸಂಭವಿಸಿದನೆ ಘಡ ಸೂತನಂದನ ಎನುತ' (ಕರ್ಣಪರ್ವ ೧೦-೪೧) ಉತ್ತರನ ಥರ ಕರ್ಣನ ಜಾತಿ ನೋಡುತ್ತಾನೆ. ಇಲ್ಲೆಲ್ಲ ಕರ್ಣನನ್ನು ಭಾರತಕತೆಯಲ್ಲಿ ಎಲ್ಲರೂ ಗುರ್ತಿಸುವುದು ಅವನ ಜಾತಿಯಿಂದಲೇ. ಇವನನ್ನು ಬಯ್ಯುವಾಗ ಇವನ ಜಾತಿ ಇವರಿಗೆ ಬೇಗ ಸಿಗುತ್ತದೆ. ಹೊಗಳಲು ಮಾತ್ರ ಅವನ ಜಾತಿ ಬೇಡ, ದಾನ ಶೂರಾದಿ ಗುಣಗಳೇ ಬೇಕು.

ಅರ್ಜುನ ಕರ್ಣರ ಯುದ್ಧ ಸಂದರ್ಭದಲ್ಲಿ ಹೊಗಳು ಭಟ್ಟರು ಅರ್ಜುನನನ್ನು ಹೊಗಳುವುದು ಮಾತ್ರ ಅವನ ವಂಶ ಮರ್ಯಾದೆಯನ್ನು ಎತ್ತಿ ಹೇಳುವ ಮೂಲಕವೇ. ನೋಡಿ :

'ಭರತ ಕುಲ ಸಂಭಾಳು. ಜಯ, ಹಿಮಕರ, ಪುರೂರವ, ನಹುಷ, ನಳ, ಮೃಗವರ, ಯಯಾತಿ ಪ್ರಕಟ ವಿಮಳಾನ್ವಯದೊಳ್ ಅವತರಿಸಿ ಧುರಕೆ ಮನವಳುಕಿದರೆ ಹೆಜ್ಜೆಯ ತಿರುಪಿದೊಡೆ ಕುಲಕೋಟಿ ಕೋಟಿಗೆ ನರಕವೆಂದೆ ಚ್ಚರಿಸಿದರು ಭಟ್ಟರು ನಿಜಾನ್ವಯವ' (ಕರ್ಣಪರ್ವ ೨೧-೨೦). ಇಲ್ಲಿ ಅರ್ಜುನನ ಸೋಲು ಗೆಲುವು ಅವನ

ವಂಶ ಮಾನ ಮರ್ಯಾದೆಯ ಪ್ರಶ್ನೆ, ಕುಲಗೌರವದ ಪ್ರಶ್ನೆ!

ಪರಸ್ಪರ ನಿಂದೆ – ವಚನ ವೀರ ಪ್ರದರ್ಶನ – ನಮ್ಮ ಎಲ್ಲ ಕಾವ್ಯಗಳಲ್ಲಿ ಯುದ್ಧದ ಅವಿಭಾಜ್ಯ ಅಂಗ. ಸೋಲು ಗೆಲುವು ಯಾರದೇ ಆಗಿರಲಿ ಯುದ್ಧಕ್ಕೆ ಮೊದಲು ಮಾತಿನ ಯುದ್ಧವಂತು ನಡೆದೇ ನಡೆಯುತ್ತದೆ. ಕರ್ಣ ಅರ್ಜುನರ ಯುದ್ಧಕ್ಕೆ ಮೊದಲಲ್ಲೂ ಈ ವಚನ ಶೌರ್ಯ ಪ್ರದರ್ಶನ ಆಗುತ್ತದೆ. ಅರ್ಜುನ ಕರ್ಣನನ್ನು ಜಾತಿಯ ಪ್ರಸ್ತಾಪವೆತ್ತಿ ನಿಂದಿಸುವುದನ್ನು ಮಾತ್ರ ಮರೆಯುವುದಿಲ್ಲ. ನೋಡಿ: (ಈ ಯುದ್ಧಪೂರ್ವ ಸಂಭಾಷಣೆಯನ್ನು ದ್ರೋಣ ಅರ್ಜುನರ ಸಂವಾದದೊಂದಿಗೆ ಹೋಲಿಸಿ ನೋಡಿ!)

'ಆವ ಹಂಜರ ಕೂಳಿ ಮೊಗವಲೆ! ಯಾವ ಗಾಣವು? ಬೀಸುವ ಬಲೆಗೆ ತೀವಿದ ಉದಕದ ಮಡುವೆ ಇದು? ಸಂಗ್ರಾಮ ಭೂಮಿಕಣಾ. ಹೇವವಿಲ್ಲದೆ ಕಾದ ಬೇಹುದು. ದೀವರರ ವೋಲ್ ತಡಿಕೆ ಬಲೆಯಲಿ ಲಾವುಗೆಯ ಹೊಯ್ದಂದವಲ್ಲ ಎನುತ ಎಚ್ಚನಾ ಪಾರ್ಥ' (ಕರ್ಣಪರ್ವ ೨೨-೨೮).

ರಣರಂಗ ಅಂದರೆ ಗಾಣ, ಕೊಡಮೆ ಹಾಕಿ ಬೆಸ್ತರು ಮೀನು ಹಿಡಿಯುವ ಮಡು ಎಂದು ತಿಳಿಯಬೇಡ ಕಣೋ ಕರ್ಣಾ. ಇದು ಕ್ಷತ್ರಿಯರ ರಣ, ಮೀನುಗಾರರ ಮೀಂಬೇಟೆಯಲ್ಲ ಎನ್ನುತ್ತಾ ಅರ್ಜುನ ಬೆಸ್ತ ಜಾತಿಯನ್ನು ಹಿಡಿದು ಹೀಯಾಳಿಸುತ್ತಾನೆ. ಹೀಗೆ ಹೀಯಾಳಿಸಿದ ಅರ್ಜುನನೇ ಅವನ ಪರಾಕ್ರಮ ಕಂಡು ಕೃಷ್ಣನನ್ನು 'ಕರ್ಣನಾರು?' ಎಂದು ಕೇಳುತ್ತಾನೆ. ಅಂದರೆ ಮೀನುಗಾರರ ಜಾತಿಯವರಿಗೆ ಈ ಪರಿಯ ಬಿಲ್ಲುಗಾರಿಕೆ ಸಾಧ್ಯವೇ ಎಂಬ ಅನುಮಾನವೂ 'ಕಣ್ಣರಿಯದಿದ್ದರೂ ಕರುಳರಿಯಬಲ್ಲುದು' ಎಂಬ ರಕ್ತ ಸಂಬಂಧವೂ ಎರಡೂ ಇಲ್ಲಿ ಬೆರೆತಿವೆ. ಆಗ ಕೃಷ್ಣ ಬೇಕೆಂದೇ ಅರ್ಜುನನಿಗೆ ನಿಜ ಹೇಳುವುದಿಲ್ಲ. 'ನಿನ್ನ ವಂಶಕೆ ಸರಿಯೆ ಸೂತನ ಮಗನು' (ಕರ್ಣ ಪರ್ವ ೨೬-೩೦) 'ನೀನು ಹಿಮಕರ ಕುಲದ ಸುಕುಮಾರಕನು ಲೋಕದ ಕುಲವಿಹೀನನು ಕರ್ಣನಿವ' (೨೬-೪೧) ಎಂದು ಹೇಳುತ್ತಾನೆ. ಏಕಲವ್ಯನ ಬೆರಳು ಕೇಳಿದ ದ್ರೋಣನಿಗೂ ಇಲ್ಲಿ ಕರ್ಣನ ಸಾವು ಬಯಸಿದ ಕೃಷ್ಣನಿಗೂ ಏನೂ ವ್ಯತ್ಯಾಸವಿಲ್ಲ. ಅಂತೂ ಅಪೂರ್ವ ವರ್ಗ ಸಹಕಾರ ಸದಾ ಬಲ್ಲವರಲ್ಲಿ ಇದ್ದೇ ಇರುತ್ತದೆ, ಎಂಬುದು ಕೃಷ್ಣಾರ್ಜುನರಿಂದ ಇಲ್ಲಿ ಸಾಬೀತಾಗುತ್ತದೆ.

ಇಲ್ಲಿ ಕೃಷ್ಣ ಕರ್ಣನನ್ನು ಗುರ್ತಿಸುವುದು ಕುಲದ ಮೂಲಕವೇ. ಅರ್ಜುನನನ್ನು ಗುರ್ತಿಸುವುದೂ ಕುಲದ ಮೂಲಕವೇ. ಆದರೆ ಕೌರವ ಕೃಷ್ಣನನ್ನು ನಿಂದಿಸುವಾಗೆಲ್ಲ ಅವನ ಕುಲದ ಜೊತೆಗೆ ಅವನ ಗುಣವನ್ನು ಎತ್ತಿ ಚುಚ್ಚುತ್ತಾನೆ. ದುರ್ಯೋಧನ ಕೃಷ್ಣನನ್ನು 'ಗೋಪಿ ಜನಜಾರ', 'ಹಳ್ಳಿಕಾರ ಹೆಣ್ಣುಮಕ್ಕಳ ಮಿಂಡ' ಎಂದೆಲ್ಲ ಬಯ್ಯುತ್ತಾನೆ. ಕೃಷ್ಣ ಮಾತ್ರ ಧರ್ಮ ಸ್ಥಾಪನೆಗಾಗಿ ಕರ್ಣನನ್ನು ರಕ್ಷಿಸುವ ಸಾಮರ್ಥ್ಯವಿದ್ದೂ ಅವನನ್ನು ಕೊಲ್ಲಲೆಂದೇ ಕುಲವನ್ನು ಎತ್ತಿ ಆಡುತ್ತಾನೆ. ಎಷ್ಟಾದರೂ ಕರ್ಣ ವೈರಿಪಕ್ಷದವನಲ್ಲವೇ!

ಸಂಧಾನಕ್ಕೆ ಹೋದಾಗ ಕೃಷ್ಣ, ಕೌರವ-ಧೃತರಾಷ್ಟ್ರರಿಗೆ ಅವರ ವಂಶ-ಕುಲ ಮರ್ಯಾದೆಯ ಬಗ್ಗೆ ಹೇಳುವುದನ್ನು ಮಾತ್ರ ಮರೆಯುವುದಿಲ್ಲ ನೋಡಿ:

'ನೀತಿಗಾಲಯ ನಿಮ್ಮ ಕುಲ, ವಿಖ್ಯಾತವದು ನೆಲೆ ಸಕಲ ಸೌಖ್ಯ ವ್ರಾತಕೆ, ಇದು ಸದ್ವೀಜವೆನಿಸಿತು. ಕೌರವಾನ್ವಯವು, ....**ಕುಲಘಾತಕನು** ನೀನೆಂಬ ಕೀರ್ತಿಗೆ... ನೆಲೆಯಾಗದಿರು ಬೇಡಿದೆವು (ಉದ್ಯೋಗಪರ್ವ ೯-೧೯).

'ಕೆಡಿಸದಿರು ಧೃತರಾಷ್ಟ್ರ ಕುಲದಲಿ ಕೊಡಲಿಯನು ನೀ ಹಡೆದು, **ವಂಶವ ಕೆಡಿಸಿ** ಕಳೆದೊಡೆ ಹಾನಿ ವೃದ್ಧಿಗಳೆಲ್ಲ ನಿನಗಹುದು' (೯-೨೪). ಇಲ್ಲಿ ಕೃಷ್ಣನ ಕಾಳಜಿ ಕುಲ ಕೆಡಬಾರದೆಂಬುದು. ಕೃಷ್ಣನಿಗೆ ದುರ್ಯೋಧನನಂತೆ ಕುಲಜಾತಿಯನ್ನು ಎತ್ತಿ ಬಯ್ಯಲು ಬರುವುದಿಲ್ಲ ಯಾಕೆಂದರೆ ಕೌರವ ಕುಲ ಪಾಂಡವ ಕುಲ ಒಂದೇ ಅಲ್ಲವೇ! ಆದರೆ ಕರ್ಣನನ್ನು ಎಲ್ಲರೂ ಬಯ್ಯುವ ಸಾಧನ ಮಾತ್ರ ಅವನ ಕುಲವೇ.

ಧರ್ಮರಾಯನಂಥ ಧರ್ಮರಾಯ ಕೂಡ ದುರ್ಯೋಧನ ಕೊನೆಯಲ್ಲಿ ನೀರು ಮುಳುಗಿ ಸರೋವರದಲ್ಲಿ ಅಡಗಿಕೂತಾಗ ಆಡುವ ಮಾತು ಜಾತಿಗೆ ಕಳಂಕ ತಟ್ಟಿತಲ್ಲಾ ಎಂಬ ಹಲುಬಾಟವೇ. ನೋಡಿ:

'ಜಾತಿ ಮಾತ್ರದ ಮೇಲೆ ಬಂದ ಖ್ಯಾತಿ ವಿಖ್ಯಾತಿಗಳು ನಮಗೆನೆ ಜಾತರಾದೆವು ನಾವು ನಿರ್ಮಳ ಸೋಮವಂಶದಲಿ, ಭೀತಿಯಲಿ ನೀ ನೀರ ಹೊಕ್ಕಡೆ, ಮಾತು ತಾಗದೆ ತಮ್ಮನಕಟಾ' (ಗದಾಪರ್ವ ೫-೧೫). ಇಲ್ಲಿ ಧರ್ಮಜ ಅಯ್ಯೋ ದುರ್ಯೋಧನಾ

## ಚಳಿಗಾಲ

**ಥ**ರಗುಟ್ಟುವ ಚಳಿಯಲ್ಲಿ
ಮರಗಟ್ಟು ನಡುಕಗಳು
ಮೈ ಮನದ ಸುಳಿಗಳಲ್ಲಿ
ಹೃದಯದಿಂದ ಹಿಡಿದು
ಹೆಬ್ಬೆರಳಿನ ತನಕ
ನಡುಗುವ ಪುಳಕ
ಬೆಟ್ಟದಲಿ ಬಿದ್ದಿರುವ
ಹಿಮದ ಬಂಡೆಗಳು
ಕೊರೆವ ಚಳಿ ಗಾಳಿ
ಶೀತ ಲಹರಿಗಳು
ಏನು ಹೊದ್ದರೂ ತಡೆಯಲಾಗದು
ಕಾಲು ಬೆಚ್ಚಗೆ ಮಾಡಲು
ತೊಟ್ಟ ಸಾಕ್ಸುಗಳೂ ತೇವ
ಕೈ ತಿಕ್ಕಿ ನೀವಿಕೊಳ್ಳುತ್ತ
ದೇಹದ ಬಿಸಿ ಕಾಪಾಡಲು
ಸಾಹಸ ನಡೆಸಿರುವ ದೃಶ್ಯ

ಬಿಸಿ ಬಿಸಿ ಕಾಫಿಯನು
ಗಟಗಟನೇ ಕುಡಿದುಬಿಡಲೆ?
ತೊಡೆದುಹಾಕಲೇ
ಜನುಮ ಜನುಮಗಳ
ಮಾಗಿಯ ಚಳಿಯನ್ನು?
ಚಳಿಯ ಗೆಲ್ಲುವ ಯತ್ನ
ಮೆಟ್ಟಿ ನಿಲ್ಲಲು ನಡುಕ
ಕೆಂಡ ಕಾಸುತ್ತ ಕುಳಿತೆ
ಅವ್ವ ನೀಡುತ್ತಿದ್ದ ಅಮೃತ
ಬಿಸಿ ರೊಟ್ಟಿ, ಕೈ ತುತ್ತು
ನೆನಪಿನಲಿ ಮೂಡಿದಾಗ
ಜನ್ಮ ಜನ್ಮಾಂತರದ ಹಸಿವು
ಚಳಿಗಳ ಮೆಟ್ಟಿ ನಿಂತ
ಶಿಖರದ ಆತ್ಮದಲಿ
ಬೆಚ್ಚನ ಅನುಭವ

**ಕೆ. ಷರೀಫಾ**
ಎ.ಪಿ.ಎಂ.ಸಿ., ಶಿವಮೊಗ್ಗ ರಸ್ತೆ, ಹರಿಹರ



ನಮ್ಮ ವಂಶಕ್ಕೇ ಅವಮಾನ ಮಾಡಿಬಿಟ್ಟೆಯಲ್ಲಾ, ನಮ್ಮ ಜಾತಿ ಎಂಥದ್ದು, ಅಂಥಾ ಸೋಮವಂಶದಲ್ಲಿ ಹುಟ್ಟಿ ಹೀಗೆ ಹೇಡಿಯ ಹಾಗೆ ನೀರಿನಲ್ಲಿ ಬಚ್ಚಿಟ್ಟುಕೊಳ್ಳುವುದೇ ? ಅಕಟಾ ನಿನ್ನ ಈ ಕೃತ್ಯದಿಂದ ಸೋಮವಂಶಕ್ಕೆ ಅಪಕೀರ್ತಿ ಬಂತೇ ಎಂದು ಕೊರಗುತ್ತಾನೆ. ಶೌರ್ಯವೆಂಬುದು ನಮ್ಮಂಥವರ ವಂಶದ ಗುತ್ತಿಗೆ, ಹೇಡಿತನ ಏನಿದ್ದರೂ ಕೆಳಜಾತಿಯವರ ಸ್ವಭಾವ ಎಂಬುದು ಇಲ್ಲಿ ಧರ್ಮರಾಯನ ಅಭಿಪ್ರಾಯ.

ಈ ರೀತಿಯ ಮಾತುಗಳನ್ನೆಲ್ಲಾ ನೋಡಿದರೆ, ಕರ್ಣನು ನಿಜವಾಗಿಯೂ ಸೂತ ಜಾತಿಯಲ್ಲಿಯೇ ಹುಟ್ಟಿರಬಹುದು. ಕಾಲಾನಂತರದಲ್ಲಿ ಇಂಥ ಜಾತಿಯವನೊಬ್ಬ ಇಷ್ಟೊಂದು ಪರಾಕ್ರಮಿಯಾಗಲು ಸಾಧ್ಯವೇ ಎಂಬ ಅನುಮಾನ ವಿದ್ಯಾವಂತ (ಬ್ರಾಹ್ಮಣ) ಲಿಪಿಕಾರರಲ್ಲಿ ಹುಟ್ಟಿ ನಂತರ ಇಂಥಾ ಜಾತಿಯವನು ಇಷ್ಟೊಂದು ಪರಾಕ್ರಮಿಯಾಗಲು ಸಾಧ್ಯವಿಲ್ಲ ಎಂಬ ತೀರ್ಮಾನವಾಗಿ ಬೆಳೆದಿರಬಹುದು. ಆಮೇಲೆ ಇದೇ ಅಪಗ್ರಹಿಕೆ ಕಥಾಹಂದರದಲ್ಲಿ ಇವನು ಮದುವೆಗೆ ಮುನ್ನ ಕುಂತಿಗೇ ಹುಟ್ಟಿದ್ದವನು ಎಂಬ ಕತೆಯ ಹುಟ್ಟಿಗೂ ಕಾರಣವಾಗಿರಬಹುದು. ಹೀಗೆ ಕರ್ಣ ಕತೆಯ ಜನನ ಪುರಾಣ ವ್ಯಾಸಭಾರತದಲ್ಲಿ ಲಿಪಿಕಾರ ಬ್ರಾಹ್ಮಣರ ಪ್ರಕ್ಷಿಪ್ತ ರಾಜಕಾರಣವಿರಬಹುದು ಎಂಬ ಬಲವಾದ ಗುಮಾನಿ ಈ ಟಿಪ್ಪಣಿ ಮಾಡುವಾಗ ನನಗೆ ಕಾಡುತ್ತಿದೆ. (ಅಂಬೇಡ್ಕರ್‌ನ್ನೇ ಬ್ರಾಹ್ಮಣರಿಗೆ ಹುಟ್ಟಿದವನು ಎಂದು ಕತೆ ಹೇಳುವವರೂ ನಮ್ಮಲ್ಲಿ ಇದ್ದರಲ್ಲ!)

ಏನೇ ಆದರೂ ಕುಮಾರವ್ಯಾಸನಲ್ಲಿ ಕುಲಜಾತಿಯ ಕುರಿತ ಬಿಡಿ ಮಾತುಗಳು ಕುಲವೆಂದರೆ ಅದೊಂದು ಮಾನವನ ಮಾನ, ಮರ್ಯಾದೆಯ ಪ್ರಶ್ನೆ ಎಂಬಂತೆ, ಗುಣ-ಸ್ವಭಾವಗಳನ್ನು ಪ್ರಭಾವಿಸುವ ಪರಿಸರವೆಂಬಂತೆ ಬಳಕೆಯಾಗಿರುವುದಂತೂ ನಿಜ. ಆದರೆ ಇದಕ್ಕೆ ಪೂರಕವೆಂಬಂತೆ, ಕೆಲಕಡೆ ಅಪವಾದವೆಂಬಂತೆ, ಒಂದೆರಡು ಮಾತುಗಳು ಬರುತ್ತವೆ. ನೋಡಿ :

ಕರ್ಣಪರ್ವದಲ್ಲಿ ಶಲ್ಯನ ಬಾಯಲ್ಲಿ 'ಆರಿಗಾವುದು ದೇಶವಾ ಸಂಸ್ಕಾರವವರಿಗೆ ಬಿಡದು, ಬುದ್ಧಿಗೆ ಬೇರುಗೊಲೆಯಲ್ಲಾ ಕುದೇಶ ಕುವಂಶ ಸಂಭೂತಿ' (ಕರ್ಣಪರ್ವ ೯-೧೯) ಎಂಬ ಮಾತುಗಳು ಕರ್ಣನಿಂದೆಯ ಅಂಗವಾಗಿ ಬರುತ್ತವೆ. ಇಲ್ಲಿ ಶಲ್ಯ ವಂಶ ಮೂಲವಾಗಿ ಬರುವ ಸಂಸ್ಕಾರಗಳ ಜೊತೆಗೆ ಪ್ರದೇಶ ಮೂಲವಾದ ಸಂಸ್ಕಾರಗಳೂ ಕೂಡ ಅಷ್ಟೇ ಪ್ರಮುಖವಾಗಿ ವ್ಯಕ್ತಿಯ ವಿವೇಕವನ್ನು ನಿರ್ಧರಿಸುತ್ತವೆ ಎಂದು ಹೇಳುತ್ತಾನೆ.

ರಾಜಸೂಯ ಯಾಗದ ನಂತರ ಮಯ ನಿರ್ಮಿತ ಅರಮನೆಯಲ್ಲಿ ಅವಮಾನಕ್ಕೀಡಾದ ದುರ್ಯೋಧನ ಅವರ ಐಶ್ವರ್ಯಕ್ಕೆ ಕರುಬಿ ಅವರನ್ನು ಹೇಗಾದರೂ ಹಾಳು ಮಾಡಬೇಕಲ್ಲಾ ಎಂದು ಪ್ಲಾನು ಮಾಡುತ್ತಾನೆ. ಪಗಡೆಯಾಟವೇ ಸರಿಯಾದ ಮಾರ್ಗವೆಂದು ತಿಳಿದು ಅಪ್ಪನ ಮೂಲಕವೇ ಕರೆಕಳಿಸಲು ತೀರ್ಮಾನ ಮಾಡುತ್ತಾನೆ. ಆಗ ಮಗನ ಈ ಕುಬುದ್ಧಿಗೆ ಧೃತರಾಷ್ಟ್ರ ಬೆರಗುಪಟ್ಟು ಮಗನ ವಂಶನೆಲೆಯ ಬಗ್ಗೆ ಮಾತನಾಡುತ್ತಾನೆ. 'ಸತಿಯರಲಿ ನಿಮ್ಮವ್ವೆ ಸುಪತಿವ್ರತೆ, ಬೀಜಸ್ಥಿತಿಯಲೂ ಊನವಿಲ್ಲ' (ಸಭಾ ಪರ್ವ ೧೨-೪೮); ಆದರೂ ನೀನು ಮಾತ್ರ ಮಹಾ ಖಳ ಹೇಗಾದೆ ? ನಿನ್ನಯ ಬುದ್ಧಿ ದೋಷವಿದು ಎಂದು ಅಚ್ಚರಿಪಡುತ್ತಾನೆ. ಇಲ್ಲಿ ದುರ್ಯೋಧನನ ವ್ಯಕ್ತಿತ್ವ ನಿರ್ಮಾಣದಲ್ಲಿ ಅವನ ಬೀಜ-ಕ್ಷೇತ್ರಗಳಿಗಿಂತಲೂ ಅವನ ಬೆಳವಣಿಗೆಗೆ ಬಿದ್ದ ನೀರು ಗೊಬ್ಬರಗಳೇ ಹೆಚ್ಚಿನ ಪಾತ್ರ ವಹಿಸಿವೆ ಎಂಬುದು ಗಮನಾರ್ಹ. ಕುರುಡು ತಂದೆಯಾದ ಧೃತರಾಷ್ಟ್ರನೇ ಮಗನ ಬುದ್ಧಿ ಬೆಳವಣಿಗೆಯ ಬಗ್ಗೆ ಹೀಗೆ ಅಚ್ಚರಿಪಟ್ಟರೆ! ಇದು 'ಕುಲದ ಸಂಸ್ಕಾರ ಬಲವಾದದ್ದು' ಎಂಬ ಮಾತನ್ನು ಅಲ್ಲಗಳೆಯುವ ಉದ್ಗಾರವಂತೂ ಅಲ್ಲ.

ಯಾವುದೇ ಕೃತಿಯ ಅನುಸಂಧಾನದಲ್ಲಿ ಬಿಡಿ ವಿವರಗಳಿಂದ ಕಟ್ಟಿಕೊಳ್ಳಬಹುದಾದ ತಾತ್ವಿಕತೆಗಿಂತ ಘಟನಾವಳಿಗಳ ಮತ್ತು ಕಥನದ ಆಶಯಗಳ ಮೂಲಕ ಹುಟ್ಟಿಕೊಳ್ಳುವ ತಾತ್ವಿಕತೆಯು ಹೆಚ್ಚು ಮುಖ್ಯವಾದದ್ದು. ಕಥನದಲ್ಲಿ ಸಾಂದರ್ಭಿಕ ಅಗತ್ಯಗಳ ಪೂರೈಕೆಗಾಗಿ ಬರುವ ಬಿಡಿ ಮಾತುಗಳನ್ನು ಹಿಡಿದು ಕೃತಿಯ ಅಧಿಕೃತ ತತ್ವದ ಮಾತುಗಳಿವು ಎಂಬಂತೆ ತಾತ್ವೀಕರಣಗಳನ್ನು ಮಾಡುವುದು ಒಂದು ರೀತಿ ಕಥನದ ಆಶಯ ವಿರೋಧಿ ಓದೇ ಆಗಿಬಿಡಬಹುದು. ಕರ್ನಾಟ ಭಾರತದಲ್ಲಿ ಬಿಡಿ ಮಾತುಗಳು ಕೆಲವೇಳೆ ಘಟನಾವೇಶದ ಅಗತ್ಯವಾಗಿ, ಪಾಸಿಂಗ್ ಮಾತುಗಳಾಗಿಯೂ ಬರುತ್ತವೆ. ಅವು ಕೇವಲ ಕೃತಿ ಪಾತ್ರದ ಕಥಾ ಘಟನೆಯ ಅನಿವಾರ್ಯ ಸಂಭವಗಳಲ್ಲ. ಅವು ಕೃತಿಕಾರನ ಸಂಸ್ಕಾರದ ಫಲಗಳು ಕೂಡ. ಅವನ್ನೆಲ್ಲ ಕಥನದ ಆಶಯಗಳೆಂದು ತಿಳಿಯಬೇಕಿಲ್ಲ.

ಭೀಮನ ವಿವೇಕ, ಅರ್ಜುನನ ಲೈಂಗಿಕ ಸ್ವಾತಂತ್ರ್ಯ, ಕರ್ಣನ ಕರ್ಣತ್ವ, ದ್ರೌಪದಿಯ ಕೆಚ್ಚು, ಕೃಷ್ಣನ ರಾಜಕೀಯ, ವಿದುರನ ನೀತಿ, ಭೀಷ್ಮನ ಸಹನೆ, ದ್ರೋಣನ ವಿದ್ಯಾಕೌಶಲ್ಯ ಇವುಗಳಲ್ಲಿ ಯಾವ ಕುಲವಿದೆ? ಕೃಷ್ಣನನ್ನು ಯಾದವನೆನ್ನೋಣವೇ ? ವಿದುರನನ್ನು ದಾಸಿ ಪುತ್ರನೆನ್ನೋಣವೇ ? ಕುಂಭಸಂಭವ ದ್ರೋಣನನ್ನು ಬ್ರಾಹ್ಮಣನೆನ್ನೋಣವೇ ? ಅಶ್ವತ್ಥಾಮನನ್ನು ಹಾರುವನೆಂದು ನಿಂದಿಸಲು ಸಾಧ್ಯವೇ ? ಇವರೆಲ್ಲ ಕೆಲರು ಹಾರುವರು, ಕೆಲರಧಮಕುಲದವರು ಮಾತ್ರವೇನಾ ? ಛಲ, ದಾನ, ಶೂರ, ಸ್ನೇಹ, ಮುಂಗೋಪ, ಪ್ರೇಮ, ವಿವೇಕ, ಪಕ್ಷಪಾತ, ಯುಕ್ತಿ ಒಂದೇ ಎರಡೇ! ಇಲ್ಲಿನ ಪಾತ್ರಗಳ ಕುಲವೇ ಬೇರೆ ಬೇರೆ, ಕುಮಾರವ್ಯಾಸನೇ ಧರ್ಮದ ಬಗೆಗೆ 'ಧರ್ಮದ ಬೆಡಗು ತಾನದು ಬೇರೆ ನುಡಿದ ಮಾತ್ರದಲಿರದು' (ಕರ್ಣಪರ್ವ ೧೭- ೧೩). ಕುಲವೆಂಬುದು ಕೂಡ ನುಡಿದ ಮಾತ್ರದಲಿರದು ಅದರ ಪರಿ ಬೇರೆ.

ಇಷ್ಟೆಲ್ಲ ಮಾತುಗಳ ಉದ್ದೇಶ ಕುಮಾರವ್ಯಾಸನನ್ನು ಸಮರ್ಥಿಸುವುದಲ್ಲ. ಭಾರತ ಕಥನ ಕುಮಾರವ್ಯಾಸನ ಸ್ವತಂತ್ರ ಕಲ್ಪನೆಯಲ್ಲ. ಅದು ಸಂಸ್ಕೃತ ಮತ್ತು ದೇಸೀ ಭಾಷಾ ಸಂಸ್ಕೃತಿಗಳಲ್ಲಿ ಬಹುಕಾಲ, ಬಹುಸ್ತರೀಯ ಮಥನಗಳಿಗೆ ಈಡಾಗಿ ಆಕಾರ ಪಡೆದಿರುವ ಹಂದರ. ಇದು ಕುಮಾರವ್ಯಾಸನೆಂಬ ಲಿಪಿಕಾರನು ಸಂಸ್ಕೃತ ಕನ್ನಡ ಸಂಸ್ಕೃತಿಯಿಂದ ಎತ್ತಿಕೊಂಡ ಕಥನ. ಹೀಗಾಗಿ ಕಥಾಹಂದರ ಕುಮಾರವ್ಯಾಸನೆಂಬ ಯೋಗೀಂದ್ರನದಲ್ಲ, ಮುಖ್ಯವಾಗಿ ಇದು ಬಹುಪಾಲು ಶಿಷ್ಟ- ಮೌಖಿಕಗಳೆರಡರ ಕನ್ನಡ ಸಂಸ್ಕೃತಿಯ ಪರಿಸರದ್ದು. ಆದ್ದರಿಂದ ಈ ಕಥಾ ಹಂದರದೊಳಗಿರುವ ಕುಲ ಸಂಬಂಧಿ ಚಲನೆಗಳು, ಗುಣಸಂಬಂಧಿ ವರ್ತನೆಗಳು ಕುಮಾರವ್ಯಾಸ ಎಂಬ ಕವಿ ವ್ಯಕ್ತಿಯ ಆಶಯಗಳಲ್ಲ. ಆದರೆ ಈ ಟಿಪ್ಪಣಿಯಲ್ಲಿ ಉದಾಹೃತವಾಗಿರುವ ಎಲ್ಲ ಬಿಡಿ ಮಾತುಗಳ ಹಿಂದಿನ ಆಶಯಗಳು ಕುಮಾರವ್ಯಾಸನವೇ. ಆಡಿದ ಮಾತಿಗೆ ಅವನೇ ಹೊಣೆ ಅಥವಾ ಕೃತಿಕಾರನೇ ಹೊಣೆ. ಇದನ್ನು ಇನ್ನಷ್ಟು ವಿಸ್ತರಿಸಬಹುದಾದರೆ –

ಯಾವುದೇ ಪಠ್ಯವೆಂಬುದು ಕಾಲಾನುಕ್ರಮದಲ್ಲಿ ಪ್ರತಿಕಾರ-ಲಿಪಿಕಾರ ಸಮುದಾಯಗಳಲ್ಲಿ ಹಾದು ಬಂದಿರುತ್ತದೆ. ಇಂಥಾ ಹಾದಾಟದಲ್ಲಿ ಪಠ್ಯವು ವ್ಯತ್ಯಸ್ತಗೊಳ್ಳುತ್ತ ರೂಪುಗೊಳ್ಳುತ್ತಿರುತ್ತದೆ. ಇಂದು ನಮ್ಮಲ್ಲಿರುವ ಕುಮಾರವ್ಯಾಸನ ಪಠ್ಯವು ಸಮಾಜದಲ್ಲಿನ ಅನೇಕ ಪಠ್ಯಗಳಿಂದಾದ ಏಕಪಠ್ಯ. ಹೀಗಾಗಿ ಪ್ರತಿಯೊಂದು ಪಠ್ಯದ ಹಿಂದೆಯೂ ಒಂದೊಂದು ಪಠ್ಯ ಚರಿತೆ ಇರುತ್ತದೆ. ಪಠ್ಯದ ಹಲವು ಜನ್ಮಾಂತರಗಳ ಹಿಂದೆ ಹಲವು ಕೈಗಳು ಇರುತ್ತವೆ. ಹೀಗಾಗಿ ಈ ಹೊಣೆಯನ್ನು ಈ ಒಟ್ಟು ಲಿಪಿಕರ ಸಮುದಾಯಕ್ಕೂ ಹೊರಿಸಬಹುದು. ಇಲ್ಲಿ ಹೇಳಲು ಹೊರಟ ಸ್ಪಷ್ಟೀಕರಣ ಇಷ್ಟೆ: ಒಟ್ಟಾರೆ ಕಥಾ ಹಂದರದ ಕುಲಸಂಬಂಧಿ ಆಶಯಗಳಿಗೂ ಮತ್ತು ಬಿಡಿ ಮಾತುಗಳ ಮೂಲಕ ಹೊರಡುವ ಕುಲ ಸಂಬಂಧಿ ಆಶಯಗಳಿಗೂ ತಾತ್ವಿಕ ವೈರುಧ್ಯವಿದೆ. ಕಥಾಹಂದರದ ಮೂಲಕ ವ್ಯಕ್ತವಾಗುವ ಧ್ವನಿ-ಆಶಯಗಳಿಗೆ ಹೆಚ್ಚು ಡೆಮಾಕ್ರಟಿಕ್ಕಾಗಿಯೂ, ಬಿಡಿಮಾತುಗಳ ಮೂಲಕ ವ್ಯಕ್ತವಾಗುವ ಆಶಯಗಳು ಹೆಚ್ಚು ಯಥಾಸ್ಥಿತಿವಾದಿಯಾಗಿಯೂ ಇವೆ.

ಇಲ್ಲಿ, ಬಿಡಿ ಬಿಡಿ ಮಾತುಗಳಿಂದಲೇ ಅಲ್ಲವೇ ಒಟ್ಟಾರೆ ಕಥನ ಕಟ್ಟಿಕೊಳ್ಳುವುದು, ಬಿಡಿ ಮಾತುಗಳಿಗೂ ಒಟ್ಟು ಆಕೃತಿಗೂ ಹಾಗೆ ಭೇದ ಕಲ್ಪಿಸಲು ಸಾಧ್ಯವೇ ? ಎಂಬ ತರ್ಕ ಹುಟ್ಟಬಹುದು. ಆದರೆ ಭಾರತ ರಾಮಾಯಣ ಕಥಾ ಹಂದರಗಳಿಗೆ ಸಂಬಂಧಿಸಿದಂತೆ ಹೀಗೆ ಹೇಳಲಾಗುವುದಿಲ್ಲ. ಈ ಕಥಾ ಹಂದರಗಳು ಈಗಾಗಲೇ ಜನಸಂಸ್ಕೃತಿ ಯಲ್ಲಿ ಇರುವ ಕಥನಗಳು. ಇವನ್ನು ಒಂದು ಭಾಷಿಕ ಸಂಸ್ಕೃತಿಯ ಪ್ರತಿನಿಧಿಯಾಗಿ ಎತ್ತಿಕೊಂಡ ಕವಿ ಎಷ್ಟರ ಮಟ್ಟಿಗೆ ತನ್ನ ಮಾತುಗಳಲ್ಲಿ ಕಟ್ಟುತ್ತಾನೆ ಎನ್ನುವುದು ಮುಖ್ಯ ವಾಗುತ್ತದೆ. ಇಲ್ಲಿ ಕುಮಾರವ್ಯಾಸ ಭಾರತ ಕತೆಯನ್ನು ಕೃಷ್ಣ ಕತೆ ಮಾಡಲು ಹೋಗಿ ಕರ್ಣನಿಗೆ ಅವನ ವ್ಯಕ್ತಿತ್ವಕ್ಕೆ ಇದ್ದಿರಬಹುದಾದ (ಇರಬೇಕಾದ) – ಘನತೆಯನ್ನು ನೀಡಲು ಆಗಿಲ್ಲ. ಇದು ಬಹಳ ಸೂಕ್ಷ್ಮವಾಗಿ ಇವನ ಬಿಡಿ ಮಾತುಗಳಲ್ಲಿ ವ್ಯಕ್ತ ವಾಗುತ್ತದೆ. ಇದು ಸಮಾಜದಲ್ಲಿನ ಕುಲ ಸಂಬಂಧಿ ತಾರತಮ್ಯಗಳ ಸ್ತರವಿನ್ಯಾಸವನ್ನು ಸ್ಥೂಲವಾಗಿ ಒಪ್ಪಿಕೊಂಡಂತಹ 'ಕವಿ ವ್ಯಕ್ತಿತ್ವ'ದ ಪ್ರತೀಕ.

ನಮ್ಮ ವಿಮರ್ಶಾ ಪರಂಪರೆಯಲ್ಲಿ ಕವಿಯನ್ನು ಸದಾ ಸಮರ್ಥಿಸುವ ಧಾಟಿಯಲ್ಲೇ ನಾವು ವರ್ತಿಸುತ್ತ ಬಂದಿದ್ದೇವೆ. ಕವಿ ವ್ಯಕ್ತಿತ್ವವನ್ನು ಕನ್ನಡ ಐಡೆಂಟಿಟಿಯ, ಕನ್ನಡ ಘನತೆಯ ಪ್ರತೀಕವೆಂಬಂತೆ ಕಟ್ಟುತ್ತ ಬಂದಿದ್ದೇವೆ. ಇದು ಬಹುಪಾಲು ಎಲ್ಲ ಮುಖ್ಯ ಕವಿಗಳ ವಿಚಾರದಲ್ಲೂ ನಿಜ. ಕವಿಯ ಇಮೇಜಿಗೆ ಧಕ್ಕೆಯಾಗದಂತೆ ಮಾತಾಡಬೇಕೆಂಬ ಒಂದು ಅಲಿಖಿತ ಎಚ್ಚರ ನಮ್ಮ ವಿಮರ್ಶಾವಲಯದಲ್ಲಿ ಸ್ಥಾಪಿತವಾಗಿ ಬಿಟ್ಟಿದೆ. ಇದರ ಸಮರ್ಥನೆಯೆಂಬಂತೆ ಕವಿ ವ್ಯಕ್ತಿತ್ವಕ್ಕೆ ಧಕ್ಕೆ ಆಗಬಹುದಾದ ಮಾತು ಬಂದಾಗೆಲ್ಲ ಕೃತಿಯೊಳಗಿನ ಮಾತುಗಳನ್ನು ಪಾತ್ರದ ಮಾತುಗಳೆಂದೂ ಕವಿ ವ್ಯಕ್ತಿತ್ವಕ್ಕೆ ಪೂರಕವಾದ ಮಾತುಬಂದಾಗೆಲ್ಲ ಅವು ಕವಿಯ ಮಾತುಗಳೇ ಎಂದೂ ತಿಳಿಯುವ ಪರಿಪಾಠ ಇದೆ. ಆದರೆ ಕುಮಾರವ್ಯಾಸನಿಗೆ ಈ ಯಾವ ಡಿಫೆನ್ಸೂ ಬೇಕಿಲ್ಲ. ಆದರೂ ಕುಲಸಂಬಂಧಿ ಮಾತುಗಳು ಬಂದಾಗ ಅವೆಲ್ಲ ಸಾಂದರ್ಭಿಕ ಅಗತ್ಯಕ್ಕೆ ಮತ್ತು

ಪಾತ್ರಗಳ ಸನ್ನಿವೇಶಾವೇಶದಿಂದ ಬಂದಿರುವ ಮಾತುಗಳು, ಅವುಗಳ ಆಶಯಕ್ಕೂ ಕುಮಾರವ್ಯಾಸನ ಆಶಯಕ್ಕೂ ಸಂಬಂಧವಿಲ್ಲ ಎಂದೂ ತಿಳಿಯುವಂತಿಲ್ಲ.

ಅಂದರೆ ಕುಲಸಂಬಂಧಿಯಾದ ಗದುಗಿನ ಭಾರತದ ಎಲ್ಲ ಮಾತುಗಳಿಗೂ ಕುಮಾರವ್ಯಾಸನೆಂಬ ವ್ಯಕ್ತಿಯೇ ಹೊಣೆ ಎಂದೇನೂ ಅಲ್ಲ. ಈ ರೀತಿಯ ಕುಲ ಸಂಬಂಧಿ ಮಾತುಗಳು ಬಂದಿವೆಯಲ್ಲ, ಇವುಗಳ ನಿರ್ಮಿತಿಯ ಹಿಂದಿನ ಸಾಂಸ್ಕೃತಿಕ ರಾಜಕಾರಣವೇನು ? ಕಥನದ ಮೂಲಕ – ಅದರ ಪಾರಾಯಣದ ಮೂಲಕ ಅದು ಕೆಳ ಕುಲಗಳಿಗೆ ತಲುಪಿಸುತ್ತಿದ್ದ ಸಂದೇಶ ಯಾವುದು ? ಮೇಲ್ವರ್ಣೀಯರ ಸ್ಥಾನ ಸ್ಥಿರತೆಯ ಸಾಧನವಾಗಿ ಗದುಗಿನ ಕಥನವೂ ಬಳಕೆಯಾಯಿತೇ! ಈ ಪ್ರಶ್ನೆಗಳು ತುಂಬಾ ಮುಖ್ಯ.

ಇಂದು ನಾವು ಸಂವಿಧಾನಾತ್ಮಕವಾಗಿ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಸಹಬಾಳ್ವೆ ಮೊದಲಾದ ಮೌಲ್ಯಗಳ ಹಿನ್ನೆಲೆಯಲ್ಲಿ ಚಿಂತಿಸುತ್ತಿದ್ದೇವೆ. ಈ ಹಿನ್ನೆಲೆಯಲ್ಲಿ ನಮ್ಮ ಸಮಾಜದ ಅಸ್ಪೃಶ್ಯತಾ ಸಮಸ್ಯೆ ಒಂದು ಪಿಡುಗಾಗಿ ನಮಗಿಂದು ಕಾಡುತ್ತಿದೆ. ಜಾತಿ ಕುಲ ವಿಚಾರದ ತರತಮ ನಂಬಿಕೆಗಳು ನಮ್ಮಲ್ಲಿಂದು ತೀಕ್ಷ್ಣ ವಿಮರ್ಶೆಗೆ ಗುರಿಯಾಗುತ್ತಿವೆ. ಹೊಸ ವರ್ಗ ಸಮೀಕರಣಕ್ಕೆ ಹೊರಳಿಕೊಳ್ಳುತ್ತಿರುವ ಇವತ್ತಿನ ಆಧುನಿಕ ರೂಪಾಂತರ ಸ್ಥಿತಿಯಲ್ಲಿ ನಿಂತು ನಾವು ಕುಮಾರವ್ಯಾಸನ ಕುಲವಿಚಾರಗಳನ್ನು ನೋಡಿದರೆ, ಭಾರತ ಕಥಾ ಭಿತ್ತಿಯ ಕುಲಮೌಲ್ಯಗಳಿಗೆ ತದ್ವಿರುದ್ಧವಾದ ನಂಬಿಕೆಗಳನ್ನೇ ಈ ಕಥನ ತನ್ನ ಬಿಡಿ ಮಾತುಗಳಲ್ಲಿ ಪ್ರತಿಪಾದಿಸುತ್ತಿರುವಂತೆ ಕಾಣುತ್ತದೆ.

ಕುಮಾರವ್ಯಾಸ ಪ್ರತಿನಿಧಿಸುವ ವರ್ಗ ನಿಸ್ಸಂಶಯವಾಗಿ ಮೇಲ್ವರ್ಗ. ಕುಮಾರವ್ಯಾಸನ ಕುಲಸಂಬಂಧಿ ಮೌಲ್ಯಗಳು ನಿಸ್ಸಂಶಯವಾಗಿ ಆತನ ಕಾಲದ ಮೇಲ್ವರ್ಗೀಯ ನಂಬಿಕೆಗಳೇ ಆಗಿವೆ. ಇಷ್ಟಾಗಿಯೂ ಕಾವ್ಯದಲ್ಲಿ ಕುಮಾರವ್ಯಾಸನ ಉದ್ದೇಶವೇ ಕೃಷ್ಣ ಭಜನೆಯಲ್ಲವೇ ? ಇಲ್ಲಿ ಮಿಕ್ಕ ವಿಚಾರವೆಲ್ಲವೂ ಆನುಷಂಗಿಕ. ಧರ್ಮಾಧರ್ಮ ನೀತಿ-ಅನೀತಿ, ಕೀರ್ತಿ-ಅಪಕೀರ್ತಿಗಳ ವಿವೇಚನೆಗೆ ಕೊಟ್ಟಿರುವುದರಲ್ಲಿ ಕಾಲುಭಾಗ ಪ್ರಾಮುಖ್ಯತೆಯನ್ನೂ ಕುಲಚರ್ಚೆಗೆ ಕುಮಾರವ್ಯಾಸ ಕೊಟ್ಟಿಲ್ಲ. ಇವನಿಗೆ ನೀತಿ, ಧರ್ಮ, ಭಕ್ತಿಗಳ ಎದುರು ಕುಲಹಿಂಸೆ ಅಮುಖ್ಯ. ಇಂಥಾ ಭಕ್ತಿ ಮತ್ತು (ಸರ್ವ ಶಕ್ತನಾದ ಕೃಷ್ಣನ) ಲೀಲೆಗಳೇ ಈ ಕಾವ್ಯದ ಕುಮಾರವ್ಯಾಸನ ವಸ್ತುವಾಗಿರುವಾಗ ಕುಲದ ಕುರಿತಾಗಿ ವೈಚಾರಿಕವಾಗಿ ಚಿಂತಿಸುವುದು ದೂರವೇ ಉಳಿದ ಮಾತು. ಅಷ್ಟೇ ಅಲ್ಲ, ಕಥನದೊಳಗಿನ ಕುಲಚಲನೆಗಳನ್ನು ಕುಮಾರವ್ಯಾಸನಿಗೆ ತಾತ್ವಿಕವಾಗಿ ಸಮರ್ಥಿಸುವ ಉದ್ದೇಶವೂ ಇಲ್ಲ, ಪ್ರಶ್ನೆ ಮಾಡುವ ಉದ್ದೇಶವೂ ಇಲ್ಲ. ಇದರ ಬಗ್ಗೆ ಮಾತ್ರ ಇವನು ಮೇಲುಸಮಾಜವೆಂಬ ಶರೀರದ ಬರಿಯ ನೆರಳು ಮಾತ್ರ. 'ದೇಹಚ್ಛಾಯೆಗುಂಟೇ ಬೇರೆ ಚೇಷ್ಟೆ?' (ಸಭಾಪರ್ವ ೧೩-೯೪).

ಹೆಣ್ಣಿಗೆ ಪುರುಷ ಪ್ರಧಾನ ಸಮಾಜದಲ್ಲಿ ಯಾವ ಕೀಳು ಸ್ಥಾನ ಇದೆಯೋ ಅದೇ ಸ್ಥಾನವನ್ನು ಸಮರ್ಥಿಸುವಂತೆ ನಮ್ಮ ಮಹಾಕಾವ್ಯ ಪ್ರತಿಭೆಯ ಕವಿಗಳೆಲ್ಲರೂ ನಡೆದುಕೊಂಡಿದ್ದಾರೆ. ಹಾಗೇ ಕುಮಾರವ್ಯಾಸನೂ ಇದಕ್ಕೆ ಹೊರತಲ್ಲ. ಇದಕ್ಕೆ ಸರಿಸಮವೆಂಬಂತೆ ಇವನು ಕೆಳಕುಲಗಳಿಗೆ ಸಮಾಜದಲ್ಲಿ ಇದ್ದಿರಬಹುದಾದ ಸ್ಥಾನವನ್ನು ಸ್ಥಿರೀಕರಿಸುವಂತೆ ಮಾತನಾಡಿದ್ದಾನೆ. ಬಸವ, ದಾಸಿಮಯ್ಯ, ಅಕ್ಕ, ಕನಕದಾಸ, ಷರೀಫಜ್ಜರಿಗೆ ಈ ಕುಮಾರವ್ಯಾಸನನ್ನು ಹೋಲಿಸಿದರೆ, ಕುಲಸಂಬಂಧಿ ಬಿಡಿಮಾತುಗಳ ನೆಲೆಯಲ್ಲಿ ಈತ ತೀರಾ ತೋಪಾಗಿ ಕಾಣುತ್ತಾನೆ. ಮಧ್ಯಕಾಲೀನ ಭಕ್ತಿ ಚಳುವಳಿಯಲ್ಲಿ ಕುಲತಾರತಮ್ಯದ ಬಗ್ಗೆ ವಿದ್ರೋಹಿ ಪ್ರತಿರೋಧಗಳೇ ಸಾಮಾಜಿಕ-ಸಾಹಿತ್ಯಕ ನೆಲೆಯಲ್ಲಿ ರೂಪಗೊಂಡಿದ್ದಾಗ್ಯೂ, ಪರಂಪರೆಯನ್ನು ಬಲ್ಲ ಭಕ್ತ ಕವಿ ಕುಮಾರವ್ಯಾಸನಲ್ಲಿ ಕುಲತಾರತಮ್ಯವು ಕನಿಷ್ಠ ಕಾಡುವ ವಿಚಾರವಾಗಿಯೂ ಅಭಿವ್ಯಕ್ತವಾಗಿಲ್ಲ. ಕವಿತ್ವದ ನೆಲೆಯಲ್ಲಿ ಇವನ ಮಾತು ಬೇರೆ. ಆದರೂ ಕವಿತ್ವ ಮಾತ್ರಕ್ಕಾಗಿ ಕಾವ್ಯವನ್ನು ಓದುವ ಕಾಲ ಇದಲ್ಲವಲ್ಲ.

ರಾಮಲಿಂಗಪ್ಪ ಟಿ. ಬೇಗೂರು
ನಂ. ೪೭, ೪ನೇ ಕ್ರಾಸು, ೪ನೇ ಮೇನ್, ಬಾಲಾಜಿ ಕಲ್ಯಾಣ ಮಂಟಪದ ಹತ್ತಿರ,
ಬನಶಂಕರಿ ೩ನೇ ಹಂತ, ಬೆಂಗಳೂರು - ೮೫

## ಸಾದರ ಸ್ವೀಕಾರ

**ಭಾವ** (ಗೇಯ ಗೀತೆಗಳ ಸಂಕಲನ) ವಿಷ್ಣು ನಾಯ್ಕ
**ಪುಟ** : ೮೦ **ಬೆಲೆ** : ರೂ. ೪೫
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರ ಕೊಡ್ಲ,
ಅಂಕೋಲಾ - ೫೮೧ ೩೧೪

**ಬಂಧನ ಚಕ್ರ** (ಕಾದಂಬರಿ) ಭಾರತೀಪುತ್ರ
**ಪುಟ** : ೯೮ **ಬೆಲೆ** : ರೂ. ೮೫
**ಭಾರತೀ ಸಾಹಿತ್ಯ,** ಹಳೆ ಅಂಚೆ ಕಛೇರಿ ರಸ್ತೆ,
ನಾಗಮಂಗಲ - ೫೭೧ ೪೩೨

**ಉರಿಯ ಬೇಲಿ** (ಕತೆಗಳು) ಅನಸೂಯಾದೇವಿ
**ಪುಟ** : ೧೫೬ **ಬೆಲೆ** : ರೂ. ೧೦೦
**ಬ್ಯಾಲದಕೆರೆ ಪ್ರಕಾಶನ,** ಬ್ಯಾಲದಕೆರೆ, ಮಂಡ್ಯ ಜಿಲ್ಲೆ

**ಭಾವಗಾನ** (ಕವನ ಸಂಕಲನ) 'ಸುಪ್ತದೀಪ್ತಿ'
**ಪುಟ** : ೧೨೦ **ಬೆಲೆ** : ರೂ. ೩೦
**ವಿದ್ಯಾನಿಧಿ ಪ್ರಕಾಶನ,** ಸ್ಟೇಷನ್ ರಸ್ತೆ, ಗದಗ.

**ಚೈತನ್ಯಮಯಿ ಶ್ರೀಮಾತಾ** (ಜೀವನ ಚರಿತ್ರೆ)
ಕೋ. ಚೆನ್ನಬಸಪ್ಪ
**ಪುಟ** : ೨೨೦ **ಬೆಲೆ** : ರೂ. ೧೨೦
ಮೇಲಿನ ಕೃತಿಯ ಹಿಂದಿ ಆವೃತ್ತಿ
**ಪುಟ** : ೨೧೩ **ಬೆಲೆ** : ರೂ. ೧೨೦
**ಕರ್ನಾಟಕ ನಿಲಯಂ ಟ್ರಸ್ಟ್,** ಪಾಂಡಿಚೇರಿ.

**ಸಸ್ತನಿಗಳು** (ಪ್ರಾಣಿಗಳ ಪರಿಚಯ)
ಸುರೇಶ ವೆಂ. ಕುಲಕರ್ಣಿ
**ಪುಟ** : ೧೭೪ **ಬೆಲೆ** : ರೂ. ೧೦೦

**ಪಾರಿತೋಷಕ** (ಮಕ್ಕಳ ನಾಟಕ)
ಆರ್. ಕೆ. ಶಾನುಭೋಗ
**ಪುಟ** : ೫೬ **ಬೆಲೆ** : ರೂ. ೩೫

**ಮೋಡ ರಾಜ** (ಮಕ್ಕಳ ನಾಟಕ) ಆರ್ಯ
**ಪುಟ** : ೪೮ **ಬೆಲೆ** : ರೂ. ೩೫

**ನೊಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿಗಳು : ವೈದ್ಯಶಾಸ್ತ್ರ**
(೧೯೦೧ – ೨೦೦೩) ಸುರೇಶ ವೆಂ. ಕುಲಕರ್ಣಿ
**ಪುಟ** : ೨೧೬ **ಬೆಲೆ** : ರೂ. ೧೨೦

**ನೊಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿಗಳು : ರಸಾಯನ ಶಾಸ್ತ್ರ**
(೧೯೦೧ – ೨೦೦೩) ಸುರೇಶ ವೆಂ. ಕುಲಕರ್ಣಿ
**ಪುಟ** : ೧೮೦ **ಬೆಲೆ** : ರೂ. ೧೨೦

**ನೊಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿಗಳು : ಭೌತಶಾಸ್ತ್ರ**
(೧೯೦೧ – ೨೦೦೩) ಸುರೇಶ ವೆಂ. ಕುಲಕರ್ಣಿ
**ಪುಟ** : ೨೦೮ **ಬೆಲೆ** : ರೂ. ೧೨೦

ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ಜಡಭರತ ಪ್ರಕಾಶನ,** ಲಕ್ಷ್ಮೀಭವನ, ಸುಭಾಸ ರೋಡ,
ಧಾರವಾಡ - ೫೮೦ ೦೦೧.

**ಸರಸಕ್ಕೆ ಸವಾಲ್** (ನಗೆಬರಹಗಳ ಸಂಗ್ರಹ)
ರಾಘವೇಂದ್ರ ಉಡುಪಿ
**ಪುಟ** : ೧೧೨ **ಬೆಲೆ** : ರೂ. ೪೦
**ಪುಸ್ತಕ ನಿಧಿ,** ಗಾವಳಿ, ಕುಂದಾಪುರ - ೫೭೬ ೨೧೦

**ಕಿಚಡಿ** (ಪದ್ಯ ಸಂಕಲನ) ತೋಟದ ಮನೆ ಚನ್ನಬಸವಯ್ಯ
**ಪುಟ** : ೫೬ **ಬೆಲೆ** : ರೂ. ೫೦
**ಹೊಂಬಾಳೆ ಪ್ರಕಾಶನ,** ಹುಳಿಯಾರು - ೫೭೨ ೨೧೮

**ಇದು ಅಮೆರಿಕ** (ಪ್ರವಾಸ ಕಥನ) ಸೀಯಾರ್ಕೆ
**ಪುಟ** : ೮೮ **ಬೆಲೆ** : ರೂ. ೩೫

**ಕಂಪ್ಯೂಟರ್** (ಮಕ್ಕಳಿಗೆ ಮಾಹಿತಿ ಸಾಹಿತ್ಯ)
ಬೇಂದ್ರೆ ಎನ್. ಮಂಜುನಾಥ
**ಪುಟ** : ೪೮ **ಬೆಲೆ** : ರೂ. ೨೦

**ಹಿಡಿಂಬನ ತೋಟ** (ಮಕ್ಕಳ ನಾಟಕ)
ಎನ್. ಶ್ರೀನಿವಾಸ ಉಡುಪ
**ಪುಟ** : ೪೮ **ಬೆಲೆ** : ರೂ. ೨೦

**ಜಾಹಿರಾತು ಮತ್ತು ಬಳಕೆದಾರರು** ವೈ. ಜಿ. ಮುರಳೀಧರ
**ಪುಟ** : ೪೮ **ಬೆಲೆ** : ರೂ. ೧೮

**ಇಲಿಗಳ ಪರಿಚಯ ನಿಮಗುಂಟೆ ?**
ಡಾ|| ಪಿ. ಶಿವರಾಮ ರೈ
**ಪುಟ** : ೯೬ **ಬೆಲೆ** : ರೂ. ೩೫

**ಸೊಳ್ಳೆಗಳು ಹರಡುವ ರೋಗಗಳು**
ಡಾ|| ಕರವೀರಪ್ರಭು ಕ್ಯಾಲಕೊಂಡ
**ಪುಟ** : ೭೫ **ಬೆಲೆ** : ರೂ. ೩೦

**ಕೃಷಿ ಘೋಷಣಾ ಪತ್ರ : ಹೊಸ ಪೀಠಿಕೆ**
ಡಾ|| ಬ್ರಹ್ಮದೇವ ಶರ್ಮಾ
**ಪುಟ** : ೪೮ **ಬೆಲೆ** : ರೂ. ೧೨

**ಶ್ರೀ ಸ್ವಾಮಿ ವಿವೇಕಾನಂದ ಹಿಂದು ಸನಾತನವಾದಿಯೆ ?**
ಸಂ : ಕೊ. ಚೆನ್ನಬಸಪ್ಪ
**ಪುಟ** : ೫೬ **ಬೆಲೆ** : ರೂ. ೧೨

ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್,
ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

# ಕ್ಯೂಬಾದತ್ತ ನೋಟ

ಪ್ರೊ॥ ಶಿವರಾಮಯ್ಯ

**ಕ್ಯೂ**ಬಾ ಕೇವಲ ೪೪,೨೧೮ ಚ.ಮೈ. ವಿಸ್ತೀರ್ಣವುಳ್ಳ ಒಂದು ಪುಟ್ಟ ದ್ವೀಪ ರಾಷ್ಟ್ರ. ಜಗತ್ತಿನ ಸಕ್ಕರೆಯ ಬಟ್ಟಲು ಎಂದು ಖ್ಯಾತಿ ಗಳಿಸಿರುವ ಇದು ಅಮೆರಿಕಕ್ಕೆ ಕೇವಲ ೯೦ ಮೈಲಿಗಳ ಫಾಸಲೆಯಲ್ಲಿದೆ. ಆದರೆ ಆ ಮಹಾನ್ ಶಕ್ತಿಶಾಲಿ ರಾಷ್ಟ್ರಕ್ಕೆ ಕಳೆದ ಅರ್ಧ ಶತಮಾನದಿಂದಲೂ ಸೆಡ್ಡು ಹೊಡೆದು ನಿಲ್ಲುವ ಮೂಲಕ ಸ್ವಾಭಿಮಾನದ ಸಂಕೇತವಾಗಿದೆ. ಆದ್ದರಿಂದ ಜಾಗತೀಕರಣವೆಂದರೆ ಅಮೆರಿಕೀಕರಣವಾಗುತ್ತಿರುವ ಇಂದಿನ ಸನ್ನಿವೇಶದಲ್ಲಿ ಕ್ಯೂಬಾದಿಂದ ಕಲಿಯಬೇಕಾದ್ದು ಬಹಳಷ್ಟು ಇದೆ. ಸೋವಿಯತ್ ರಷ್ಯಾದಂತಹ ವಿಶಾಲ ಕಮ್ಯೂನಿಸ್ಟ್ ಆಡಳಿತ ಕುಸಿದುಹೋದರೂ ಈ ಪುಟ್ಟ ದ್ವೀಪ ಹೇಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡುಬಂದಿತು ? ಇಲ್ಲಿ ಸಮಾಜವಾದ ಚಿರಾಯುವಾಗಿರುವುದಕ್ಕೆ ಏನು ಕಾರಣ ? ಇದಕ್ಕೆ ಮಾತ್ರ ಹೇಗೆ ಸಾಧ್ಯವಾಯಿತು ? ಇನ್ನುಳಿದ ರಾಷ್ಟ್ರಗಳೂ ಕೂಡ ಹೀಗೆ ಸ್ವಾಭಿಮಾನ ಸ್ವಾವಲಂಬನೆಯಿಂದ ಬಾಳಲು ಸಾಧ್ಯವಿಲ್ಲವೆ ? ಈ ಮುಂತಾದ ಪ್ರಶ್ನೆಗಳು ನಮ್ಮನ್ನು ಕಾಡುವುದು ಸಹಜ.

ಅದಕ್ಕಾಗಿ ಅದರ ಪೂರ್ವೋತ್ತರಗಳನ್ನು ಸ್ವಲ್ಪ ಅರಿಯುವುದು ಸೂಕ್ತ. ಕ್ಯೂಬಾ ಬಹುತೇಕ ವಿಶಾಲ ಕಣಿವೆಗಳಿಂದ ಕೂಡಿದ ನಾಡು. ಅಲ್ಲಿನ ಅಮೂಲ್ಯವಾದ ಮೈದಾನಗಳು ಕೃಷಿಗೆ ಅನುಕೂಲಕರ. ಅದರ ಕಡಲ ಕಿನಾರೆಯಲ್ಲಿ ಸುಮಾರು ೨೦೦ ಬಂದರುಗಳಿವೆ. ಸಾಗರೋಷ್ಣ ವಾಯುಗುಣವಿರುವ ಈ ನಾಡಿನಲ್ಲಿ ವರ್ಷಕ್ಕೆ ಸರಾಸರಿ ೫೪ ಅಂಗುಲ ಮಳೆ ಬೀಳುತ್ತದೆ. ಚಂಡಮಾರುತಗಳ ಹಾವಳಿ ಇದೆ. ಕಬ್ಬು, ಕಾಫಿ, ಕೋಕೊ, ಬಾಳೆ ಸಮೃದ್ಧ ಬೆಳೆಗಳು. ಸಕ್ಕರೆ ಉದ್ಯಮ ಇಲ್ಲಿನ ಮುಖ್ಯ ಆರ್ಥಿಕ ಚಟುವಟಿಕೆ. ಕಬ್ಬಿಣದ ಅದಿರು, ನಿಕ್ಕಲ್ ಮುಂತಾದ ಲೋಹಗಳು ದೊರೆಯುತ್ತವೆ. ಸರ್ವ ಋತು ರಸ್ತೆಗಳು, ರೈಲು ಮಾರ್ಗಗಳು ಸಂಪರ್ಕ ಕಲ್ಪಿಸಿವೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಕ್ಯೂಬಾ ಭೌಗೋಳಿಕವಾಗಿ ನೌಕಾ ಮತ್ತು ವಾಯು ಮಾರ್ಗಗಳ ನಾಭಿಯಂತಿದೆ. ಇದರ ರಾಜಧಾನಿ ಹವಾನ. ಭಾಷೆ ಸ್ಪ್ಯಾನಿಷ್.

ಕ್ಯೂಬಾದ ಇತಿಹಾಸದತ್ತ ಹೊರಳಿ ನೋಡಿದರೆ ಜಗತ್ತಿನ ಬೇರೆಷ್ಟೋ ರಾಷ್ಟ್ರಗಳಂತೆ ಇದೂ ಸಹ ಸ್ಪೇಯಿನಿನ ಒಂದು ವಸಾಹತುವಾಗಿ ಪಾಡುಪಟ್ಟಿದೆ. ಆದರೆ ಈ ವಸಾಹತು ದಬ್ಬಾಳಿಕೆ ಮತ್ತು ಲೂಟಿಯಿಂದ ಇದು ಹೇಗೆ ಸೆಣಸಾಡಿದೆ ಎಂಬುದು ವಿಚಾರಾರ್ಹ. ಕೊಲಂಬಸ್ ೧೪೯೨ರಲ್ಲಿ ಈ ದ್ವೀಪಕ್ಕೆ ಕಾಲಿಟ್ಟ. ಅವನ ಬೆನ್ನಿಗೆ ಶಸ್ತ್ರಗಳನ್ನು ಹಿಡಿದುಬಂದ ಸ್ಪೆಯಿನ್ ವ್ಯಾಪಾರಿ ಜನ ಅಲ್ಲಿನ ಮೂಲನಿವಾಸಿಗಳನ್ನು ನಿರ್ದಯವಾಗಿ ಕೊಂದು ಹಾಕಿದರು. ಅಳಿದುಳಿದವರೊಂದಿಗೆ ನೀಗ್ರೋಗಳನ್ನು ಹಿಡಿದುತಂದು ಕೃಷಿ ಕೆಲಸಕ್ಕೆ ದುಡಿಸಿದರು. ಸಕ್ಕರೆ, ತಂಬಾಕು, ಕಾಫಿ, ಹಣ್ಣುಹಂಪಲು ಸ್ಪೆಯಿನ್‌ಗೆ ರವಾನೆಯಾದವು. ವ್ಯಾಪಾರಿಗಳ ತಿಜೋರಿಗಳು ತುಂಬಿದವು.

ಹೀಗಿರುತ್ತ ೧೯ನೆಯ ಶತಮಾನದ ಅಂತ್ಯದ ವೇಳೆಗೆ ಕ್ಯೂಬನ್ನರು ವಸಾಹತು ನೊಗದಿಂದ ಕಳಚಿಕೊಳ್ಳಲು ಪ್ರಯತ್ನಿಸಿದರು. ಅಷ್ಟರಲ್ಲಿ ಅಮೆರಿಕನ್ನರು ಇಲ್ಲಿನ ಸಕ್ಕರೆ ವಹಿವಾಟನ್ನು ತಮ್ಮ ಕೈಗೆ ತೆಗೆದುಕೊಂಡಿದ್ದರು. ದೇಶೀಯರು ಅದನ್ನು ಪ್ರತಿಭಟಿಸಿದಾಗ ಅಮೆರಿಕದ ಯುದ್ಧ ನೌಕೆಗಳು ದ್ವೀಪವನ್ನು ಸುತ್ತುವರಿದವು. ಬಾಣಲೆಯಿಂದ ಬೆಂಕಿಗೆ ಬಿದ್ದಂತೆ ಸ್ಪೆಯಿನ್‌ನಿಂದ ಅಮೆರಿಕದ ವಶವಾಯಿತು ದ್ವೀಪ. ಅಮೆರಿಕದ ವರ್ತನೆ ಎಲ್ಲರಿಗೂ ತಿಳಿದ ವಿಚಾರವೇ. ಮೊದಲು ಅವರ ಬಹುರಾಷ್ಟ್ರೀಯ ಕಂಪನಿಗಳು ಸಂಪನ್ಮೂಲಗಳಿರುವ ದೇಶಗಳಿಗೆ ಬರುತ್ತವೆ. ಡಾಲರ್ ಲೆಕ್ಕದಲ್ಲಿ ಲಾಭವನ್ನು ದೋಚುತ್ತವೆ. ಅದನ್ನು ಪ್ರತಿಭಟಿಸಿದ ದೇಶಗಳ ಮೇಲೆ ಸೈನ್ಯವನ್ನು ನುಗ್ಗಿಸುವುದು, ಬಾಂಬ್‌ಗಳನ್ನು ಸುರಿಸುವುದು ಅವರ ಪರಿಪಾಠ. ಪ್ರಸ್ತುತ ಇರಾಕ್ ಅನುಭವಿಸುತ್ತಿರುವ ಸಂಕಷ್ಟ ಯಾರಿಗೆ ತಿಳಿದಿಲ್ಲ? ಹಿಂದೆ ಕ್ಯೂಬಾದ ಗತಿಯೂ ಹೀಗೇ ಆಯಿತು. ಇದೇ ಪ್ರಕಾರ ಯೂರೋಪಿನ ರಾಷ್ಟ್ರಗಳು ಹಿಂದೆ ಭಾರತ, ಆಲ್ಜೀರಿಯಾ, ಲಿಬಿಯಾ, ಚೀನಾ, ಫಿಲಿಪೀನ್ಸ್, ಪೆರು ಇತ್ಯಾದಿ ಬಡದೇಶಗಳ ಮೇಲೆ ಭೀಕರ ಯುದ್ಧ ನಡೆಸಿವೆ. ಎರಡನೇ ಮಹಾಯುದ್ಧದ ನಂತರ ಅಮೆರಿಕವು ಕೊರಿಯಾ, ವಿಯಟ್ನಾಂ, ಕಾಂಬೋಡಿಯಾ, ಇರಾನ್, ಕಾಂಗೋ, ಚಿಲಿ, ಪನಾಮ, ಆಫ್ಘಾನಿಸ್ತಾನ, ಹೈಟಿ, ಈಗ ಇರಾಕ್ – ಹೀಗೆ ತನ್ನ ಲಾಭದ ದರ ಏರಿಕೆಗಾಗಿ ಈ ರಾಷ್ಟ್ರಗಳ ಸಾರ್ವಭೌಮತೆಯ ಮೇಲೆ ದಾಳಿ ಮಾಡಿದೆ. ಈ ಅಂತರರಾಷ್ಟ್ರೀಯ ಗೂಳಿಯ ಎದುರು ಕ್ಯೂಬಾದಂತಹ ಪುಟ್ಟ ಮೊಲ ಎಷ್ಟು ದಿಟ್ಟವಾಗಿ ನಿಂತಿತು ಎಂಬುದೇ ಆಶ್ಚರ್ಯ !

ಅದು ಜಗಿದುಬಂದ ಹಾದಿ ರೋಚಕವೂ ದುರಂತಮಯವೂ ಆಗಿದೆ. ಸಕ್ಕರೆಯ ಉದ್ಯಮದ ಏಕಸ್ವಾಮ್ಯವನ್ನು ಹಿಡಿದುಕೊಂಡ ಅಮೆರಿಕ ೧೯೦೨ರಲ್ಲಿ ಮಿಲಿಟರಿ ಆಡಳಿತವನ್ನು ಕೊನೆಗೊಳಿಸಿ, ಚುನಾವಣೆಯ ನಾಟಕ ನಡೆಸಿ, ತನ್ನ ಕೈಗೊಂಬೆಯಾದ ಡೋಮೊಸ್ ಎಂಬ ಅಧ್ಯಕ್ಷನನ್ನು ಕೂರಿಸಿತು. ಜನ ಅವನನ್ನು ತಿರಸ್ಕರಿಸಿದರು.

**ಜಾಗತೀಕರಣವೆಂದರೆ ಅಮೆರಿಕೀಕರಣವಾಗುತ್ತಿರುವ ಇಂದಿನ ಸನ್ನಿವೇಶದಲ್ಲಿ ಕ್ಯೂಬಾದಿಂದ ಕಲಿಯಬೇಕಾದ್ದು ಬಹಳಷ್ಟು ಇದೆ. ಸೋವಿಯತ್ ರಷ್ಯಾದಂತಹ ವಿಶಾಲ ಕಮ್ಯೂನಿಸ್ಟ್ ಆಡಳಿತ ಕುಸಿದುಹೋದರೂ ಈ ಪುಟ್ಟ ದ್ವೀಪ ಹೇಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡುಬಂದಿತು ? ಇಲ್ಲಿ ಸಮಾಜವಾದ ಚಿರಾಯುವಾಗಿರುವುದಕ್ಕೆ ಏನು ಕಾರಣ ? ಇದಕ್ಕೆ ಮಾತ್ರ ಹೇಗೆ ಸಾಧ್ಯವಾಯಿತು ? ಇನ್ನುಳಿದ ರಾಷ್ಟ್ರಗಳೂ ಕೂಡ ಹೀಗೆ ಸ್ವಾಭಿಮಾನ ಸ್ವಾವಲಂಬನೆಯಿಂದ ಬಾಳಲು ಸಾಧ್ಯವಿಲ್ಲವೆ ? ಈ ಮುಂತಾದ ಪ್ರಶ್ನೆಗಳು ನಮ್ಮನ್ನು ಕಾಡುವುದು ಸಹಜ.**





೧೯೦೮ರಲ್ಲಿ ಜೋಸೆಫ್ ಗೋಮೆಜ್ ಎಂಬ ಇನ್ನೊಬ್ಬನು ಆಡಳಿತಕ್ಕೆ ಬಂದ. ಇವನ ಕಾಲಕ್ಕೆ ನೀಗ್ರೋ ಪೊಲಿಟಿಕಲ್ ಪಾರ್ಟಿ ಸ್ಥಾಪನೆಗೊಂಡು ಅಮೆರಿಕ ಮೂಗು ತೂರಿಸುವುದನ್ನು ಪ್ರತಿಭಟಿಸಿತು.

ಗೋಮೆಜ್ ತರುವಾಯ ಬಂದ ಮಾರಿಯೋ ಗ್ರೇಸಿಯು ಕೂಡ ಅಮೆರಿಕದ ಚೇಲಾನೇ. ಈ ವೇಳೆಗೆ ಮೊದಲ ಮಹಾಯುದ್ಧ ಆರಂಭವಾಯಿತು. ಸಕ್ಕರೆ ಉದ್ಯಮ ಕುಸಿಯಿತು. ಅಮೆರಿಕ ಆಗ ೫೦ ಲಕ್ಷ ಡಾಲರ್ ಸಾಲ ನೀಡಿ ಕ್ಯೂಬಾವನ್ನು ತನ್ನ ವಶದಲ್ಲಿಟ್ಟುಕೊಂಡಿತು. ಋಣಭಾರ ಹೊತ್ತವನು ಯಾವತ್ತೂ ಕೃತಜ್ಞನಾಗಿಯೇ ಇರಬೇಕಾಗುತ್ತದೆ. ೧೯೨೦ರಲ್ಲಿ ಅಮೆರಿಕ ಮತ್ತಷ್ಟು ಸಾಲದ ಹೊರೆಯನ್ನು ಅದರ ಮೇಲೆ ಹೇರಿ ತನ್ನ ನಿಯಂತ್ರಣವನ್ನು ಸಾಧಿಸಲು ಕ್ರಾಡರ್ ಎಂಬ ರಾಯಭಾರಿಯನ್ನು ನೇಮಿಸಿತು. ಜನರು ದಂಗೆ ಎದ್ದು ಕಂಡಕಂಡಲ್ಲಿ ಸಕ್ಕರೆ ಕಂಪನಿಗಳ ಮೇಲೆ ಧಾಳಿ ನಡೆಸಿದರು.



ಕಕ್ಷದಲ್ಲಿನ ಉಸಿರುಗಟ್ಟುವ ಆ ವಾತಾವರಣವೇ ಇವರಿಗೆ ಈ ಖಾಯಿಲೆ ತಂದಿರಬಹುದು!

೧೯೨೪ರಲ್ಲಿ ಗೋರ್ಡೆ ಮಚಾಡೀ ಎಂಬ ಮತ್ತೊಬ್ಬ ಅಧ್ಯಕ್ಷನಾದ. ಇವನ ಕಾಲಕ್ಕೆ ಅಮೆರಿಕದ ರಾಕ್ಷಸೀ ವರ್ತನೆ ಇನ್ನಷ್ಟು ಬಯಲಾಯಿತು. ಇವನ ಪ್ರತಿಸ್ಪರ್ಧಿಗಳನ್ನು ನಿರ್ನಾಮ ಮಾಡಲಾಯಿತು. ನಗರಗಳ ಹಾದಿಬೀದಿಗಳಲ್ಲಿ ಸುಮಾರು ೨೦,೦೦೦ ಶವಗಳು ಉರುಳಿದವು. ಕಡೆಗೆ ಸಶಸ್ತ್ರ ಹೋರಾಟಕ್ಕೆ ಕ್ಯೂಬನ್ನರು ಪಣತೊಟ್ಟರು. ಆಗ್ಗೆ ಬಟಿಸ್ಟಾ ಅಧಿಕಾರಕ್ಕೆ ಬಂದಿದ್ದ. ಫಿಡೆಲ್ ಕ್ಯಾಸ್ಟ್ರೋ ಹೋರಾಟದ ನೇತಾರನಾದ. ಅವನನ್ನು ಬಂಧಿಸಲಾಯಿತು. ಆದರೆ ಎರಡು ವರ್ಷಗಳ ಜೈಲು ವಾಸದಿಂದ ಬಿಡುಗಡೆಯಾದ ಕ್ಯಾಸ್ಟ್ರೋ ಮತ್ತು ಅವನ ಸಂಗಾತಿಗಳು ಭೂಗತರಾಗಿ ಮೆಕ್ಸಿಕೊ ಸೇರಿಕೊಂಡರು. ಆ ಗುಡ್ಡ ಗಾಡಿನಲ್ಲಿ ಗೆರಿಲ್ಲಾ ಯುದ್ಧದ ತರಬೇತಿ ಪಡೆದುಕೊಂಡರು. ಅವರ ಗುಪ್ತ ಸಂದೇಶಗಳು ಕ್ಯೂಬಾದ ಜನತೆಯಲ್ಲಿ ಕ್ರಾಂತಿಯ ಕಿಡಿ ಹಾರಿಸಿದವು. ಮಾರ್ಕ್ಸ್-ಲೆನಿನ್ ಸಮಾಜವಾದ ಪುರಸ್ಕೃತವಾಯಿತು. ಅದೇ ಕಾಲಕ್ಕೆ ಗ್ವಾಟೆಮಾಲದಲ್ಲಿ ಗೆರಿಲ್ಲಾ ಯುದ್ಧ ತರಬೇತಿ ಹೊಂದಿದ್ದ ಡಾ॥ ಚೆ ಗೆವಾರ ಬಂದು ಫಿಡೆಲ್ ಕ್ಯಾಸ್ಟ್ರೋನನ್ನು ಕೂಡಿಕೊಂಡ.

ಈ ಇಬ್ಬರ ನೇತೃತ್ವದಲ್ಲಿ ೮೨ ಜನ ಸಂಗಾತಿಗಳನ್ನೊಳಗೊಂಡ 'ಗ್ರಾನ್ಮಾ' ಎಂಬ ಯುದ್ಧ ನೌಕೆ ಕ್ಯೂಬಾದತ್ತ ಚಲಿಸಿತು. ಅಮೆರಿಕದ ನೌಕಾಪಡೆ ಅದರ ಮೇಲೆ ಗುಂಡಿನ ಮಳೆಗರೆಯಿತು. ಅನೇಕ ಜನ ಮಡಿದು ಅಳಿದುಳಿದವರು ದ್ವೀಪದ ಗುಡ್ಡಗಾಡಿನ ಗವಿ ಕಂದರಗಳಲ್ಲಿ ತಲೆ ಮರೆಸಿಕೊಂಡರು. ಆಮೇಲೆ ಅಲ್ಲಿಂದ ಅವರ ಗೆರಿಲ್ಲಾ ಯುದ್ಧ ಆರಂಭವಾಯಿತು. ಚೆ ಗೆವಾರ ಮತ್ತು ಕ್ಯಾಸ್ಟ್ರೋ ತಂಡಗಳು ಅಮೆರಿಕದ ಸೈನಿಕರ ನೀರಿಳಿಸುತ್ತಾ ಬಂದರು. ೧೯೫೬ರಲ್ಲಿ ಅಮೆರಿಕದ ಕೈಗೊಂಬೆಯಾಗಿದ್ದ ಬಟಿಸ್ಟಾನ ಮೇಲೆ ಯುದ್ಧ ಸಾರಿದರು. ಏಕಾಏಕಿ ಎರಗಿದ ಗೆರಿಲ್ಲಾಗಳ ಹೊಡೆತಕ್ಕೆ ಅವನ ಸೈನ್ಯ ಕಂಗೆಟ್ಟು ಹೋಯಿತು. ನಾಡಿನ ತುಂಬೆಲ್ಲಾ ಸಮಾಜವಾದದ ಕರಪತ್ರಗಳು ಹಂಚಲ್ಪಟ್ಟವು. ಕ್ಯೂಬಾದ ಜನಮನದಲ್ಲಿ ಅವು ಆತ್ಮಸ್ಥೈರ್ಯವನ್ನು ತುಂಬುತ್ತಿದ್ದವು. ಕ್ರಮೇಣ 'ಯಾಂಕಿ'ಗಳನ್ನು ಅಲ್ಲಿಂದ ಓಡಿಸಲು ಜನ ಸಿದ್ಧರಾದರು.

ಸತತ ಮೂರು ವರ್ಷಗಳ ಕಾಲ ಗೆರಿಲ್ಲಾ ಕದನ ನಡೆದು ಬಟಿಸ್ಟಾನ ಸರ್ಕಾರವನ್ನು ಮಣಿಸಿದರು. ೧೯೫೯ರಲ್ಲಿ ಫಿಡೆಲ್ ಕ್ಯಾಸ್ಟ್ರೋ ಸ್ವತಂತ್ರ ಕ್ಯೂಬಾದ ಅಧ್ಯಕ್ಷನಾದ. ಆತ ಇಂದಿಗೂ ಅದೇ ಪದವಿಯಲ್ಲಿ ಮುಂದುವರಿಯುತ್ತಿರುವುದೇ ಒಂದು ಪವಾಡ. ಆದರೆ ಅವನ ಸಂಗಾತಿ ಡಾ॥ ಚೆ ಗೆವಾರನನ್ನು ಲ್ಯಾಟಿನ್ ಅಮೆರಿಕದಲ್ಲಿ ಸೆರೆಹಿಡಿದ ಅಮೆರಿಕ ಸಿಐಎ ಗುಪ್ತದಳ ೧೯೬೭ರಲ್ಲಿ ಗುಂಡಿಕ್ಕಿ ಕೊಂದುಹಾಕಿತು.

ಕ್ಯೂಬಾದ ಇತಿಹಾಸ ಇದುವರೆಗೆ ಒಂದು ಹಂತದ್ದಾದರೆ, ಕ್ಯಾಸ್ಟ್ರೋ ಆಡಳಿತಾವಧಿಯ ನಂತರದ ದಿನಗಳದು ಮತ್ತೊಂದು ಹಂತದ್ದಾಗಿದೆ. ಅಮೆರಿಕ ಈವರೆಗೆ ಈತನ ಮೇಲೆ ಸುಮಾರು ೭೫ ಬಾರಿ ಪಿತೂರಿ ನಡೆಸಿ ಕೊಲ್ಲಲು ಪ್ರಯತ್ನಿಸಿ ವಿಫಲವಾಗಿದೆ. ಬಂಡವಾಳಿಗರ ನವಸಾಮ್ರಾಜ್ಯಶಾಹೀ ಅಮೆರಿಕ ಕ್ಯೂಬಾದ ಬಗ್ಗೆ ಇಲ್ಲಸಲ್ಲದ ಅಪಪ್ರಚಾರ ನಡೆಸಿದೆ. ಅದು ಭಯೋತ್ಪಾದಕರ, ಧರ್ಮ ವಿರೋಧಿಗಳ, ವೇಶ್ಯಾವಾಟಿಕೆಗಳ ನೆಲೆ ಎಂದು ಹೇಳಿದೆ. ಯಥಾಪ್ರಕಾರ ಅಮೆರಿಕದ ತುತ್ತೂರಿಗಳಂತಿರುವ ಸುದ್ದಿ ಮಾಧ್ಯಮಗಳು ಇದಕ್ಕೆ ತಾಳ ಹಾಕುತ್ತ ಬಂದವು. ಇವತ್ತಿಗೂ ಕೂಡ ಅಮೆರಿಕದ ಬಗ್ಗೆ ಸದಭಿಪ್ರಾಯ ಮೂಡಿಸುವುದರಲ್ಲಿ ಈ ಎಂಬೆಡೆಡ್ ಸುದ್ದಿ ಮಾಧ್ಯಮಗಳೇ ಬಹುಮಟ್ಟಿಗೆ ಕಾರಣವಾಗಿವೆ. ಅಮೆರಿಕವನ್ನು ಬಹುದೊಡ್ಡ ಪ್ರಜಾಸತ್ತಾತ್ಮಕ ರಾಷ್ಟ್ರವೆಂದು ಬಿಂಬಿಸಲು ಯತ್ನಿಸುತ್ತಿವೆ. ರಾಯಿಟರ್, ನ್ಯೂಯಾರ್ಕ್ ಟೈಮ್ಸ್, ಸಿಎನ್‌ಎನ್, ಬಿ.ಬಿ.ಸಿ. ಮುಂತಾದವುಗಳ ಕಾರ್ಯ ವೈಖರಿಯಿಂದ ಇದು ವೇದ್ಯವಾಗುತ್ತದೆ. ಅದಿರಲಿ.

ಮತ್ತೆ ಕ್ಯೂಬಾದತ್ತ ನೋಡಿದರೆ, ಅಮೆರಿಕ ಅದನ್ನು ನಡೆಸಿಕೊಂಡಿರುವ ಬಗ್ಗೆ ಹೇಸಿಗೆ ಹುಟ್ಟುತ್ತದೆ. ಆದರೂ ಆ ಪುಟ್ಟ ದ್ವೀಪ ರಾಷ್ಟ್ರ ತನ್ನೆಲ್ಲ ಒಳಹೊರಗಿನ ತಾಪತ್ರಯಗಳನ್ನು ನೀಗಿಕೊಂಡು ಜಾಗತಿಕ ರಾಷ್ಟ್ರಗಳ ನಡುವೆ ಛಲದಿಂದ ತಲೆ ಎತ್ತಿ ನಿಂತಿರುವುದು ಸೋಜಿಗದ ಸಂಗತಿಯಾಗಿದೆ. ಯುದ್ಧ ಕಣದಲ್ಲಿ ಬಿಲಗಳನ್ನು ಮೊದಲೆ ತೋಡಿಕೊಂಡಿದ್ದ ಇಲಿ ತನ್ನ ವೈರಿ ಹುಲಿಗೆ ಕೀಟಲೆ ಕೊಟ್ಟು ಮಣಿಸಿತಂತೆ. ಆ ಪ್ರಕಾರ ಕ್ಯೂಬಾ ಅಮೆರಿಕದೊಂದಿಗೆ ಸೆಣಸಾಡುತ್ತಲೇ ಉಳಿದುಕೊಂಡುಬಂದಿದೆ. ಅಲ್ಲದೆ ಜನರ ಆರೋಗ್ಯ, ಶಿಕ್ಷಣ, ಕೃಷಿ ಕ್ಷೇತ್ರಗಳ ಅಭಿವೃದ್ಧಿ – ಇತ್ಯಾದಿಗಳನ್ನೂ ಸಾಧಿಸಿದೆ. ೧೯೫೯ರಲ್ಲಿಯೇ ಸುಮಾರು ೬೦ ಸಾವಿರ ಎಕರೆ ಜಮೀನನ್ನು ಸುಮಾರು ೨೦ ಸಾವಿರ ಕುಟುಂಬಗಳಿಗೆ ಹಂಚಿತು. ಅಮೆರಿಕದ ಡಾಲರ್ ತನ್ನ ಪ್ರಥಮ ಶತ್ರುವೆಂದು ಮನವರಿಕೆ ಮಾಡಿಕೊಂಡಿತು. ಅದರ ಆರ್ಥಿಕ ದಿಗ್ಬಂಧನವು ದೇಶದ ಜನರನ್ನು ಸಾವಿನ ದವಡೆಗೆ ದೂಡಿತು. ಸಾವಿರಾರು ಮಂದಿ ತಾಯಂದಿರು ಮಕ್ಕಳು ಹಸಿವಿನಿಂದ ಸತ್ತರು. ಆದ್ದರಿಂದ ಆಹಾರ ಸ್ವಾವಲಂಬನೆಗಾಗಿ ಕಬ್ಬಿಗೆ ಪರ್ಯಾಯ ಬೆಳೆ ಬೆಳೆಯಲಾಯಿತು. ಆಗ ಸಕ್ಕರೆ ಕಂಪನಿಗಳಿಗೆ ಆಸನ ಕಂಪ ಉಂಟಾಯಿತು. ಅಮೆರಿಕದ ಬಾಂಬ್ ಧಾಳಿ ಆರಂಭವಾಯಿತು. ಆದರೂ ಛಲಬಿಡದ ಸ್ವಾಭಿಮಾನಿ ಫಿಡೆಲ್ ಕ್ಯಾಸ್ಟ್ರೋ ಗೋಮಾಳಗಳನ್ನು ಹಂಚಿ ಹಸಿರುಕ್ರಾಂತಿಗೆ ಎಡೆಮಾಡಿದರು.

ಆದರೂ ಸುಧಾರಿಸಿಕೊಳ್ಳಲಾಗಲಿಲ್ಲ. ಇಂಥ ಆಪತ್ಕಾಲದಲ್ಲಿ ರಷ್ಯಾ ಚೀನಾ ದೇಶಗಳು ಕ್ಯೂಬಾದ ಸಕ್ಕರೆಯನ್ನು ಕೊಳ್ಳಲು ಮುಂದೆ ಬಂದವು. ಸರ್ಕಾರ ಅಮೆರಿಕದ ಸಕ್ಕರೆ ಕಂಪನಿಗಳನ್ನು ರಾಷ್ಟ್ರೀಕರಣಗೊಳಿಸಿತು. ಶಾಲಾ-ಕಾಲೇಜು ವಿದ್ಯಾರ್ಥಿಗಳು ವಿರಾಮವಿಲ್ಲದೆ ಹೊಲಗದ್ದೆಗಳಲ್ಲಿ ದುಡಿದರು. ಕ್ಯಾಂಡಲ್ ಬೆಳಕಿನಲ್ಲಿ ವಯಸ್ಕರ ಶಿಕ್ಷಣ ಶಾಲೆಗಳು ನಡೆದವು. ಆದರೂ ಸೈರಿಸದ ಅಮೆರಿಕ ಕ್ಯೂಬಾದ ಮೇಲೆ ಬಾಂಬ್ ಸುರಿಸಿ ಮಾರಣ ಹೋಮ ಮಾಡುತ್ತ ಹೋಯಿತು. ಕಡೆಗೆ ಚೀನಾ, ರಷ್ಯಾ ಮುಂತಾದ ಕಡೆ ಇದ್ದ ವಿದೇಶಿ ಜನಪರ ಸಂಘಟನೆಗಳು ಅಮೆರಿಕದ ವರ್ತನೆಯನ್ನು ಹೊರಜಗತ್ತಿಗೆ ಪರಿಚಯಿಸಿದವು. ಆಗ ಅಂತರರಾಷ್ಟ್ರೀಯ ಸಮೂಹಗಳು ಎಚ್ಚೆತ್ತುಕೊಂಡು ನೆರವಿಗೆ ಧಾವಿಸಿದವು. ಅಮೆರಿಕದ ಸೈನಿಕರ ಅಡ್ಡಿ ಆತಂಕಗಳನ್ನು ಲೆಕ್ಕಿಸದೆ, ಅವರಿಗೆ ಛೀಮಾರಿ ಹಾಕುತ್ತ ತನ್ನ ಕೈಲಾದ ಸಹಾಯ ಮಾಡುವುದಕ್ಕೆ ಸ್ವತಃ ಅಮೆರಿಕದ ಕೆಲವು ಸಂಘಟನೆಗಳು ಟೊಂಕಕಟ್ಟಿ ನಿಂತವು. ಜಾಥಾಗಳು ನಡೆದವು. ಕಡೆಗೆ ಅಗತ್ಯ ವಸ್ತುಗಳು ಕ್ಯೂಬಾದ ನೆರವಿಗೆ ರವಾನೆಗೊಂಡವು. ಜಗತ್ತಿನ ನಾನಾ ಕಡೆಯಿಂದ ಅನುಕಂಪದ ಅಲೆ, ನೆರವಿನ ಹಸ್ತಗಳು ಮೂಡಿಬಂದವು. ಅಂತೂ ಸಾವಿನ ಅಗ್ನಿಕುಂಡದಿಂದ ಕ್ಯೂಬಾ ಸದ್ಯ ಪಾರಾಯಿತು.

ವಿಶ್ವಸಂಸ್ಥೆಗೆ ೫೦ ವರ್ಷಗಳು ತುಂಬಿದಾಗ ಕ್ಯಾಸ್ಟ್ರೋ ಅಮೆರಿಕಕ್ಕೆ ಬಾರದಂತೆ ವೀಸಾ ತಡೆಹಿಡಿಯಿತು. ಆದರೆ ಸುತ್ತಮುತ್ತಲ ರಾಷ್ಟ್ರಗಳ ಒತ್ತಡಕ್ಕೆ ಮಣಿದು ವೀಸಾ ನೀಡಿತು. ವಿಶ್ವ ಸಂಸ್ಥೆಯನ್ನು ಉದ್ದೇಶಿಸಿ ಕ್ಯಾಸ್ಟ್ರೋ "ಅಮೆರಿಕದ ಆರ್ಥಿಕ ದಿಗ್ಬಂಧನಗಳೂ ಸದ್ದಿಲ್ಲದ ಅಣು ಬಾಂಬುಗಳೂ ಬಡದೇಶಗಳ ಜನರನ್ನು ಜೀವಂತ ಸಮಾಧಿ ಮಾಡುತ್ತಿವೆ" ಎಂದು ಸಖೇದದಿಂದ ಎಚ್ಚರಿಸಿದರು. ಅವರ ಮಾತುಗಳು ಅಮೆರಿಕದ ಗಲ್ಲಿಗಲ್ಲಿಗಳಲ್ಲಿ ಪ್ರತಿಧ್ವನಿಸಿದವು. ಅಧ್ಯಕ್ಷ ಕ್ಲಿಂಟನ್ ಕಡೆಗಾಣಿಸಿದರೂ ಅಮೆರಿಕದ ನಾಗರಿಕರು ಫಿಡೆಲ್ ಕ್ಯಾಸ್ಟ್ರೋನನ್ನು ಕರೆದು ಸನ್ಮಾಸಿದರು.

ಹೀಗೆ ಹೆಜ್ಜೆಹೆಜ್ಜೆಗೂ ಅಮೆರಿಕದ ವಿರುದ್ಧ ಕ್ಯೂಬಾ ಎದೆಸೆಟೆದು ನಿಂತಿದೆ, ಸ್ವಾಭಿಮಾನ ಮತ್ತು ಛಲವನ್ನು ಮೆರೆದಿದೆ. ಅಮೆರಿಕವೆಂಬ ದೈತ್ಯ ರಾಕ್ಷಸನನ್ನು ವಿಯಟ್ನಾಮೀ ಮಿಡತೆಗಳು ಹೇಗೆ ಮಣಿಸಿ ಹಿಮ್ಮೆಟ್ಟಿಸಿದವೋ ಹಾಗೆಯೇ ಕ್ಯೂಬಾದ ಸಿಹಿ ಕಬ್ಬಿನ ಮೊಲಗಳು ಕೂಡ ಜಿಗಿಯುತ್ತ ಹಿಮ್ಮೆಟ್ಟಿಸಿ ನಿಂತಿವೆ. ಆದ್ದರಿಂದ ಕ್ಯೂಬಾದ ಇತಿಹಾಸ ಜಾಗತಿಕ ಜಗತ್ತಿನ ಒಂದು ವೀರಗಾಥೆಯಂತಿದೆ.

ಇಷ್ಟೆಲ್ಲ ಇಲ್ಲಿ ಹೇಳಿದುದರ ಕಾರಣ ಇಷ್ಟೇ. ಹಲಗೆ, ಬಳಪ ಮೊದಲುಗೊಂಡು ಹೈಟೆಕ್ ರೋಡು, ನದಿ ಜೋಡಣೆವರೆಗೆ ಎಲ್ಲಕ್ಕೂ ವಿಶ್ವಬ್ಯಾಂಕಿಗೆ, ಡಬ್ಲ್ಯೂ.ಟಿ.ಓ. ಕಡೆಗೆ ಕೈಚಾಚುತ್ತ ಸ್ವಾಭಿಮಾನವನ್ನು ಹರಾಜು ಹಾಕುತ್ತಿರುವ ಭಾರತದಂತಹ ವರ್ಧಮಾನಶೀಲ ರಾಷ್ಟ್ರಗಳು ಕ್ಯೂಬಾದಿಂದ ಕಲಿಯುವುದು ಬಹಳಷ್ಟಿದೆ ನೋಡಿ – ಎಂಬುದನ್ನು ಸೂಚಿಸುವ ಸಲುವಾಗಿ ಮಾತ್ರ. ಬಡ ದೇಶಗಳು ತಂತಮ್ಮ ಸಂಪನ್ಮೂಲಗಳನ್ನು ಊರ್ಜಿತಗೊಳಿಸಿಕೊಂಡು ಇನ್ನಾದರೂ ಸ್ವಾವಲಂಬನೆಯನ್ನು ಸಾಧಿಸದಿದ್ದರೆ ನವಸಾಮ್ರಾಜ್ಯಶಾಹಿಗಳು ಸದ್ಯದಲ್ಲಿಯೇ ನಮ್ಮನ್ನೆಲ್ಲಾ ಮುಕ್ಕಿಬಿಡುತ್ತಾರೆ, ಅಷ್ಟೇ.

**ಪ್ರೊ॥ ಶಿವರಾಮಯ್ಯ**

ನಂ. ೧೭೨, ೨ನೇ ಅಡ್ಡರಸ್ತೆ, ಟೀಚರ್ಸ್ ಕಾಲೊನಿ, ನಾಗರಭಾವಿ, ಬೆಂಗಳೂರು - ೫೬೦ ೦೭೨

ಎಸ್. ಬಿ. ಬಿರಾದಾರ

# ಕೃಷ್ಣಾ ಮೇಲ್ದಂಡೆ ಯೋಜನೆ ಮುಳುಗಡೆಯ ತಲ್ಲಣಗಳು

ಅಭಿವೃದ್ಧಿಯ ಹಾದಿಯಲ್ಲಿರುವ ಯಾವುದೇ ರಾಷ್ಟ್ರ ತನ್ನ ವ್ಯಾಪ್ತಿಯಲ್ಲಿರುವ ನೆಲ, ಜಲ ಹಾಗೂ ಮಾನವ ಸಂಪನ್ಮೂಲಗಳನ್ನು ಬಳಸಿಕೊಳ್ಳುವುದು ಅನಿವಾರ್ಯ. ಅಭಿವೃದ್ಧಿಗೆ ಬೇಕಾಗುವ ಮೂಲಭೂತ ಸೌಕರ್ಯಗಳಾದ ವಿದ್ಯುಚ್ಛಕ್ತಿ, ರಸ್ತೆ, ಸಾರಿಗೆ, ನೀರಾವರಿ, ಉದ್ಯಾನವನ, ನೌಕಾನೆಲೆ ಹಾಗೂ ಉದ್ದಿಮೆಗಳ ಸ್ಥಾಪನೆಗಾಗಿ ಸರಕಾರ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುತ್ತಿದೆ. ಶತಶತಮಾನಗಳಿಂದಲೂ ಒಂದು ಪ್ರದೇಶದಲ್ಲಿ ನೆಲೆಸಿದ ಜನರನ್ನು ಅವರ ಮೂಲಸ್ಥಳದಿಂದ ಸ್ಥಳಾಂತರಗೊಳಿಸುವುದು ಒಂದು ಜಟಿಲವಾದ ಸಮಸ್ಯೆ. ಅದು ಆ ಜನರ ಸಾಮಾಜಿಕ ಸಂಘಟನೆ, ಕೌಟುಂಬಿಕ ಪದ್ಧತಿ, ಜೀವನಶೈಲಿ, ಜೀವನೋಪಾಯ ಹಾಗೂ ಸ್ಥಾಪಿತ ಆಚರಣೆಗಳ ಮೇಲೆ ವ್ಯಾಪಕವಾದ ಪರಿಣಾಮವನ್ನುಂಟುಮಾಡುತ್ತದೆ.

**ಭಾರತದಲ್ಲಿ ಅಣೆಕಟ್ಟು ನಿರ್ಮಾಣ**

ಅಣೆಕಟ್ಟು ನಿರ್ಮಾಣದಲ್ಲಿ ಭಾರತವು ವಿಶ್ವದಲ್ಲಿ ಮೂರನೆಯ ಸ್ಥಾನ ಪಡೆದಿದೆ. ಜಗತ್ತಿನ ೪೦% ಬೃಹತ್ ಅಣೆಕಟ್ಟುಗಳು ಭಾರತದಲ್ಲಿಯೇ ನಿರ್ಮಿಸಲ್ಪಟ್ಟಿವೆ. ಭಾರತದಲ್ಲಿ ಇದುವರೆಗೆ ೩೬೦೦ ಅಣೆಕಟ್ಟುಗಳನ್ನು ನಿರ್ಮಿಸಲಾಗಿದೆ. ಇದು ಹೆಗ್ಗಳಿಕೆಯ ವಿಷಯವೇನಲ್ಲ. ಏಕೆಂದರೆ ಈ ಅಣೆಕಟ್ಟುಗಳ ನಿರ್ಮಾಣದಿಂದಾಗಿ ಇದುವರೆಗೂ ೫ ಕೋಟಿ ೬೦ ಲಕ್ಷ ಜನ ನಿರ್ವಸಿತರಾಗಿದ್ದಾರೆ. ಈ ರೀತಿ ಹೊಲ ಮನೆಗಳನ್ನು ಕಳೆದುಕೊಂಡು ಸಂತ್ರಸ್ತರಾದವರಲ್ಲಿ ೬೦% ಜನ ದಲಿತರು ಹಾಗೂ ಆದಿವಾಸಿಗಳು. ಈ ದೇಶದ ಜನಸಂಖ್ಯೆಯಲ್ಲಿ ದಲಿತರು ಹಾಗೂ ಆದಿವಾಸಿಗಳು ಪ್ರತಿಶತ ೨೫ರಷ್ಟಿದ್ದರೂ ಅಭಿವೃದ್ಧಿ ಯೋಜನೆಗೆ ಬಲಿಯಾಗುವವರಲ್ಲಿ ಇವರದೇ ಸಿಂಹಪಾಲು. ದೇಶದ ಅಭಿವೃದ್ಧಿಗಾಗಿ ತಮ್ಮ ನೆಲೆ ಕಳೆದುಕೊಂಡ ಜನ ಇದುವರೆಗೂ ತಾವು ಆಶ್ರಯಿಸಿದ ಜೀವನೋಪಾಯವನ್ನು, ಅದಕ್ಕೆ ಸಂಬಂಧಿಸಿದ ಕಲೆ, ಕೌಶಲ್ಯತೆ ಹಾಗೂ ನಂಬುಗೆಗಳನ್ನು ಕಳೆದುಕೊಂಡು ಕಂಗಾಲಾಗಿದ್ದಾರೆ. ಕೈಯಲ್ಲಿದ್ದ ಕೆಲಸವನ್ನು ಕಳೆದುಕೊಂಡು ಬೇರೊಂದು ಕೆಲಸ ಮಾಡಲಾಗದ್ದಕ್ಕೆ ನಿರುದ್ಯೋಗಿಗಳಾಗಿದ್ದಾರೆ. ಆದರೂ ಅವರಲ್ಲಿ ಕೆಲವರು ಶಾರೀರಿಕ ಶ್ರಮದ ಕೂಲಿಕಾರರಾಗಿ ದುಡಿಯುತ್ತ ಅರೆ-ಕೊರೆಯ ಜೀವನ ನಡೆಸುತ್ತಿದ್ದಾರೆ. ಕೆಲವರು ಸಾಯಲಾರದ್ದಕ್ಕೆ ಬದುಕಿದ್ದಾರೆ. ದೇಶದ ಅಭಿವೃದ್ಧಿ ಯೋಜನೆಗಳು ಈ ಜನರನ್ನು ಇಂಥ ಸ್ಥಿತಿಗೆ ತಳ್ಳುತ್ತವೆಂದು ಅವರು ನಿರೀಕ್ಷಿಸಿರಲಿಲ್ಲ. ಅಭಿವೃದ್ಧಿಯ ಯೋಜನೆಗಳಿಗೆ ತ್ಯಾಗ ಮಾಡುವವರು ಒಂದು ಭಾಗದ ಜನವಾದರೆ, ಈ ಯೋಜನೆಗಳ ಫಲ ಅನುಭವಿಸುವವರು ಇನ್ನೊಂದು ಭಾಗದ ಜನ. ಪರಿಣಾಮಗಳು ಹೀಗಿದ್ದಾಗ ನಾವು ಅಭಿವೃದ್ಧಿಯ ಪಥವನ್ನೇ ಪ್ರಶ್ನಿಸಬೇಕಾಗುತ್ತದೆ. ಅಭಿವೃದ್ಧಿಯು ಪ್ರಗತಿಯ ಪಥವನ್ನು ತುಳಿಯಬೇಕೇ ವಿನಃ ಪತನದ ಪಥವನ್ನಲ್ಲ.

**ಅಣೆಕಟ್ಟು ಅಧ್ಯಯನದ ವಿಶ್ವಸಮಿತಿ**

ವಿಶ್ವದ ಬೃಹತ್ ಅಣೆಕಟ್ಟುಗಳ ಕಾರ್ಯನಿರ್ವಹಣೆಯ ಸಾಧಕ-ಬಾಧಕಗಳನ್ನು ಕುರಿತು ಅಧ್ಯಯನ ಮಾಡಲು ದಕ್ಷಿಣ ಆಫ್ರಿಕೆಯ ಶಿಕ್ಷಣ ಸಚಿವ ಪ್ರೊ. ಕಾದರ್ ಅಸ್ಮಾಲ್‌ರ ನೇತೃತ್ವದಲ್ಲಿ ''ವರ್ಲ್ಡ್ ಕಮಿಶನ್ ಆನ್ ಡ್ಯಾಮ್ಸ್'' (World Commission on Dams) ಎಂಬ ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯಲ್ಲಿ ಭಾರತದ ''ನರ್ಮದಾ ಬಚಾವೋ ಆಂದೋಳನ''ದ ನಾಯಕಿ ಹಾಗೂ ಬೃಹತ್ ಅಣೆಕಟ್ಟುಗಳನ್ನು ವಿರೋಧಿಸುತ್ತಿರುವ ಮೇಧಾ ಪಾಟ್ಕರ್‌ರೂ ಸೇರಿದಂತೆ ವಿವಿಧ ದೇಶ ಹಾಗೂ ಕ್ಷೇತ್ರಗಳಿಂದ ಆಯ್ದ ಒಟ್ಟು ೧೨ ಜನ ಸ್ವತಂತ್ರ ಸದಸ್ಯರಿದ್ದಾರೆ. ಜಗತ್ತಿನ ೪೫,೦೦೦ ಬೃಹತ್ ಅಣೆಕಟ್ಟುಗಳ ಪೈಕಿ ಪ್ರಾತಿನಿಧಿಕವಾಗಿ ೧೦೦೦ ಅಣೆಕಟ್ಟುಗಳ ಕಾರ್ಯ ನಿರ್ವಹಣೆಯನ್ನು ಅಧ್ಯಯನ ಮಾಡಿ ವರದಿ ಸಲ್ಲಿಸಲಾಗಿದೆ. ಈ ವರದಿಯಲ್ಲಿ ಬೃಹತ್ ಅಣೆಕಟ್ಟುಗಳ ನಿರ್ಮಾಣದಿಂದಾಗಿ ಪರಿಸರದ ಮೇಲೆ ವಿಪರೀತ (೬೭% ಪರಿಣಾಮ ಹಾನಿಕಾರಕವೆಂದು ದಾಖಲೆಗೊಂಡಿದೆ) ದುಷ್ಪರಿಣಾಮವುಂಟಾಗುವುದೆಂದು ಸೂಚಿಸಲಾಗಿದೆ. ವಿಶ್ವದಾದ್ಯಂತ ಬೃಹತ್ ಅಣೆಕಟ್ಟುಗಳಿಂದಾಗಿ ಸುಮಾರು ೧೨%ರಿಂದ ೧೬% ಆಹಾರೋತ್ಪಾದನೆ ಹೆಚ್ಚಾಗಿದೆ ಹಾಗೂ ೧೯% ವಿದ್ಯುಚ್ಛಕ್ತಿ ಪೂರೈಸಲಾಗುತ್ತಿದೆ. ಆದರೆ ಈ ಅಣೆಕಟ್ಟುಗಳ ಹಿನ್ನೀರಿನ ವ್ಯಾಪ್ತಿಯಲ್ಲಿಯ ಜನರು ತಮ್ಮ ಆಸ್ತಿ ಪಾಸ್ತಿಗಳನ್ನು ಕಳೆದುಕೊಂಡು ಅಪಾರವಾದ ಕಷ್ಟ ಕಾರ್ಪಣ್ಯಗಳಿಗೆ ಬಲಿಯಾಗಿದ್ದಾರೆ.

**ಕೃಷ್ಣಾ ಮೇಲ್ದಂಡೆ ಯೋಜನೆ**

ಕರ್ನಾಟಕ ರಾಜ್ಯದಲ್ಲಿಯ ಕೃಷ್ಣಾ ಮೇಲ್ದಂಡೆ ಯೋಜನೆಯು ಜಗತ್ತಿನಲ್ಲಿಯೇ ದೊಡ್ಡದಾದ ನೀರಾವರಿ ಯೋಜನೆಯಾಗಿದ್ದು ಇದೀಗ ಅಣೆಕಟ್ಟು ನಿರ್ಮಾಣ ಪೂರ್ತಿಗೊಂಡು ನೀರು ಕಾಲುವೆಗಳ ಮೂಲಕ ಹರಿಯುತ್ತಿದೆ. ನರ್ಮದಾ ನದಿಯ ಮೇಲೆ ನಿರ್ಮಾಣಗೊಳ್ಳುತ್ತಿರುವ ಸರ್ದಾರ್ ಸರೋವರ ಯೋಜನೆಗಿಂತಲೂ ದೊಡ್ಡದಾದ ಕೃಷ್ಣಾ ಮೇಲ್ದಂಡೆ ಯೋಜನೆಯು

ನಿರ್ಮಾಣ ಕಾರ್ಯ ೩೮ ವರ್ಷಗಳ ಹಿಂದೆ ಶ್ರೀ ಲಾಲ್ ಬಹಾದೂರ್ ಶಾಸ್ತ್ರಿಯವರಿಂದ ಉದ್ಘಾಟಿಸಲ್ಪಟ್ಟಿತು. ಕೃಷ್ಣಾ ಮೇಲ್ದಂಡೆ ಯೋಜನೆಯ ಅಡಿಯಲ್ಲಿ ನಾರಾಯಣಪುರ್ ಹಾಗೂ ಆಲಮಟ್ಟಿ ಎಂಬ ಎರಡು ಸ್ಥಳಗಳಲ್ಲಿ ಜಲಾಶಯಗಳು ನಿರ್ಮಾಣಗೊಂಡಿದ್ದು ಈ ಎರಡೂ ಜಲಾಶಯಗಳ ಹಿನ್ನೀರಿನ ಒಟ್ಟು ೨೦೧ ಹಳ್ಳಿಗಳು ಹಾಗೂ ಒಂದು ನಗರ (ಬಾಗಲಕೋಟೆ)ದ ಕೆಲವು ಭಾಗಗಳು ಮುಳುಗಡೆಯಾಗಿವೆ. ಆಲಮಟ್ಟಿ ಅಣೆಕಟ್ಟಿನಲ್ಲಿ ೫೧೯ ಮೀಟರ್‌ವರೆಗೆ ನೀರು ಸಂಗ್ರಹವಾಗಿದ್ದು ಬಾಗಲಕೋಟೆ ನಗರವು ಈಗ ಅರ್ಧದಷ್ಟು ಜಲಾವೃತವಾಗಿದೆ. ಮುಳುಗಡೆಯಾದ ಭಾಗದ ಈ ಊರಿನ ಜನರು ನವನಗರಕ್ಕೆ ಸ್ಥಳಾಂತರ ಗೊಂಡಿದ್ದಾರೆ. ನೀರಿನ ಅಂಚಿನಲ್ಲಿಯ ಇನ್ನೂ ಅರ್ಧದಷ್ಟು ಜನ ಹಳೆಯ ಬಾಗಲಕೋಟೆ ಯಲ್ಲಿಯೇ ನೆಲೆಸಿದ್ದು ಜಲಮಾಲಿನ್ಯದಿಂದಾಗಿ ಆರೋಗ್ಯದ ಸಮಸ್ಯೆಗಳನ್ನೆದುರಿಸುತ್ತಿದ್ದಾರೆ. ಅಣೆಕಟ್ಟಿನ ಹಿನ್ನೀರಿನಲ್ಲಿ ೮೦,೦೦೦ ಕುಟುಂಬಗಳು ಹಾಗೂ ಕಾಲುವೆ ನಿರ್ಮಾಣದಿಂದಾಗಿ ೨೦,೦೦೦ ಕುಟುಂಬಗಳು ಹೀಗೆ ಒಟ್ಟು ಒಂದು ಲಕ್ಷ ಕುಟುಂಬಗಳು (ಸುಮಾರು ೫ ಲಕ್ಷ ಜನಸಂಖ್ಯೆ) ತಮ್ಮ ಆಸ್ತಿ-ಪಾಸ್ತಿಗಳನ್ನು ಕಳೆದುಕೊಂಡು ನಿರ್ಗತಿಕರಾಗಿದ್ದಾರೆ. ಹೊಲ-ಮನೆ ಗಳನ್ನು ಕಳೆದುಕೊಂಡ ಜನರಿಗೆ ವಿವಿಧ ಹಂತಗಳಲ್ಲಿ ಮಾರುಕಟ್ಟೆಯ ದರದಲ್ಲಿ ಪರಿಹಾರ ಧನವನ್ನು, ಆಕರ್ಷಕ ಪುನರ್ವಸತಿ ಪ್ಯಾಕೇಜನ್ನು ಕೊಡಲಾಗಿದೆ ಎಂಬ ಸಾಂತ್ವನದ ನುಡಿ ಅಧಿಕಾರಿವರ್ಗದವರಿಂದ ಕೇಳಿಬರುತ್ತದೆ. ಆದರೂ ಪುನರ್ವಸತಿ ಕೇಂದ್ರಗಳಿಗೆ ಹೋಗಿ ನೋಡಿದಾಗ ಅಲ್ಲಿ ತೀರಾ ವ್ಯತಿರಿಕ್ತವಾದ ಚಿತ್ರಣ ಕಂಡುಬರುತ್ತದೆ. ನಗರದಲ್ಲಿಯ ಬಾಡಿಗೆ ದಾರರು, ವಲಸೆಗಾರರು ಹಾಗೂ ಪುನರ್ವಸತಿ ಪರಿಹಾರಧನವನ್ನು ಕೊಟ್ಟಾಗ್ಯೂ ನೆಲೆಸಲು ಪರ್ಯಾಯ ವ್ಯವಸ್ಥೆ ಮಾಡಿಕೊಳ್ಳಲಾಗದವರು ನವನಗರದಲ್ಲಿಯ ತಗಡಿನ ಆಶ್ರಯವನ್ನು ಹೊಂದಿದ್ದ ೧೦'x೨೦' ಪೂಟು ಅಳತೆಯ ೪೦ ಮನೆಗಳ ಒಂದೊಂದು ಬ್ಲಾಕ್‌ಗಳನ್ನು ನಿರ್ಮಿಸ ಲಾಗಿದ್ದು ಇಲ್ಲಿ ಇಂಥ ಅನೇಕ ಕುಟುಂಬಗಳು ಆಶ್ರಯ ಪಡೆದಿವೆ. ಈ ಕುಟುಂಬಗಳಿಗೆ ತಿಂಗಳಿಗೆ ಬೇಕಾಗುವ ದಿನಸಿ ಪದಾರ್ಥಗಳು ಸರಕಾರದಿಂದ ಉಚಿತವಾಗಿ ಪೂರೈಕೆಯಾಗುತ್ತಿವೆ. ತಗಡಿನ ಮನೆಗಳು ನಿರಾಶ್ರಿತರಿಗೆ ಮಾಡಿದ ಒಂದು ತಾತ್ಕಾಲಿಕ ವ್ಯವಸ್ಥೆ. ಆದರೆ ಇಲ್ಲಿಗೆ ಬಂದ ಬಹುತೇಕ ಜನ ಇಲ್ಲಿಯೇ ಖಾಯಂ ಆಗಿ ಉಳಿದುಕೊಂಡಿರುವುದು ದುರದೃಷ್ಟಕರ.

**ಹುಟ್ಟಿದೂರಿನಿಂದ ಅಪರಿಚಿತ ಸ್ಥಳಕ್ಕೆ**

ಗ್ರಾಮೀಣ ಆಸ್ತಿ ಹಾಗೂ ಅಸ್ಥಿ ಎರಡೂ ಅವರ ಕೃಷಿಭೂಮಿಯಲ್ಲಿಯೇ ಇವೆ. ಭೂಮಿ ಕೇವಲ ಫಸಲುಕೊಡುವ ಆಸ್ತಿ ಮಾತ್ರವಾಗಿರದೇ ಅದು ಆ ಕುಟುಂಬಗಳಲ್ಲಿಯ ಹಿಂದಿನ ಅನೇಕ ತಲೆಮಾರುಗಳ ಜನ ಬಾಳಿ ಬದುಕಿದ ಪೂಜ್ಯ ಸ್ಥಳ. ಮೃತಪಟ್ಟ ಅನೇಕ ಹಿರಿಯರ ಅಸ್ಥಿಯನ್ನು ತನ್ನೊಡಲಲ್ಲಿ ಹುದುಗಿಸಿಕೊಂಡು ಈ ಸ್ಥಳ ಅವರಿಗೆ ಸದಾ ಮಾನಸಿಕ ರಕ್ಷಣೆಯನ್ನು, ನೈತಿಕ ಬೆಂಬಲವನ್ನು ಒದಗಿಸುತ್ತ ಅವರ ದೈನಂದಿನ ಬದುಕಿಗೆ ಸ್ಫೂರ್ತಿದಾಯಕವಾಗಿತ್ತು. ಈಗ ಅದನ್ನು ಅವರು ಅಗಲಿ ಸರಕಾರ ತೋರಿಸಿದ ಅಪರಿಚಿತ ಸ್ಥಳಕ್ಕೆ ಹೋಗಿದ್ದಾರೆ. ಈ ಸಂದರ್ಭದಲ್ಲಾಗುವ ಮಾನಸಿಕ ತಳಮಳ ಹೇಳತೀರದು. ರಾಜ್ಯದ ಬಹುಜನರ ಸುಖಕ್ಕಾಗಿ ಅವರು ತಮ್ಮ ಭೂಮಿಯನ್ನು ತ್ಯಾಗ ಮಾಡುವುದು ಅನಿವಾರ್ಯವಾಗಿತ್ತು. ಈಗ ಅಣೆಕಟ್ಟು ನಿರ್ಮಾಣ ಕಾರ್ಯ ಪೂರ್ತಿಗೊಂಡಿದ್ದು ಕಾಲುವೆಗಳ ಕೆಲಸ ಪ್ರಗತಿಯಲ್ಲಿದೆ. ಈ ಯೋಜನೆ ಯಿಂದಾಗಿ ಬಿಜಾಪುರ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಯ ೬.೨೨ ಲಕ್ಷ ಹೆಕ್ಟೇರ್ ಜಮೀನು ನೀರಾವರಿಯಾಗಲಿದೆ.

ಈ ಮೂಲಕ ರಾಜ್ಯದ ಬರ ಪೀಡಿತ ಪ್ರದೇಶಗಳ ಆಹಾರೋತ್ಪಾದನೆಯು ಹೆಚ್ಚಲಿದೆ. ಆದರೆ ರಾಜ್ಯದ ಅಭ್ಯುದಯ ಕ್ಕಾಗಿ ಮನೆ-ಆಸ್ತಿಗಳನ್ನು ಕಳೆದುಕೊಂಡ ಜನರ ಗೋಳು ಮುಗಿಲು ಮುಟ್ಟಿದೆ. ಸಂತ್ರಸ್ತರ ಇಂದಿನ ಸ್ಥಿತಿಗೆ ಹಲವಾರು ಕಾರಣಗಳಿವೆ. ಅಣೆಕಟ್ಟು ಯೋಜನೆಗಾಗಿ ಅದರ ಹಿನ್ನೀರಿನಲ್ಲಿರುವ ಜನ ನದಿಯ ಇಕ್ಕೆಲಗಳಲ್ಲಿಯ ಫಲವತ್ತಾದ ಜಮೀನನ್ನು ಕಳೆದುಕೊಂಡಿದ್ದಾರೆ. ಅಣೆಕಟ್ಟು ನಿರ್ಮಾಣ ವಾಗಿ ನೀರು ಸಂಗ್ರಹವಾಗುತ್ತ ಹೋದಂತೆ ಪುನರ್ವಸತಿ ಕಾರ್ಯ ಪ್ರಾರಂಭವಾಗಿದ್ದ ರಿಂದ ಹಾಗೂ ಬಹುತೇಕ ಸಂತ್ರಸ್ತರು ನಿರಕ್ಷರಿಗಳೂ, ಸಂಪ್ರದಾಯಶೀಲರೂ ಆಗಿದ್ದರಿಂದ ಸ್ಥಳಾಂತರಕ್ಕೆ ಅಗತ್ಯವಿದ್ದ ಭೌತಿಕ ಹಾಗೂ ಮಾನಸಿಕ ಪೂರ್ವಸಿದ್ಧತೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಸಂತ್ರಸ್ತರು ತಮ್ಮ ನೆಲದ ಬಗ್ಗೆ ಹೊಂದಿದ ಪ್ರೀತಿ, ಆದರ, ಅಭಿಮಾನಗಳು ಅವರನ್ನು ತಮ್ಮ ಮೂಲ ಸ್ಥಳದಿಂದ ಬೇಗನೆ ಅಗಲದಂತೆ ಮಾಡಿದವು. ಸ್ಥಳಾಂತರ ಕುರಿತು ಸರಕಾರವು ಕಾಲ ಕಾಲಕ್ಕೆ ಸುದ್ದಿ ಮಾಧ್ಯಮಗಳ ಮೂಲಕ ಕೊಟ್ಟ ಎಚ್ಚರಿಕೆಗಳು, ಮನೆಗಳಿಗೆ ಕೊಟ್ಟ ನೋಟೀಸುಗಳು ನಿರೀಕ್ಷಿತ ಫಲ ನೀಡಲಿಲ್ಲ. ಅಣೆಕಟ್ಟು ನಿರ್ಮಾಣದ ಕೆಲಸ ಅನೇಕ ಹಂತಗಳಲ್ಲಿ ಸ್ಥಗಿತಗೊಂಡಿದ್ದರಿಂದ ಅದು ಪೂರ್ತಿ ಗೊಳ್ಳುವುದರ ಬಗ್ಗೆ ನಂಬುಗೆ ಇಲ್ಲದ್ದಕ್ಕಾಗಿ ಸರಕಾರ ಕೊಟ್ಟ ಎಚ್ಚರಿಕೆಗಳನ್ನು ಜನ ಗಂಭೀರವಾಗಿ ಪರಿಗಣಿಸಲಿಲ್ಲ. ಸಂತ್ರಸ್ತರನ್ನು ಸ್ಥಳಾಂತರ ಮಾಡುವುದಕ್ಕಿಂತಲೂ ಪೂರ್ವದಲ್ಲಿ ಕಂದಾಯ ಇಲಾಖೆಯ ಸಹಯೋಗದೊಂದಿಗೆ ಸಂತ್ರಸ್ತರನ್ನು ಅವರವರ ಆಸ್ತಿಪಾಸ್ತಿ ಗಳೊಂದಿಗೆ ಗುರುತಿಸುವ ಮತ್ತು ಹಕ್ಕು ಪತ್ರಗಳನ್ನು ನೀಡುವ ಕೆಲಸ ಸಮಗ್ರವಾಗಿ ನಡೆಯ ಬೇಕಾಗಿತ್ತು. ಆ ಕಾರ್ಯ ನಡೆಯಲಿಲ್ಲ. ಇದರಿಂದಾಗಿ ಪರಿಹಾರಧನ ಸಮರ್ಪಕವಾಗಿ ಹಂಚಿಕೆಯಾಗಲಿಲ್ಲ. ಸಹೋದರರ ಪಾಲುದಾರಿಕೆಯ ನೋಂದಣಿ, ಕಾಲಕ್ಕೆ ಸರಿಯಾಗಿ ಆಗದ್ದಕ್ಕೆ ಯಾರದೋ ಪರಿಹಾರಧನ ಯಾರಿಗೋ ಸೇರಿದೆ. ಸ್ಥಳಾಂತರ ಪೂರ್ವದಲ್ಲಿ ಗ್ರಾಮ ಗಳಲ್ಲಿಯ ಸಾಮುದಾಯಿಕ ಆಸ್ತಿಯ ಸಂಪನ್ಮೂಲ (common property resources)ಗಳ ಪುನರ್ ಸೃಷ್ಟಿಯ ಕಾರ್ಯ ಹೊಸ ಪುನರ್ವಸತಿ ಕೇಂದ್ರಗಳಲ್ಲಿ ಸಮರ್ಪಕವಾಗಿ ನಡೆದಿಲ್ಲ.

**ಸಂತ್ರಸ್ತರ ಆಸ್ತಿಯ ಮೌಲೀಕರಣ**

ಸಂತ್ರಸ್ತರು ಕಳೆದುಕೊಳ್ಳಲಿರುವ ಆಸ್ತಿಯ ಮೌಲೀಕರಣ ಮಾಡಲು ಮೌಲ್ಯ ಮಾಪನ ಸಿಬ್ಬಂದಿ (property valuation team)ಯವರು ಬಂದಾಗ ಅನೇಕ ಅವ್ಯವಹಾರಗಳು ನಡೆದಿವೆ. ಗ್ರಾಮದಲ್ಲಿಯೇ ''ಮುಂದುವರೆದ'' ಕೆಲವು ಜನ ಈ ಸಿಬ್ಬಂದಿಯವರೊಂದಿಗೆ ''ಸಖ್ಯ''ವನ್ನು ಸಾಧಿಸುವಲ್ಲಿ ಸಫಲರಾಗಿದ್ದಾರೆ. ಸಿಬ್ಬಂದಿಯವರೂ ಸಹ ತಮ್ಮ ಅಧಿಕಾರ ವನ್ನು ದುರುಪಯೋಗಪಡಿಸಿಕೊಂಡು ಈ ಜನರ ಅಪೇಕ್ಷೆಯ ಮೇರೆಗೆ ಸಹಕರಿಸಿ ಮೌಲೀ ಕರಣ ಮಾಡಿದ್ದಾರೆ. ಮುಳುಗಡೆಯಾಗದ ಜಮೀನನ್ನು ಮುಳುಗಿಸಿದ್ದಾರೆ. ಮುಳುಗಡೆ ಯಾಗುವ ಜಮೀನನ್ನು ತೇಲಿಸಿದ್ದಾರೆ. ಈ ಕಾರ್ಯದಲ್ಲಿ ಅನೇಕ ಅವ್ಯವಹಾರಗಳು ನಡೆದು ಕೆಲವು ಸಂತ್ರಸ್ತರು ನ್ಯಾಯಯುತವಾದ ಪರಿಹಾರಧನದಿಂದ ವಂಚಿತರಾಗಿದ್ದಾರೆ. ಅವರಲ್ಲಿ ಕೆಲವರು ಕೋರ್ಟಿಗೆ ಹೋಗಿದ್ದು ಪ್ರಕರಣಗಳು ಇನ್ನೂ ವಿಲೇವಾರಿಯಾಗಬೇಕಾಗಿದೆ. ಮೌಲೀಕರಣ ಕಾರ್ಯದಲ್ಲಿಯ ಕೆಲವು ಸಿಬ್ಬಂದಿಯವರು ತಪ್ಪಿತಸ್ಥರೆಂದು ಸಾಬೀತಾಗಿ ಸೇವೆಯಿಂದ ಅಮಾನತ್ತಾದ ಉದಾಹರಣೆಗಳಿವೆ. ಮೌಲೀಕರಣ ಸಿಬ್ಬಂದಿಯವರು ತಮ್ಮ ಕೆಲಸಕ್ಕೆ ಬರುವಾಗ ಸಾಕಷ್ಟು ಮುಂಚಿತವಾಗಿ ಸಂತ್ರಸ್ತರಿಗೆ ಮುನ್ಸೂಚನೆ ನೀಡಿ ಬಂದಿದ್ದರಿಂದ ಕೆಲವು ಜನ ತಮ್ಮ ಹೊಲ-ಮನೆಗಳನ್ನು ನವೀಕರಣ ಮಾಡಿ ಸರಕಾರಕ್ಕೆ ತಪ್ಪು ಮಾಹಿತಿ ನೀಡಿದ್ದಾರೆ. ಈ ರೀತಿ ಸರಕಾರಕ್ಕೆ ತಪ್ಪು ಮಾಹಿತಿ ನೀಡಿದವರಲ್ಲಿ ಆರ್ಥಿಕ ವಾಗಿ, ಶೈಕ್ಷಣಿಕವಾಗಿ ಮುಂದುವರೆದವರೇ ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ನಾಳೆ ಬೆಳಿಗ್ಗೆ ಮೌಲೀಕರಣ ಮಾಡಲು ಇಂದು ರಾತ್ರಿ ಮನೆಗಳನ್ನು ಕಟ್ಟಿದ್ದಾರೆ ಹಾಗೂ ನವೀಕರಣ ಮಾಡಿದ್ದಾರೆ. ಹಾಗೆ ತರಾತುರಿಯಲ್ಲಿ ಕಟ್ಟಿದ ಮನೆಗಳನ್ನು ಮೌಲೀಕರಣದ ನಂತರ ಕೆಡವಿದ್ದಾರೆ. ಹೊಸದಾಗಿ ಮನೆಗಳನ್ನು ಕಟ್ಟುವ ಹಾಗೂ ನವೀಕರಣ ಮಾಡುವ ಕೆಲಸಗಳಲ್ಲಿ ಜನರ ಶ್ರಮ, ಕಟ್ಟಡ ಸಾಮಗ್ರಿ, ಬಂಡವಾಳ, ವ್ಯರ್ಥ ಪೋಲಾಯಿತು. ಈ ಘನ ಕಾರ್ಯ ದಲ್ಲಿ ಗ್ರಾಮದ ಕೆಲವು ''ಮುತ್ಸದ್ದಿ''ಗಳು ಹಗಲಿರುಳು ಶ್ರಮಿಸಿದರು. ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆದರು. ಸಂತ್ರಸ್ತ ರಲ್ಲಿಯೇ ಕೆಲವರು ನೌಕರಶಾಹಿಗಳ ದಯೆಯಿಂದ ಶ್ರೀಮಂತ ಸಂತ್ರಸ್ತರಾಗಿ ಶಹರ ಸೇರಿಕೊಂಡರೆ, ಇನ್ನುಳಿದ ಕೆಲವರು ಈ ತೆರನಾದ ನೌಕರಶಾಹಿಗಳ ಸಖ್ಯ-ಸಾಮೀಪ್ಯತೆಗಳು ಸಾಧ್ಯವಾಗದೇ ರಾಜ್ಯದ ಅಭಿವೃದ್ಧಿ ಕಾರ್ಯಕ್ಕೆ ಬಲಿಪಶು ಗಳಾಗಿ ನಿಟ್ಟುಸಿರು ಹಾಕುತ್ತಿದ್ದಾರೆ.

**ಸ್ಥಿರಾಸ್ತಿಯಿಂದ ಚರಾಸ್ತಿಯೆಡೆಗೆ**

ಈ ಅಣೆಕಟ್ಟುಗಳ ಹಿನ್ನೀರಿನ ವ್ಯಾಪ್ತಿ ಯಲ್ಲಿದ್ದ ಜನ ಇದುವರೆಗೂ ತಮ್ಮ ಸ್ಥಿರಾಸ್ತಿಯನ್ನು ಆಶ್ರಯಿಸಿದ್ದರು. ತಮ್ಮ ಸರಳ ಬದುಕಿಗೆ ಬೇಕಾಗುವ ಎಲ್ಲವನ್ನು ಸ್ಥಳೀಯವಾಗಿ ಸೃಷ್ಟಿಸಿಕೊಂಡು ಸ್ವಾವಲಂಬಿ ಜೀವನ ನಡೆಸುತ್ತಿದ್ದರು. ಹೆಚ್ಚೆಂದರೆ ತಮ್ಮ



ಪಿ.ಯು.ಸಿ. (ವಿಜ್ಞಾನ)ಯಲ್ಲಿ ೬೬% ಅಂಕ ಗಳಿಸಿ ತೇರ್ಗಡೆಯಾದರೂ ವೈದ್ಯಕೀಯ ವಿಜ್ಞಾನ ಓದಬೇಕೆಂಬ ಆಶೆ ನೆರವೇರದ್ದಕ್ಕಾಗಿ ತರಕಾರಿ ಮಾರುತ್ತಿರುವ ಜ್ಯೋತಿ ಲಗಳಿ ಅಂಗಡಿ ಹಚ್ಚುವುದು ತೆಗೆಯುವುದು ಒಂದು ಕೆಲಸ. ಗಿರಾಕಿಗಳೇ ಇಲ್ಲ.

ತಮ್ಮಲ್ಲಿಗೆ ವಸ್ತುಗಳ, ಸೇವೆಗಳ ವಿನಿಮಯ ಮಾಡಿಕೊಳ್ಳುತ್ತ ಪರಸ್ಪರಾವಲಂಬನೆಯ ಜೀವನ ನಡೆಸುತ್ತಿದ್ದರು. ವಸ್ತುಗಳ ವಿನಿಮಯ ಹಾಗೂ ಪಾರಸ್ಪರಿಕತೆಯ ತತ್ವ ಅವರ ಸಾಂಸ್ಕೃತಿಕ ಜೀವನದ ಅಂತಃಸತ್ವವಾಗಿತ್ತು. ಇವರಿಗೆ ಮಾರುಕಟ್ಟೆಯ ಗಾಳಿ ಸೋಂಕಿರಲಿಲ್ಲ. ಹಣದ ಚಲಾವಣೆಯಿಂದ ದೂರ ಇದ್ದರು. ಅಪರೂಪಕ್ಕೊಂಬಂತೆ ಐವತ್ತರದ್ದೋ ನೂರರದ್ದೋ ಒಂದು ನೋಟು ಇವರ ಕೈಗೆ ಬಂದರೆ ಅದನ್ನು ಮೂರ್ನಾಲ್ಕು ಮಡಿಕೆಗಳಲ್ಲಿ ಮಡಚಿ ಅನಿವಾರ್ಯ ಪ್ರಸಂಗ ಬಂದರೂ ಖರ್ಚು ಮಾಡದೆಯೇ ಜೋಪಾನವಾಗಿ ಬಚ್ಚಿಟ್ಟುಕೊಳ್ಳುತ್ತಿದ್ದರು. ಇವರ ಕೈಯಲ್ಲೀಗ ಸರಕಾರ ನೋಟುಗಳ ಕಂತೆಗಳನ್ನೇ ಇರಿಸಿದೆ. ಸ್ಥಿರಾಸ್ತಿ ಚರಾಸ್ತಿಯಾಗಿದೆ. ಅನೇಕರು ಹಿಂದೆಂದೂ ಕಾಣದಷ್ಟು ಹಣವನ್ನು ಕಂಡು ಬೆರಗಾಗಿದ್ದಾರೆ. ತಮ್ಮ ಬುದ್ಧಿಯ ಮೇಲಿನ ನಿಯಂತ್ರಣವನ್ನು ಕಳೆದುಕೊಂಡಿದ್ದಾರೆ. ಸರಕಾರವೇನೋ ಸಂತ್ರಸ್ತರು ತಾವು ಕಳೆದುಕೊಂಡ ಆಸ್ತಿ-ಪಾಸ್ತಿಗಳಿಗೆ ಬದಲಿ ಆಸ್ತಿಯನ್ನು ಖರೀದಿಸಲೆಂಬ ಸದಾಶಯ ದೊಂದಿಗೆ ಪರಿಹಾರ ಧನವನ್ನು ನೀಡಿದೆ. ಆದರೆ ಆಸ್ತಿ-ಪಾಸ್ತಿಗಳು ಈ ಸಮಯದಲ್ಲಿ ಅವರಿಗೆ ಅನುಕೂಲವಾಗುವ ಸ್ಥಳದಲ್ಲಿ ಸಿಗಬೇಕಲ್ಲ? ಎಷ್ಟೋ ಜನ ಆಸ್ತಿಯನ್ನು ಖರೀದಿಸದೆಯೇ ಪರಿಹಾರಧನವನ್ನು ಸಾಲ-ಶೂಲಗಳಿಗೆ, ಮಕ್ಕಳ ಮದುವೆ-ಮುಂಜಿಗಳಿಗೆ, ಹಬ್ಬ-ಹರಿದಿನಗಳಿಗೆ, ಪುಣ್ಯಕ್ಷೇತ್ರ ದರ್ಶನಗಳಿಗೆ ಖರ್ಚು ಮಾಡಿದರೆ ಇನ್ನು ಕೆಲವರು ಪರಿಹಾರ ಧನವನ್ನು ಬೇಕಾಬಿಟ್ಟಿಯಾಗಿ ಪೋಲು ಮಾಡಿದ್ದಾರೆ. ಕೆಲವರಿಗಂತೂ ಜೂಜಾಡಲು, ಕುಡಿದು ತೂರಾಡಿಕೊಂಡಿರಲು ಇನ್ನೂ ಹಲವಾರು ದುಶ್ಚಟಗಳಿಗೆ ಅಂಟಿಕೊಳ್ಳಲು ಅನುಕೂಲ ಮಾಡಿಕೊಟ್ಟಂತಾಗಿದೆ. ಈ ಅನಾಹುತಕ್ಕೆ ಮುಖ್ಯ ಕಾರಣ ವೆಂದರೆ ಗ್ರಾಮೀಣರಿಗೆ ದೊಡ್ಡ ರಖಮಿನ ಹಣದ ನಿರ್ವಹಣೆಯ ಅಭ್ಯಾಸ ಇರಲಿಲ್ಲ. ಅದು ಅವರ ನಿಶ್ಚಲ ಜೀವನದಲ್ಲಿ ಚಂಡ ಮಾರುತದಂತೆ ಪ್ರವೇಶಿಸಿದೆ. ಅದರ ನಿಯಂತ್ರಣ ಹಾಗೂ ನಿರ್ವಹಣೆ ಸಂತ್ರಸ್ತರಿಗೆ ಸಾಧ್ಯವಾಗುತ್ತಿಲ್ಲ.



ಕ್ಷೌರದಂಗಡಿ ರಾಮಣ್ಣ ಕೆಲಸಕ್ಕಾಗಿ ಸಜ್ಜಾಗಿ ಕುಳಿತರೂ ಗಿರಾಕಿಗಳದೇ ಬರ

**ಮಧ್ಯವರ್ತಿಗಳಿಂದ ಸಂತ್ರಸ್ತರ ಶೋಷಣೆ**

ಸಂತ್ರಸ್ತರಲ್ಲಿ ಬಹುಸಂಖ್ಯೆಯ ಜನ ನಿರಕ್ಷರಿಗಳಾಗಿದ್ದರಿಂದ ಅವರಿಗೆ ಪರಿಹಾರಧನ ಹಾಗೂ ಪುನರ್ವಸತಿ ಸೌಲಭ್ಯಗಳ ಪ್ಯಾಕೇಜನ್ನು ವಿತರಿಸುವಾಗ ಮಧ್ಯವರ್ತಿಗಳು ಸಂತ್ರಸ್ತರನ್ನು ಶೋಷಣೆ ಮಾಡಿದ್ದಾರೆ. ಈ ರೀತಿ ಪರಿಹಾರಧನ ಕೊಡಿಸುವಾಗ ವಕೀಲರು ಹಾಗೂ ವಕೀಲರಿಗೆ ಸಹಾಯಕರಾಗಿ ಕೆಲಸ ಮಾಡುವ ಮಧ್ಯವರ್ತಿಗಳು ಸಂತ್ರಸ್ತರ ಅಸಹಾಯಕತೆಯ ದುರುಪಯೋಗ ಮಾಡಿಕೊಂಡಿದ್ದಾರೆ. ಸಾಕಷ್ಟು ಪ್ರಮಾಣದಲ್ಲಿ ಸುಲಿಗೆ ಮಾಡಿದ್ದಾರೆ. ಮಧ್ಯವರ್ತಿಗಳು ೨೫%ರಿಂದ ೭೫%ರವರೆಗೆ ತಮ್ಮ ಕಮೀಶನ್ ಹಣವನ್ನು ರೈತರಿಂದ ಕಿತ್ತುಕೊಂಡಿದ್ದಾರೆ. ಇತ್ತೀಚೆಗೆ ಸಂತ್ರಸ್ತರಿಗೆ ನೇರವಾಗಿ ಚೆಕ್ ಮೂಲಕ ಪರಿಹಾರ ಧನ ವಿತರಿಸುವ ಕಾರ್ಯ ಆಚರಣೆಗೆ ಬಂದು ವಕೀಲರ ಹಾವಳಿ ಸ್ವಲ್ಪ ಕಡಿಮೆಯಾದರೂ ಮಧ್ಯವರ್ತಿಗಳ ಹಾವಳಿ ಕಡಿಮೆಯಾಗಿಲ್ಲ. ಕೃಷ್ಣಾ ಮೇಲ್ದಂಡೆ ಯೋಜನೆಯ ವ್ಯಾಪ್ತಿಯಲ್ಲಿ ಇವರಿಗೀಗ ಸುಲಿಗೆಯ ಸುಗ್ಗಿ. ಈ ಜನ ಬಾಗಲಕೋಟೆಯ ಪುನರ್‌ವಸತಿ ಹಾಗೂ ಪುನರ್‌ನಿರ್ಮಾಣದ (R&R) ಕಛೇರಿಯಲ್ಲಿ ಊರಿನ ಮುಖಂಡರ ವೇಷ ಧರಿಸಿ ಓಡಾಡುತ್ತಿರುತ್ತಾರೆ. ಹದ್ದಿನಂಥ ಕಣ್ಣುಗಳಿಂದ ಸಂತ್ರಸ್ತರಿಗಾಗಿ ಕಾಯುತ್ತಿರುತ್ತಾರೆ.

**ಶಿಥಿಲಗೊಂಡ ಕಳ್ಳುಬಳ್ಳಿಯ ಸಂಬಂಧಗಳು, ಚದುರಿಹೋದ ಅವಿಭಕ್ತ ಕುಟುಂಬಗಳು**

ಇದುವರೆಗಿನ ಅವಿಭಕ್ತ ಕುಟುಂಬಗಳಲ್ಲಿಯ ಸದಸ್ಯರುಗಳಿಗೆ ಜೊತೆಗೂಡಿಯೇ ಇರಲು ಬಲವಾದ ಕಾರಣಗಳಿದ್ದವು. ಸಾಮೂಹಿಕ ಆಸ್ತಿ, ಸಾಮೂಹಿಕ ದುಡಿಮೆ, ಸಾಮೂಹಿಕ ಉಪಭೋಗ, ಸಾಮೂಹಿಕ ಜವಾಬ್ದಾರಿಗಳು ಅದರ ಘನವಾದ ಉದ್ದೇಶಗಳಾಗಿದ್ದವು. ಜೀವನಾಧಾರವಾಗಿದ್ದ ಕೃಷಿಭೂಮಿ ನೀರುಪಾಲಾಗಿ ಕೂಡಿ ದುಡಿಯುವ ಅವಕಾಶ ಕಳೆದುಕೊಂಡ ಮೇಲೆ ಈ "ಸಾಮೂಹಿಕ" ಎಂಬ ಪದಕ್ಕೆ ಅರ್ಥವೇ ಉಳಿದಿಲ್ಲ. ಆಸ್ತಿ ನಗದು ಹಣವಾಗಿ ಪರಿವರ್ತನೆಯಾದ ಮೇಲೆ ಕುಟುಂಬದ ಸದಸ್ಯ ಸಹೋದರರು ಅದರಲ್ಲಿ ತಮ್ಮ ಪಾಲೆಷ್ಟು ಎಂದು ಆಲೋಚಿಸಿದ್ದಾರೆ ಹಾಗೂ ಪಡೆದಿದ್ದಾರೆ. ಒಂದು ಸ್ಥಳದಿಂದ ಬೇರೊಂದು ಸ್ಥಳಕ್ಕೆ ಹೋಗಿ ನೆಲೆಸುವಾಗ ಸಹೋದರರಲ್ಲಿ ಭಿನ್ನಾಭಿಪ್ರಾಯಗಳು ಮೂಡಿ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಮಾರ್ಪಾಟು ಹೊಂದಿವೆ. ಸಹೋದರರು ಪರಿಹಾರದ ಮೊತ್ತವನ್ನು ಪಡೆದುಕೊಂಡ ವಾರ್ತೆ ಈಗಾಗಲೇ ಮದುವೆಯಾಗಿ ಗಂಡನ ಮನೆಯಲ್ಲಿದ್ದ ಸಹೋದರಿಯರಿಗೆ ತಿಳಿದಾಗ ಅವರೂ ಸಹ ತವರಿಗೆ ಬಂದು ತಮ್ಮ ಪಾಲಿನ ಹಣವನ್ನು ಕೇಳಿ ಪಡೆದುಕೊಂಡಿದ್ದಾರೆ. ಈ ಕಾರಣಕ್ಕಾಗಿ ನೆಂಟರಲ್ಲಿಯ ಕಳ್ಳುಬಳ್ಳಿಯ ಸಂಬಂಧಗಳು ಕಡಿದುಹೋಗಿವೆ. ಕುಟುಂಬದಲ್ಲಿಯ ಅನ್ಯೋನ್ಯ ಬಾಂಧವ್ಯಗಳು ನಾಶವಾಗಿವೆ. ಸ್ಥಿರಾಸ್ತಿಯು ಚರಾಸ್ತಿಯಾಗಿ ಮಾರ್ಪಾಟಾದಾಗ ಅವಿಭಕ್ತ ಕುಟುಂಬದ ಸದಸ್ಯರು ಪರಸ್ಪರರಿಗಾಗಿ ತ್ಯಾಗ-ಬಲಿದಾನ ಮಾಡುವ ಬದಲಾಗಿ ಪರಸ್ಪರ ಶತ್ರುಗಳಂತೆ ವರ್ತಿಸುತ್ತಿದ್ದಾರೆ. ಪುತ್ರಿಯರು ವಿವಾಹವಾದ ನಂತರ ಗಂಡನ ಮನೆ ಸೇರುವದು ವಾಡಿಕೆ. ಆಸ್ತಿ ನೀರು ಪಾಲಾದದ್ದಕ್ಕೆ ಪುತ್ರರೂ ಸಹ ವಿವಾಹನಂತರ ತಮ್ಮ ಪತ್ನಿಯರ ಮನೆ ಸೇರಿಕೊಂಡಿದ್ದಾರೆ. ಮೂಲ ಕುಟುಂಬದ ವೃದ್ಧ ದಂಪತಿಗಳು ಎಲ್ಲವನ್ನೂ ಕಳೆದುಕೊಂಡು ದಿಕ್ಕು ಕಾಣದೆ ಅನಾಥರಾಗಿ ಪುನರ್‌ವಸತಿ ಕೇಂದ್ರದಲ್ಲಿ ತಲೆಯ ಮೇಲೆ ಕೈ ಹೊತ್ತು ಸಾವನ್ನು ಎದುರುನೋಡುತ್ತ ಕುಳಿತಿದ್ದಾರೆ. ಕೆಲವರು ತಾವು ಪರಿಶ್ರಮದಿಂದ ಗಳಿಸಿದ ಭೂಮಿ ಮುಳುಗಡೆಯಾಗುವದನ್ನು ನೋಡುತ್ತ ಎದೆಯೊಡೆದುಕೊಂಡು ಸತ್ತರು.

**ನಿರುದ್ಯೋಗಿಗಳಿಂದ ತುಂಬಿದ ಪುನರ್‌ವಸತಿ ಕೇಂದ್ರಗಳು**

ಸಂತ್ರಸ್ತರನ್ನು ನೆಲೆಗೊಳಿಸಲು ಒಟ್ಟು ೧೩೫ ಪುನರ್‌ವಸತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಅಗತ್ಯವಿದ್ದ ಎಲ್ಲ ಮೂಲಭೂತ ಸೌಕರ್ಯಗಳೊಂದಿಗೆ ಈ ಕೇಂದ್ರಗಳಲ್ಲಿ ಜನ ಜೀವನವನ್ನು ಪ್ರಾರಂಭಿಸಿದರು. ಆದರೆ ಈ ಕೇಂದ್ರಗಳು ಸ್ವಯಂ ಪೋಷಿತ (self-sustaining)ವಾಗಲಿಲ್ಲ. ಮೊದಲಿನ ಗ್ರಾಮಗಳಲ್ಲಿಯ ಜೀವಂತಿಕೆಯನ್ನು ಪೂರ್ಣ ಪ್ರಮಾಣದಲ್ಲಿ ಪಡೆಯಲಿಲ್ಲ. ಸರಕಾರದಿಂದ ರಿಯಾಯ್ತಿ ದರದಲ್ಲಿ ಸಿಗುವ ದಿನಸಿ ಪದಾರ್ಥಗಳನ್ನು ಖರ್ಚುಮಾಡುತ್ತ ಕಾಲಹರಣ ಮಾಡುತ್ತಿದ್ದಾರೆ. ಇಲ್ಲಿಯ ಜನರ ನಿರುದ್ಯೋಗ ಸಮಸ್ಯೆಯನ್ನು ಗಮನದಲ್ಲಿಟ್ಟುಕೊಂಡು ಅನೇಕ ಆದಾಯ ಸೃಷ್ಟಿಸುವ ಯೋಜನೆಗಳನ್ನು ಪ್ರಾರಂಭಿಸಿದರೂ ಅವುಗಳ ಲಾಭ ಬಹುತೇಕ ಜನರಿಗೆ ತಲುಪಿಲ್ಲ. ಅನೇಕ ವರ್ಷಗಳವರೆಗೆ ಆಶ್ರಯಿಸಿದ ಒಂದು ಉದ್ಯೋಗವನ್ನು ಬಿಟ್ಟು ಬೇರೆ ಉದ್ಯೋಗಕ್ಕೆ ಹೋಗುವದು ಅಷ್ಟು ಸುಲಭದ ಕೆಲಸವಲ್ಲ. ಉದ್ಯೋಗಕ್ಕೆ ಸಂಬಂಧಿಸಿದ ಕೌಶಲ್ಯ, ಪ್ರೇರಣೆಗಳನ್ನು ಬೆಳೆಸಿಕೊಳ್ಳಲು ಅಗತ್ಯ ಮನೋಭೂಮಿಕೆ ಹಾಗೂ ಸಾಕಷ್ಟು ಸಮಯ ಬೇಕಾಗುತ್ತದೆ. ರಾಷ್ಟ್ರೀಯ ಹೆದ್ದಾರಿಯ ಮೇಲೆ ಬರುವ ಕೊರ್ತಿ-ಕೋಲಾರ ಗ್ರಾಮಗಳಲ್ಲಿಯ ಜನ ಮೊಸರಿನ ವ್ಯಾಪಾರದಲ್ಲಿ ತೊಡಗಿದ್ದರು. ಅವರಿಗೆ ಆ ಉದ್ಯೋಗದಲ್ಲಿಯ ಕೌಶಲ್ಯಗಳು ಕರಗತವಾಗಿದ್ದವು. ಈಗ ಅಲ್ಲಿನ ಜಮೀನು ಮುಳುಗಡೆಯಾಗಿದ್ದರಿಂದ ದನಗಳಿಗೆ ಹುಲ್ಲು ಸಿಗದೆ ಇದ್ದುದರಿಂದ ಆ ಜನ ಮೊಸರು ಮಾರುವ ಉದ್ಯೋಗವನ್ನು ಕಳೆದುಕೊಂಡಿದ್ದಾರೆ. ಈಗ ಅವರನ್ನು ಬೇರೆ ಉದ್ಯೋಗದಲ್ಲಿ ತೊಡಗಿಸುವದು ತುಂಬಾ ಪ್ರಯಾಸದ ಕೆಲಸ.

**ಸಾಂಸ್ಕೃತಿಕ ತಲ್ಲಣಗಳು**

ಸ್ಥಳಾಂತರ ಪೂರ್ವದ ಗ್ರಾಮಗಳಲ್ಲಿ ಜನರು ಬದುಕಿದ ಜೀವನದಲ್ಲಿ ಸಾಂಸ್ಕೃತಿಕ ಶ್ರೀಮಂತಿಕೆ ಎದ್ದುಕಾಣುತ್ತಿತ್ತು. ಪ್ರತಿಯೊಂದು ಗ್ರಾಮ ಸಾಮಾಜಿಕವಾಗಿ, ಆರ್ಥಿಕವಾಗಿ ಸ್ವಾವಲಂಬಿಯಾಗಿದ್ದು ಅವುಗಳು 'ಚಿಕ್ಕ-ಗಣರಾಜ್ಯ'ಗಳಂತಿದ್ದವು. ಜನರಲ್ಲಿಯ ಸಾಮುದಾಯಿಕ ಐಕ್ಯತೆ, ಸಹಬಾಳ್ವೆ, ಕಳ್ಳುಬಳ್ಳಿಯ ಸಂಬಂಧಗಳು, ಕೊಡುಕೊಳ್ಳುವಿಕೆಗಳು, ಗ್ರಾಮದ ದೇವರ ಜಾತ್ರೆ, ಗ್ರಾಮೀಣ ಪಂದ್ಯ ಮುಂತಾದವುಗಳನ್ನಾಧರಿಸಿದ ಸಹಕಾರೀ ಜೀವನ ಪುನರ್ವಸತಿ ಕೇಂದ್ರಗಳಲ್ಲಿ ಮರುಸ್ಥಾಪನೆಗೊಳ್ಳುವದೆಂದು ಜನರು ನಿರೀಕ್ಷಿಸಿದ್ದರು. ಆದರೆ ಅವರ ನಿರೀಕ್ಷೆ ಸುಳ್ಳಾಗಿದೆ. ಸಂತ್ರಸ್ತರು ತಮ್ಮ ಹಿಂದಿನ ಸಮಾಜದಲ್ಲಿಯ ಸಾಂಪ್ರದಾಯಿಕ ಕಲೆ, ಜ್ಞಾನ, ನೈಪುಣ್ಯ ಹಾಗೂ ನಂಬುಗೆಗಳನ್ನು ಕಳೆದುಕೊಂಡಿದ್ದಾರೆ. ಇದು ಅವರ ಜೀವನದಲ್ಲಿ ಉಂಟಾದ ಅಪಾರವಾದ, ತುಂಬಲಾಗದ ನಷ್ಟ. ಒಂದು ಜನಾಂಗ ಆಸ್ತಿ – ಪಾಸ್ತಿ ಕಳೆದುಕೊಂಡರೆ, ಹಣ, ಸಂಪತ್ತನ್ನು ಕಳೆದುಕೊಂಡರೆ ಅವುಗಳ ಮರುಸೃಷ್ಟಿ ಸಾಧ್ಯವಿದೆ. ಆದರೆ ಒಂದು ಜನಾಂಗ ತನ್ನ ಸಂಸ್ಕೃತಿ ಹಾಗೂ ಪರಂಪರೆಯನ್ನು ಕಳೆದುಕೊಂಡರೆ ಅದರ ಮರುಸೃಷ್ಟಿ ಅಸಾಧ್ಯ. ಸಾಂಸ್ಕೃತಿಕವಾಗಿ ಆ ಜನಾಂಗ ಸತ್ತಂತೆಯೇ ಸರಿ.

### ಬೃಹತ್ ಅಣೆಕಟ್ಟುಗಳಿಗೆ ಪರ್ಯಾಯ ಮಾರ್ಗಗಳು

ಬೃಹತ್ ಅಣೆಕಟ್ಟುಗಳಿಗೆ ಪರ್ಯಾಯ ಮಾರ್ಗಗಳನ್ನು ಕುರಿತು ಹಲವು ವರ್ಷಗಳಿಂದ ಜಾಗತಿಕ ಮಟ್ಟದಲ್ಲಿ ಚರ್ಚೆ ನಡೆದಿದೆ. ಇತ್ತೀಚೆಗೆ ನವೆಂಬರ್ ೨೦೦೦ದಲ್ಲಿ ಬಂದ ಬೃಹತ್ ಅಣೆಕಟ್ಟುಗಳ ಜಾಗತಿಕ ಅಧ್ಯಯನ ಸಮಿತಿ (ಡಬ್ಲ್ಯು. ಸಿ. ಡಿ)ಯ ವರದಿಯು ಬೃಹತ್ ಪ್ರಮಾಣದ ಅಣೆಕಟ್ಟುಗಳ ನಿರ್ಮಾಣಕ್ಕೆ ವ್ಯತಿರಿಕ್ತವಾಗಿದೆ. ಅಲ್ಲಲ್ಲಿ ಚಿಕ್ಕ ಬ್ಯಾರೇಜುಗಳನ್ನು ನಿರ್ಮಿಸುವದರ ಮೂಲಕ ಅಣೆಕಟ್ಟು ನಿರ್ಮಾಣದಿಂದಾಗುವ ಹಾನಿಗಳನ್ನು ತಪ್ಪಿಸಬಹುದಾಗಿದೆ. ಜಮೀನಿನ ಸಮಪಾತಳಿ ಮಾಡುವವರ ಮೂಲಕ ಅಲ್ಲಲ್ಲಿ ಚೆಕ್ ಡ್ಯಾಮಗಳನ್ನು ನಿರ್ಮಿಸುವದರ ಮೂಲಕ ಅಂತರ್ ಜಲದ ಮಟ್ಟವನ್ನು ಸುಧಾರಿಸಬಹುದಾಗಿದೆ. ಎಂಥದೇ ದೊಡ್ಡ ಜಲಾಶಯವನ್ನು ನಿರ್ಮಿಸಿದರೂ ೧೫-೨೦ವರ್ಷಗಳಲ್ಲಿ ಹೂಳು ತುಂಬಿಕೊಂಡು ಅಣೆಕಟ್ಟುಗಳಲ್ಲಿ ನೀರಿನ ಸಂಗ್ರಹ ಸಾಮರ್ಥ್ಯ ಕಡಿಮೆಯಾಗುತ್ತದೆ. ಕೆರೆಗಳನ್ನೇ ಹೂಳೆತ್ತಲಿಕ್ಕಾಗದ ಇಂದಿನ ದಿನಗಳಲ್ಲಿ ಅಣೆಕಟ್ಟುಗಳಲ್ಲಿಯ ಹೂಳೆತ್ತುವದು ಅಸಾಧ್ಯವಾದ ಮಾತು. ನಮ್ಮ ದೇಶದಲ್ಲಿಯ ನದಿಗಳ ಜೋಡಣೆಯೂ ಸಹ ಬೃಹತ್ ಅಣೆಕಟ್ಟುಗಳಿಗೆ ಒಂದು ಪರ್ಯಾಯ ಮಾರ್ಗವಾಗಿದ್ದು ಇದರ ಮೂಲಕ ನೆರೆ ಮತ್ತು ಬರಗಳೆರಡನ್ನು ನಿಯಂತ್ರಿಸಬಹುದಾಗಿದೆ.

### ಯೋಜನೆಯ ಅಂದಾಜು ವೆಚ್ಚ

ಕೃಷ್ಣಾ ಮೇಲ್ದಂಡೆ ಯೋಜನೆಯ ಅಂದಾಜು ವೆಚ್ಚ ೧೦,೦೦೦ ಕೋಟಿ ರೂಪಾಯಿಗಳು. ಭೂಸ್ವಾಧೀನ, ಪುನರ್‌ವಸತಿ ಹಾಗೂ ಪುನರ್ ನಿರ್ಮಾಣ ಕಾರ್ಯಗಳಿಗಾಗಿಯೇ ಸುಮಾರು ೩೫೦೦ ಕೋಟಿ ರೂ. ಖರ್ಚಾಗಲಿದೆ ಮತ್ತು ಈ ಕಾರ್ಯದಲ್ಲಿ ದೊಡ್ಡ ಗಾತ್ರದ ನೌಕರಶಾಹಿ ವರ್ಗ ಐದು ಜಿಲ್ಲೆಗಳಲ್ಲಿ ಕೆಲಸಮಾಡುತ್ತಿದೆ. ಒಂದು ಲಕ್ಷ ಕುಟುಂಬಗಳ ಆಸ್ತಿ-ಪಾಸ್ತಿಗಳು ಆಲಮಟ್ಟಿ ಅಣೆಕಟ್ಟಿನ ಹಿನ್ನೀರಿನಲ್ಲಿ ಜಲಾವೃತವಾಗಿದ್ದು ಸುಮಾರು (ಕಾಲುವೆ ನಿರ್ಮಾಣದಿಂದಾಗಿ ಬಾಧಿತವಾಗುವ ೨೦ ಸಾವಿರ ಕುಟುಂಬಗಳೂ ಸೇರಿದಂತೆ) ೫ ಲಕ್ಷ ಜನ ನಿರ್ವಸತೀಕರಣಕ್ಕೆ ಒಳಗಾಗಿದ್ದಾರೆ. ರಾಜ್ಯದ ಅಭಿವೃದ್ಧಿಗಾಗಿ ತ್ಯಾಗ ಮಾಡಿದ್ದಾರೆ. ಈ ತ್ಯಾಗಿಗಳನ್ನು ನಾಡಿನ ಜನತೆ ಹೃದಯ ತುಂಬಿ ಅಭಿನಂದಿಸಬೇಕು. ಆದರೆ ೨೦೦೨ರ ನವೆಂಬರ್ ತಿಂಗಳಿನಲ್ಲಿ ಬಾಗಲಕೋಟೆಯಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಿಗೆ ಅದ್ದೂರಿಯಾದ ಅಭಿನಂದನಾ ಸಮಾರಂಭವೊಂದು ನಡೆಯಿತು. ರಾಜ್ಯದ ಮೂರು ಜಿಲ್ಲೆಯ ಪೊಲೀಸ್ ಸಿಬ್ಬಂದಿ ಬಾಗಲಕೋಟೆಯಲ್ಲಿ ನಡೆಯುವ ಅಭಿನಂದನಾ ಕಾರ್ಯಕ್ರಮದ ಬಂದೋಬಸ್ತಿಗಾಗಿ ನಗರದಲ್ಲಿ ಬೀಡು ಬಿಟ್ಟಿತ್ತು. ಈ ಸಮಾರಂಭಕ್ಕೆ ಕಾರಣವೆಂದರೆ ಕೃಷ್ಣಾ ಮೇಲ್ದಂಡೆ ಯೋಜನೆಯ ಸಂತ್ರಸ್ತರಿಗೆ ರಾಜ್ಯದ ಮುಖ್ಯಮಂತ್ರಿಗಳು ೬೩೮ ಕೋಟಿ ರೂಪಾಯಿಗಳ ವಿಶೇಷ ಪುನರ್ವಸತಿ ಪ್ಯಾಕೇಜನ್ನು ಮಂಜೂರು ಮಾಡಿದ್ದರು. ಸಂತ್ರಸ್ತರು ಅಪಾರವಾದ ನಷ್ಟಕ್ಕೆ ಗುರಿಯಾಗಿ ಹತಾಶೆಯ ಜೀವನ ನಡೆಸುತ್ತಿರುವಾಗ ಈ ಅದ್ದೂರಿಯ ಅಭಿನಂದನಾ ಸಮಾರಂಭದ ಅಗತ್ಯವಾದರೂ ಏನಿತ್ತು? ಯಾರನ್ನು ಯಾರು ಅಭಿನಂದಿಸಬೇಕು? ಎಂಬ ಪ್ರಶ್ನೆಗಳನ್ನು ಸಂತ್ರಸ್ತರು ಕೇಳುತ್ತಿದ್ದಾರೆ.

### ಸಂತ್ರಸ್ತರ ಹಿತಾಸಕ್ತಿಗಳ ರಕ್ಷಣೆಯ ಕೊರತೆ

ಕೃಷ್ಣಾ ಮೇಲ್ದಂಡೆ ಯೋಜನೆಯ ಸಂತ್ರಸ್ತರ ಹಿತಾಸಕ್ತಿಗಳನ್ನು ಕಾಪಾಡುವ ನಾಯಕರು, ಸಂಘಟನೆಗಳು ಇಲ್ಲಿ ಹುಟ್ಟಲಿಲ್ಲ. 'ಸರ್ದಾರ್ ಸರೋವರ' ಯೋಜನೆಯಷ್ಟೇ ಜನ ಇಲ್ಲಿ ಸಂತ್ರಸ್ತರಾಗಿದ್ದರೂ ಅಲ್ಲಿ ನರ್ಮದಾ ಬಚಾವೋ ಆಂದೋಲನ ನಡೆದು ಮೇಧಾ ಪಾಟ್ಕರ್, ಅರುಂಧತಿ ರಾಯ್ ಹಾಗೂ ಪ್ರಶಾಂತ್ ಭೂಷಣರಂಥ ನಾಯಕರು ಬೆಳೆದರು. ಚಳುವಳಿಯ ಕಾವು ಅಂತರ್‌ರಾಷ್ಟ್ರೀಯ ಮಟ್ಟದವರೆಗೆ ತಟ್ಟಿತು. ಅಲ್ಲಿರುವ ಎಲ್ಲಾ ಸಮಸ್ಯೆಗಳು ಇಲ್ಲಿಯೂ ಇವೆ. ಇನ್ನು ಮುಂದಾದರೂ ಕೃಷ್ಣಾ ಮೇಲ್ದಂಡೆ ಯೋಜನೆಯ ಸಂತ್ರಸ್ತರ ಹಿತಾಸಕ್ತಿ ಕಾಪಾಡುವ ಜನಪರ ಸಂಘಟನೆ ಹುಟ್ಟಿಬರಲಿ, ಪುನರ್ವಸತಿ ಹಾಗೂ ಪುನರ್ ನಿರ್ಮಾಣ ದೇಶದಾದ್ಯಂತ ಒಂದು ಅಂತರ್‌ಶಿಸ್ತೀಯ ವಿಜ್ಞಾನವಾಗಿ ಬೆಳೆದು ಸಂತ್ರಸ್ತರಿಗೆ ಒಂದು ಗೌರವಯುತವಾದ ಹಾಗೂ ಮಾನವೀಯ ಜೀವನ ಲಭಿಸುವಂತಾಗಲೆಂದು ಆಶಿಸೋಣ.

ಎಸ್. ಬಿ. ಬಿರಾದಾರ
ಸಮಾಜಶಾಸ್ತ್ರ ಉಪನ್ಯಾಸಕರು, ಎಸ್. ಸಿ. ಪಿ. ಡಿಗ್ರಿ ಕಾಲೇಜು
ಮಹಾಲಿಂಗಪುರ (ಬಾಗಲಕೋಟ ಜಿಲ್ಲೆ)

---

೩೪ನೇ ಪುಟದಿಂದ

ಈ ವಚನ ಧ್ವನಿಯು ಆಧುನಿಕತೆಯ ಲಕ್ಷಣಗಳನ್ನು ಹೊಂದಿರುವಂತೆ ಭಾಸವಾಗುತ್ತಿದೆ. ವಿವಾಹವು ಆಧ್ಯಾತ್ಮಿಕ ಸಾಧನೆಗೆ ಇರುವ ಒಂದು ಸಾಧನ ಮತ್ತು ಅದಕ್ಕೆ ತನ್ನದೇ ಆದ ಸ್ವತಂತ್ರ ಮೌಲ್ಯವೂ ಇದೆ ಎಂಬುದು ಈ ವಚನದಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ.

ಈ ಚಳುವಳಿಯಲ್ಲಿ ಹೆಣ್ಣು ಪಡೆದುಕೊಂಡಿದ್ದ ಸ್ಥಾನಮಾನಗಳ ಒಂದು ಸ್ಪಷ್ಟ ಚಿತ್ರವನ್ನೂ ಅನೇಕ ಶಿವಶರಣೆಯರ ಜೀವನ ಚರಿತ್ರೆಯಿಂದ ರೂಪಿಸಿಕೊಳ್ಳಬಹುದಾಗಿದೆ. ಅನುಭವಮಂಟಪದಲ್ಲಿ ನಡೆಯುತ್ತಿದ್ದ ಜಿಜ್ಞಾಸೆಯಲ್ಲಿ ಸ್ತ್ರೀ-ಪುರುಷರೆಲ್ಲಾ ಸರಿಸಮರಾಗಿ ಭಾಗವಹಿಸುತ್ತಿದ್ದರು. ಅನುಭಾವಿಯಾಗಿದ್ದ ಮಹಾದೇವಿಯಕ್ಕ ಆಧ್ಯಾತ್ಮಿಕ ಕೇಂದ್ರವಾಗಿದ್ದ ಕಲ್ಯಾಣದಲ್ಲಿ ಉನ್ನತ ಸ್ಥಾನ ಪಡೆದುಕೊಂಡಳು. ಸಂಪೂರ್ಣವಾಗಿ ವಿನೂತನವೆನ್ನಬಹುದಾದ ಸಂಗತಿಯೆಂದರೆ ಚಳುವಳಿಯಲ್ಲಿ ಸಂಸಾರಸ್ಥ ಶಿವಶರಣೆಯರು ಭಾಗವಹಿಸಿದ್ದಾಗಿದೆ. ಈ ಬಗೆಯ ವಿವಾಹಿತ ಶಿವಶರಣೆಯರಲ್ಲಿ ನೀಲಮ್ಮ ಖಚಿತವಾಗಿ ಒಬ್ಬ ಪ್ರತಿಭಾನ್ವಿತ ಹಾಗೂ ಸ್ವತಂತ್ರ ಮನೋಭಾವದ ಚಿಂತಕಿಯಾಗಿದ್ದಾಳೆ.

ಸಮಾಜದ ಕೆಳಸ್ತರಕ್ಕೆ ಸೇರಿದ ಅಕ್ಕಿಕುಟ್ಟುವ, ಕಸಗುಡಿಸುವ ಶಿವಶರಣೆಯರ ಆಧ್ಯಾತ್ಮಿಕ ಜಿಜ್ಞಾಸೆಯನ್ನು ಶಿವಶರಣರು ಕೇಳುತ್ತಿದ್ದರು ಎಂಬುದು ಅಸಾಧಾರಣ ಸಂಗತಿಯಾಗಿದೆ. ಹೊಸ ಮೌಲ್ಯಗಳ ಆಧಾರದಿಂದ ಸ್ತ್ರೀ-ಪುರುಷರ ಸಂಬಂಧವನ್ನು ನೋಡಲಾಗುತ್ತಿತ್ತು. ಹೊಸ ಆಧ್ಯಾತ್ಮಿಕ ವಲಯದಲ್ಲಿ ವೇಶ್ಯೆಯರಿಗೂ ಸ್ಥಾನಮಾನ ನೀಡಲಾಗಿತ್ತು.

### ೩. ಅಂಧ ಶ್ರದ್ಧೆಗಳು

ಅಂಧ ಶ್ರದ್ಧೆಗಳಿರದ ಜನಾಂಗವೇ ಇಲ್ಲವೆಂದರೂ ಸಲ್ಲುತ್ತದೆ. ಎಲ್ಲ ಕಾಲ, ಎಲ್ಲ ದೇಶಗಳಲ್ಲಿಯೂ ಅಂಧ ಶ್ರದ್ಧೆಗಳು ಇದ್ದೇ ಇದ್ದವು, ಈಗಲೂ ಇವೆ.

ವಚನಕಾರರು ತಾವು ಕಲ್ಪಿಸಿಕೊಂಡಿದ್ದ ಆದರ್ಶ ಸಮಾಜದ ಬಗ್ಗೆ ಸ್ಪಷ್ಟವಾದ ಅರಿವನ್ನು ಪಡೆದಿದ್ದರು; ಅದರ ನಾನಾ ಅಂಶಗಳ ಬಗ್ಗೆ ಅವರು ಕೂಲಂಕಷವಾಗಿ ಆಲೋಚಿಸಿದ್ದರು. ಸಮಾಜದಲ್ಲಿ ಜನಿಸಿರುವ ಜೀವಿಸಿರುವ ಎಲ್ಲರೂ ಮೂಲತಃ ಸಮಾನರೆಂದು ಅವರು ಭಾವಿಸಿಕೊಂಡಿದ್ದ ಕಾರಣದಿಂದಲೇ ಆಗಿನ ಕಾಲದಲ್ಲಿ ರೂಢಮೂಲವಾದ ಜಾತಿಪದ್ಧತಿಯನ್ನು ಧಿಕ್ಕರಿಸಿ ಎಲ್ಲರಿಗೂ ಸಮಾನಾವಕಾಶವನ್ನೊದಗಿಸಬಲ್ಲ ಜಾತಿವಿಹೀನವಾದ ಸಮಾಜ ರಚನೆಗೆ ತೊಡಗಿದರು.

ಸಮಾಜವು ವಚನಕಾರರ ಆದರ್ಶದ ಸ್ವರೂಪವನ್ನು ಪಡೆಯಬೇಕಾದರೆ ಆ ವಲಯಕ್ಕೆ ಸೇರಿದ ಎಲ್ಲರೂ ತಮ್ಮ ಸಾಮಾಜಿಕ ನಡವಳಿಕೆಯಲ್ಲಿ ಕೆಲವು ನಿಯಮಗಳನ್ನು ಅನುಸರಿಸಿದರೆ ಮಾತ್ರವೇ ಸಾಧ್ಯವೆಂದು ಅವರು ಕೆಲವು ಸಾಮಾಜಿಕ ನಿಬಂಧನೆಗಳನ್ನು ಒಳಗೊಂಡ ನೀತಿ ಸಂಹಿತೆಯನ್ನು ರೂಪಿಸಿದರು. ಇದನ್ನೆ 'ಆಚಾರ' ಎಂದವರು ಕರೆದರು.

ಬಾಣಂತಿ ಹಾಗೂ ಶವವನ್ನು ಮುಟ್ಟಿದವನನ್ನು ಮುಟ್ಟಿದರೂ ಸ್ನಾನ ಮಾಡಿ ಪರಿಶುದ್ಧರಾಗಬೇಕು; ಏಕೆಂದರೆ ನೀರು ದೈಹಿಕವಾದ ಮೈಲಿಗೆಯನ್ನು ಹೋಗಲಾಡಿಸುತ್ತದೆ ಎಂದು ಮನುವು ಅಭಿಪ್ರಾಯಪಡುತ್ತಾನೆ. ವಚನಕಾರರು ಈ ಸೂತಕವನ್ನು ಅಲ್ಲಗಳೆದರು. ಈ ರೀತಿ ವಚನಕಾರರು ಪಂಚಸೂತಕಗಳ ಆಚರಣೆಯನ್ನು ನಿಷೇಧಿಸಿದರು. ಹೀಗೆ ಆಚರಿಸುವವನಿಗೆ 'ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ' ಎಂದರು, 'ದೇವದೇವನಪ್ಪ ಮಹಾಲಿಂಗನನು ಲಿಂಗರೂಪದಿಂದ ಅಂಗದಲ್ಲಿ ಧರಿಸಿ ಪರಿಶುದ್ಧವಾದೆವೆಂದು ತಿಳಿಯದೆ ಸೂತಕವನಾಚರಿಸುವ ವ್ರತಗೇಡಿಗಳ ಎನಗೆ ತೋಱದಿರಯ್ಯ' ಎಂದು ಸೂತಕಾಚರಣೆಯನ್ನು ಖಂಡಿಸಿ, ಲಿಂಗಧಾರಣೆಯು ಎಲ್ಲ ಮೈಲಿಗೆಯನ್ನು ಹೋಗಲಾಡಿಸುತ್ತದೆ ಎಂದು ಹೇಳಿದರು.

ದೇವಸ್ಥಾನ ನಿರ್ಮಾಣ ಕಾರ್ಯದಲ್ಲಿ ಭಕ್ತಿಗಿಂತಲೂ ಪ್ರಚಾರ ಕೀರ್ತಿಗಳೇ ಹೆಚ್ಚು ಆಳವಾದ ಕಾರಣವೆಂದು, ದೇವಸ್ಥಾನಗಳಿಗೆ ಭೂಮಿಯನ್ನೋ, ಕರೆಯುವ ಹಸುಗಳನ್ನೋ, ನಂದಾದೀವಿಗೆಗಾಗಿ ದಾನವನ್ನೋ ಮಾಡಿದವರ ಆತ್ಮ ಪ್ರಶಂಸೆಯ ಮಾತುಗಳನ್ನು ಬಸವಣ್ಣ ಒಂದೆಡೆ ಖಂಡಿಸುತ್ತಾನೆ. ಸ್ಥಾವರಲಿಂಗ ಪೂಜೆಯನ್ನು ಖಂಡಿಸಿದ ವಚನಕಾರರು ಇಂತಹ ದಾನಗಳನ್ನೂ ಖಂಡಿಸಿದುದು ಸಹಜವೇ ಆಗಿದೆ.

ಈ ರೀತಿ ವಚನಕಾರರು ಡಾಂಭಿಕತನಕ್ಕಾಗಿಯೇ ಮಾಡುವ ಸೇವಾಕಾರ್ಯವನ್ನು ಖಂಡಿಸಿದರು, ಸಮಾಜಸೇವೆಯೊಂದಿಗೆ ಆತ್ಮ ಸಾಕ್ಷಾತ್ಕಾರಕ್ಕೆ ಕಾರಣವಾಗುವ ಜ್ಞಾನಕ್ಕೂ ಮಹತ್ವವನ್ನಿತ್ತರು.

ಟಿ. ಎಸ್. ಗೊರವರ
ಅಂಚೆ: ರಾಜೂರ - ೫೮೨ ೨೩೦,
ರೋಣ ತಾಲ್ಲೂಕ, ಗದಗ ಜಿಲ್ಲೆ

# ರಾಷ್ಟ್ರೀಯತೆಯ ಹೆಣ್ಣು ಸಂಕಥನ

# ಬಂಕಿಮಚಂದ್ರ ಚಟರ್ಜಿ ಮತ್ತು ಆಧುನಿಕ ಕನ್ನಡ ಕಾವ್ಯ

ಇಂಡಿಯಾವು ಬಹುಮುಖಿ ಸಮಾಜ, ಸಂಸ್ಕೃತಿಗಳನ್ನು ಹೊಂದಿರುವ ರಾಷ್ಟ್ರ. ಇಲ್ಲಿಯ ವಿಭಿನ್ನತೆಗಳು ಎಂದಿಗೂ ಏಕತ್ರಗೊಳ್ಳುವಂಥವಲ್ಲ. ಆದರೆ ಆಯಾ ಚಾರಿತ್ರಿಕ ಸನ್ನಿವೇಶಕ್ಕೆ ಅನುಗುಣವಾಗಿ 'ಒಂದೇ' ನೋಟದಲ್ಲಿ ಪ್ರತಿಬಿಂಬಿಸುವ ಪ್ರಯತ್ನಗಳು ನಡೆದವು. ಇಂಥ ಪ್ರಯತ್ನಗಳಿಗೆ ಪ್ರೇರಣೆ ದೊರೆತದ್ದು ಪಾಶ್ಚಾತ್ಯ ಚಿಂತನಾ ನೆಲೆಗಳಿಂದ. ಅದರಲ್ಲೂ ವಸಾಹತುಶಾಹಿ ರಾಷ್ಟ್ರಗಳು ನಮ್ಮನ್ನು ದಾಸ್ಯಕ್ಕೆ ಒಳಗು ಮಾಡಿಕೊಂಡಾಗ. ಇದೇ ಸಂದರ್ಭದಲ್ಲಿ ಹುಟ್ಟಿಕೊಂಡದ್ದೇ 'ರಾಷ್ಟ್ರೀಯತೆ' ಎಂಬ ಪರಿಕಲ್ಪನೆ. ಈ ಪರಿಕಲ್ಪನೆ ೧೮-೧೯ನೆಯ ಶತಮಾನಗಳಲ್ಲಿ ಅನಾವರಣಗೊಂಡಾಗ ಇಲ್ಲಿನ ಸ್ಥಿತಿ-ಗತಿಗಳಿಗೆ ಅಂತರಸಂಬಂಧವನ್ನು ಕಲ್ಪಿಸಿತ್ತು. ಅಂದರೆ ವಸಾಹತುಶಾಹಿ ದಾಸ್ಯದ ಮೂಸೆಗೆ ಸಿಲುಕಿದ್ದ ನಮ್ಮ ಮನೋ-ಚಿಂತನೆಗಳ ಕೂಸಾಗಿ ರೂಪು ತಳೆದ 'ಏಕೀಭಾವ'ದ ನೋಟ ಇಂದಿಗೂ ಅನೇಕ ಬಗೆಯ ಅವಸ್ಥಾಂತರಗಳಿಗೆ ಈಡುಮಾಡುತ್ತಿದೆ. ಉದಾಹರಣೆಗೆ 'ರಾಷ್ಟ್ರೀಯತೆ'ಯ ನೆರಳಿನಲ್ಲಿಯೆ ಅನಾವರಣಗೊಂಡ 'ಕೋಮುವಾದ'ದ ಪರಿಕಲ್ಪನೆ. ಇದು ಸಮಕಾಲೀನ ಅಗತ್ಯಗಳಿಗೂ ಮೀರಿ ದೊಡ್ಡ 'ಭೂತ'ವಾಗಿ ಕಾಡುತ್ತಿರುವುದನ್ನು ನಾವು ಇಂದು ಅನುಭವಿಸುತ್ತಿದ್ದೇವೆ. ಇಂಥ ಅನುಭವ-ಅನುಭೂತಿಗಳ ಹಿಂದೆ ಚಾರಿತ್ರಿಕ 'ಹರವು' ಇದೆ. ಈ 'ಹರವ'ನ್ನು 'ರಾಷ್ಟ್ರೀಯತೆ'ಯ ಸಂಕಥನದ ಅಡಿಯಲ್ಲಿ ಸಂರಚನೆಗೊಂಡ ಪ್ರತಿಮೆ-ಪ್ರತೀಕಗಳ ಮುಖೇನ ಪರಿಶೀಲಿಸುವುದು ಪ್ರಸ್ತುತ ಲೇಖನದ ಆಶಯ.

ಇಂಗ್ಲಿಷ್ ಶಿಕ್ಷಣ ಮತ್ತು ಪಾಶ್ಚಾತ್ಯ ಚಿಂತನಾ ನೆಲೆಗಳಿಂದ ರೂಪು ತಳೆದ ನಮ್ಮ ವೈಚಾರಿಕತೆ ವಸಾಹತುಶಾಹಿ ಧೋರಣೆಗಳನ್ನು ವಿರೋಧಿಸುವ ನೆಲೆಗಳಿಗೆ ಮಾತ್ರ ಸೀಮಿತವಾಗಲಿಲ್ಲ. ಬದಲಾಗಿ ಅದು ನಮ್ಮ ಸ್ವಾತಂತ್ರ್ಯದ ಆಶಯದ ಸಾಕಾರತೆಯ ಅನಂತರವೂ ಇಲ್ಲಿನ ಬಹುಮುಖಿ ಸಮಾಜ-ಸಂಸ್ಕೃತಿಗಳನ್ನು ಛಿದ್ರ ಮಾಡುವಲ್ಲಿ ಲೀನವಾಗಿದೆ. ಈ ಪ್ರಕ್ರಿಯೆಗಳನ್ನು 'ರಾಷ್ಟ್ರ', 'ರಾಷ್ಟ್ರೀಯತೆ', 'ಹೆಣ್ಣು' ಸಂಕಥನಗಳ ಮೂಲಕ ಪರಿಶೀಲಿಸಬೇಕಾದ ಜರೂರು ಈ ಸಂಪ್ರಬಂಧದ್ದು. ಅಷ್ಟೇ ಅಲ್ಲದೆ ಈ ಸಂಕಥನದ ಪರಿಶೀಲನೆಗೆ ಬಂಕಿಮಚಂದ್ರ ಚಟರ್ಜಿ ಹಾಗೂ ಅವರ 'ವಂದೇ ಮಾತರಂ' ಕವಿತೆಯ ಪರಿಣಾಮಗಳನ್ನು ಆಧುನಿಕ ಕನ್ನಡ ಕಾವ್ಯದ ಮೂಲಕ ನೋಡುವ ನೋಟವು ಈ ಪ್ರಬಂಧದಲ್ಲಿ ಅಡಗಿದೆ.

ವ್ಯಾಪಾರ-ವಾಣಿಜ್ಯದ ಉದ್ದೇಶಗಳಿಗಾಗಿ ಬಂದ ಇಂಗ್ಲಿಷರು ಕ್ರಮೇಣ ಭಾರತೀಯ ಸಮಾಜ-ಸಂಸ್ಕೃತಿಗಳನ್ನು ಪ್ರವೇಶಿಸಿ ಅಧ್ಯಯನ ಮಾಡಿದರು. ಇದರಿಂದ ಅವರಿಗೆ ಭಾರತೀಯ ಜನಸಮುದಾಯಗಳನ್ನು ವಿಭಿನ್ನತೆಗಳ ಹಿನ್ನೆಲೆಯಲ್ಲಿ ಒಡೆದು ನೋಡುವ ತಂತ್ರ ಹೊಳೆಯಿತು. ಹೀಗಾಗಿ ಇಲ್ಲಿನ ಭಾಷೆ, ಧರ್ಮಗಳನ್ನು ಆಧಾರವನ್ನಾಗಿಸಿಕೊಂಡು ತಮ್ಮ ಆಳ್ವಿಕೆಗೆ ಅನುಕೂಲವಾಗುವಂತೆ ಇಂಡಿಯಾವನ್ನು ತುಂಡರಿಸಿದರು. ಇದರಿಂದ ಒಂದೇ ಭಾಷೆಯನ್ನು ಆಡುವ ಜನರು ಬೇರೆ ಬೇರೆ ಭಾಷೆಗಳನ್ನು ಆಡುವ ಜನರೊಂದಿಗೆ ಬೆರೆತು ಸಾಂಸ್ಕೃತಿಕವಾಗಿ ಸಂಘರ್ಷಕ್ಕಿಳಿಯುವಂತೆ ಆಯಿತು. ಆಂತರಿಕ ಒಡಕು ಧ್ವನಿಗಳು ಸಹ ಆಂಗ್ಲ ಸರದಾರರಿಗೆ ಅನುಕೂಲವಾದವು. ತಮ್ಮ 'ಒಡೆದು-ಆಳುವ' ನೀತಿಗೆ ಅನುಗುಣವಾಗಿ ಇಂಡಿಯಾದ ರಾಜಕಾರಣವನ್ನು ಸಹ ದಕ್ಕಿಸಿಕೊಂಡದ್ದು ಚರಿತ್ರೆಗೆ ಸೇರಿಹೋದ ಸಂಗತಿ. ಆದರೆ ಈ ಪ್ರಕ್ರಿಯೆಯಲ್ಲಿ ಇನ್ನುಳಿದ ಭಾಷಿಕರಂತೆ ಕನ್ನಡಿಗರು ಸಹ ಭಿನ್ನ ಭಾಷಿಕರೊಂದಿಗೆ ಹರಿದುಹೋದದ್ದು ಗಮನಿಸಬೇಕಾದ ವಿಚಾರ. ಇದರಿಂದ ಕನ್ನಡಿಗರು ರಾಷ್ಟ್ರಮಟ್ಟದಲ್ಲಿ ಇಂಡಿಯಾದ ಸ್ವಾತಂತ್ರ್ಯಕ್ಕೂ, ಪ್ರಾಂತೀಯ ಮಟ್ಟದಲ್ಲಿ ನಾಡಿನ ಏಕೀಕರಣಕ್ಕೂ ಪ್ರತಿಕ್ರಿಯಿಸಬೇಕಾಗಿತ್ತು. ಇಂಥದೇ ಸಂದಿಗ್ಧ ಸ್ಥಿತಿ ಬಂಗಾಳಿ, ಒರಿಯಾ, ಅಸ್ಸಾಮಿ, ಮರಾಠಿ, ತಮಿಳು, ತೆಲುಗು, ಮಲೆಯಾಳ ಮೊದಲಾದ ಭಾಷಿಕರಿಗೂ ಆಗಿತ್ತು. ಏಕಕಾಲದಲ್ಲಿ ರಾಷ್ಟ್ರ ಹಾಗೂ ಪ್ರಾಂತೀಯತೆಯ ಆಶಯಗಳ ಸಾಕಾರತೆಗೆ ನಡೆಸಿದ ಪ್ರಯತ್ನಗಳು ಕುತೂಹಲಕಾರಿಯಾದುದು.

ಪಿ. ಆರ್. ಗೋವಿಂದರಾಜು

ವಸಾಹತುಶಾಹಿ ದಾಸ್ಯದ ಮೂಸೆಗೆ ಸಿಲುಕಿದ್ದ ನಮ್ಮ ಮನೋ-ಚಿಂತನೆಗಳ ಕೂಸಾಗಿ ರೂಪು ತಳೆದ 'ಏಕೀಭಾವ'ದ ನೋಟ ಇಂದಿಗೂ ಅನೇಕ ಬಗೆಯ ಅವಸ್ಥಾಂತರಗಳಿಗೆ ಈಡುಮಾಡುತ್ತಿದೆ. ಉದಾಹರಣೆಗೆ 'ರಾಷ್ಟ್ರೀಯತೆ'ಯ ನೆರಳಿನಲ್ಲಿಯೆ ಅನಾವರಣಗೊಂಡ 'ಕೋಮುವಾದ'ದ ಪರಿಕಲ್ಪನೆ. ಇದು ಸಮಕಾಲೀನ ಅಗತ್ಯಗಳಿಗೂ ಮೀರಿ ದೊಡ್ಡ 'ಭೂತ'ವಾಗಿ ಕಾಡುತ್ತಿರುವುದನ್ನು ನಾವು ಇಂದು ಅನುಭವಿಸುತ್ತಿದ್ದೇವೆ. ಇಂಥ ಅನುಭವ-ಅನುಭೂತಿಗಳ ಹಿಂದೆ ಚಾರಿತ್ರಿಕ 'ಹರವು' ಇದೆ. ಈ 'ಹರವ'ನ್ನು 'ರಾಷ್ಟ್ರೀಯತೆ'ಯ ಸಂಕಥನದ ಅಡಿಯಲ್ಲಿ ಸಂರಚನೆಗೊಂಡ ಪ್ರತಿಮೆ-ಪ್ರತೀಕಗಳ ಮುಖೇನ ಪರಿಶೀಲಿಸುವುದು ಪ್ರಸ್ತುತ ಲೇಖನದ ಆಶಯ.

ವಸಾಹತುಶಾಹಿ ಪ್ರಭುತ್ವಕ್ಕೆ ಪ್ರಬಲವಾದ ಪ್ರತಿಕ್ರಿಯೆ ಪ್ರತಿರೋಧಗಳನ್ನು ಒಡ್ಡುವಲ್ಲಿ ಅಂದಿನ ನವೋದಯ ಸಾಹಿತ್ಯ ಸೃಷ್ಟಿ, ವೈಚಾರಿಕತೆಗಳು ಪೂರಕವಾದವು. ಅಲ್ಲದೆ ಈ ಪ್ರಕ್ರಿಯೆ - ಪ್ರಯತ್ನಗಳಿಗೆ ಬಳಕೆ ಆದದ್ದು ಸ್ಥಳೀಯ ಭಾಷಿಕ ಅಸ್ಮಿತೆ (identity) ಹಾಗೂ ಸಾಂಸ್ಕೃತಿಕ ಆಯಾಮಗಳು. ಇದಕ್ಕೆ ತಮ್ಮನ್ನು ತಾವು ತೊಡಗಿಸಿಕೊಂಡವರು ಸಾಹಿತಿ-ಕಲಾವಿದರು ಹಾಗೂ ಸಮಾಜ ಸುಧಾರಣಾ ಚಳವಳಿಕಾರರು. ಆರಂಭದಲ್ಲಿ ಬಂಗಾಳಿಗಳಿಂದ ಆರಂಭಗೊಂಡ ಇಂಥ ಪ್ರಯತ್ನಗಳು ಇತರೆ ಪ್ರಾಂತೀಯ ಭಾಷಿಕರಲ್ಲೂ ಕಾಣಿಸಿಕೊಳ್ಳದೆ ಇರಲಿಲ್ಲ. ಈ ಸಂದರ್ಭದಲ್ಲಿ ಭಾರತೀಯ ಚಿಂತನಶೀಲರಲ್ಲಿ ಆಂತರಿಕ ಹಾಗೂ ಬಾಹ್ಯ ಎರಡೂ ನೆಲೆಗಳಲ್ಲೂ ಅನೇಕ ಸವಾಲುಗಳು ಎದುರುಗೊಂಡವು. ಏಕೆಂದರೆ ಜನರು ಕ್ರಿಯಾಶೀಲರಾಗಬೇಕಿದ್ದಲ್ಲಿ ಅವರಿಗೆ ಸ್ವೀಕೃತವಾಗುವ ತಂತ್ರಗಳನ್ನು ಮಾತ್ರ ಬಳಸಬೇಕಾದ ಅನಿವಾರ್ಯತೆ ಅಂದಿನದು. ಕೆಂಪು ಸರದಾರರ ಧೋರಣೆ, ಚಟುವಟಿಕೆಗಳನ್ನು ಸ್ಥಳೀಯರಿಗೆ ಮನವರಿಕೆ ಮಾಡಿಕೊಡುವುದು ಸುಲಭದ ಮಾತಾಗಿರಲಿಲ್ಲ. ಏಕೆಂದರೆ ಅವರಲ್ಲಿ 'ಪಾರತಂತ್ರ್ಯ'ದ ಅರಿವು ಮೂಡುವುದು ತಮ್ಮತನದ ಅರಿವಿನಿಂದಾಗಿ ಮಾತ್ರ. ಈ ಆಶಯಕ್ಕಾಗಿ ನವೋದಯ ಕಾವ್ಯಸೃಷ್ಟಿ ಭಿನ್ನ ಬಗೆಯ ಪರಿಕರಗಳನ್ನೇ ಬಳಸಬೇಕಾಯಿತು. ಸ್ವದೇಶಿ, ಸ್ವಭಾಷೆ, ಸ್ವಧರ್ಮ, ಸ್ವಅಭಿಮಾನ, ಸ್ವಸಂಸ್ಕೃತಿ, ಸ್ವರಾಜ್ಯ ಮೊದಲಾದವುಗಳನ್ನು ತಮ್ಮ ಸಾಹಿತ್ಯ ಸೃಷ್ಟಿಯಲ್ಲಿ ಪ್ರತಿಬಿಂಬಿಸಬೇಕಾಗಿತ್ತು. ಇದಕ್ಕೆ ಭಾರತೀಯ ಪರಂಪರೆಯಲ್ಲಿಯೇ ಇದ್ದ ಪೂಜ್ಯತೆ, ಮಮತೆ, ಆಧ್ಯಾತ್ಮಿಕತೆಗಳು ಸಹಾಯಕ್ಕೆ ಬಂದವು. ಅಲ್ಲದೆ ಚರಿತ್ರೆ, ಐತಿಹ್ಯ, ಧರ್ಮ, ಪುರಾಣಗಳಲ್ಲಿನ ರೂಪಕ-ಪ್ರತೀಕಗಳು ಪ್ರಧಾನ ಅಸ್ತ್ರಗಳಾಗಿ ಪರಿಣಮಿಸಿದವು. ರಾಷ್ಟ್ರೀಯತೆಯ ಸಂಕಥನದಲ್ಲಿ ರಾಷ್ಟ್ರಕ್ಕಾಗಿ ತ್ಯಾಗ-ಬಲಿದಾನ, ದ್ವೇಷ-ಕೆಚ್ಚು-ವೀರತ್ವ, ಕ್ರಾಂತಿ ಸ್ವರೂಪದ ವೈಚಾರಿಕತೆಗಳನ್ನು ಮೂಡಿಸಲಾಯಿತು. ಆಗ ಅನಾವರಣಗೊಂಡದ್ದೇ 'ಹೆಣ್ಣು' ಸಂಕಥನದ ಭಿನ್ನ ಚಹರೆಗಳು.

ಪ್ರಾಚೀನ ಕಾವ್ಯ-ಪುರಾಣಗಳಲ್ಲಿದ್ದ 'ಹೆಣ್ಣಿ'ನ ಹಲವು ಪ್ರತಿಮೆ-ರೂಪಕಗಳು 'ರಾಷ್ಟ್ರ'ಕ್ಕೆ ಸಮಾನವಾದ ಪ್ರತೀಕಗಳಾಗಿ ರೂಪು ತಳೆಯತೊಡಗಿದ್ದು ಮಹತ್ವದ ಸಂಗತಿ. ನಮ್ಮಲ್ಲಿದ್ದ 'ಭೂಮಿ'ಯನ್ನು ಕುರಿತ 'ಲಕ್ಷ್ಮಿ'ಯನ್ನಾಗಿ ನೋಡುವ ನೋಟ (ವಿಷ್ಣು ಪತ್ನಿ) ಅಥವಾ 'ರಾಜ್ಯಲಕ್ಷ್ಮಿ'ಯನ್ನಾಗಿ ಗುರುತಿಸುವ ಪ್ರಕ್ರಿಯೆಗಳನ್ನು ಇನ್ನಷ್ಟು ವಿಸ್ತೃತಗೊಳಿಸಲಾಯಿತು. ಅಂದರೆ ಹಿಂದಿನ 'ಪೂಜ್ಯತೆ'ಯ ಭಾವಕ್ಕೆ 'ಮಮತೆ'ಯ ಪರಿಭಾವವನ್ನು ಅಳವಡಿಸಿದ್ದು

ಗಮನಾರ್ಹ. ಈ ಮಮತೆಯ ಪರಿಭಾವವೇ 'ತಾಯಿ'ಯ ಪ್ರತೀಕ. ಪೋಷಿಸುವ ಕಾರುಣ್ಯದ ಈ ನೋಟ ಅಂದಿನ ಕಾವ್ಯದಲ್ಲಿ ಮೂಡಿಸಿದವರು ಬಂಗಾಳದ ಬಂಕಿಮ ಚಂದ್ರ ಚಟರ್ಜಿ ಅವರು. 'ವಂದೇ ಮಾತರಂ' ಕವಿತೆಯ ಈ ನೋಟ ಇತರೆ ಭಾಷಿಕರಲ್ಲಿ ಕಾಣಿಸಿಕೊಂಡಂತೆ ಕನ್ನಡದಲ್ಲೂ ಕಾಣಿಸಿಕೊಳ್ಳದೆ ಇರಲಿಲ್ಲ. ಇದಕ್ಕೆ ಪ್ರೇರಣೆ ಮಾತ್ರ ಬಂಗಾಳಿಗಳ ಪ್ರಯತ್ನಗಳೇ ಆಗಿವೆ. ಅಷ್ಟೆ ಅಲ್ಲದೆ 'ತಾಯಿ'ಯನ್ನು ದುರ್ಗೆ, ಕಾಳಿ, ಚಂಡಿಯನ್ನಾಗಿಸಿದ ರೌದ್ರರೂಪಿ ಹೆಣ್ಣಿನ ಚಹರೆಯ ಕೊಡುಗೆಯೂ ಸಹ ಬಂಗಾಳಿಗಳದೇ. ಈ ಸಂಕಥನದ ವಿಶ್ಲೇಷಣೆಗಳನ್ನು ಬಂಗಾಳಿ ಭಾಷಿಕರ ಮುಖೇನ ಕನ್ನಡದಲ್ಲೂ ಪರಿಶೀಲಿಸಬಹುದು.

ರಾಷ್ಟ್ರೀಯತೆಯ 'ಏಕೀಭಾವ'ದ ನೋಟಗಳು ಜನರಲ್ಲಿ ಅಭಿವ್ಯಕ್ತಗೊಳ್ಳಲು ಹಾಗೂ ಬಂಕಿಮರು ಸಾಹಿತ್ಯ ಸೃಷ್ಟಿ ಮಾಡುವುದಕ್ಕೆ ಮೊದಲೇ ಬಂಗಾಳ ಪ್ರದೇಶದಲ್ಲಿ ಆಧುನಿಕತೆಯ ಪ್ರಕ್ರಿಯೆಗಳು ಹಿನ್ನೆಲೆಯನ್ನು ಒದಗಿಸಿದ್ದವು. 'ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ'ಯು ತನ್ನ ಅಸ್ತಿತ್ವದ ಹಾದಿಯಲ್ಲಿ ಸ್ಥಳೀಯ ಮುಸ್ಲಿಂ ಸುಲ್ತಾನರನ್ನು ಕೊನೆಗಾಣಿಸು ವದಷ್ಟನ್ನೇ ಮಾಡಿರಲಿಲ್ಲ. ಬದಲಾಗಿ ಅದರ ವೇಗವು ತನ್ನ ಅವಶ್ಯಕತೆಗಳಿಗಾಗಿ ಇಲ್ಲಿ ಆಂಗ್ಲ ಶಿಕ್ಷಣ, ಪಾಶ್ಚಾತ್ಯ ವೈಚಾರಿಕತೆಗಳ ಪ್ರಜ್ಞೆಯನ್ನು ಮೂಡಿಸಿತ್ತು. ಸಾಹಿತ್ಯ ಕ್ಷೇತ್ರದಲ್ಲಿಯೂ ನವೋದಯದ ಆಶಯಗಳು ಅಭಿವ್ಯಕ್ತವಾದ ಘಟ್ಟ ಇದು. ಇವೆಲ್ಲವನ್ನೂ ಗಂಭೀರವಾಗಿ ಅವಲೋಕಿಸುತ್ತಿದ್ದ ಬಂಗಾಳಿ ಮೇಲ್ಮಧ್ಯಮ ವರ್ಗ ಬಹಳ ಬೇಗನೆ ಈ ಪ್ರಕ್ರಿಯೆಯ ಅನುಕರಣೆಗೆ ಮೋಹಿತವಾಯಿತು. ಇದರಿಂದ ಇಂಗ್ಲಿಷ್ ಶಿಕ್ಷಣ ವೈಚಾರಿಕತೆಗಳು ಇಂಡಿಯಾದ ಅನಿಷ್ಟ ಸ್ಥಿತಿ-ಗತಿಗಳನ್ನು ಅನಾವರಣಗೊಳಿಸಿದವು. ಅಷ್ಟೇ ಅಲ್ಲದೆ ಇಂಗ್ಲಿಷಿನಲ್ಲಿಯೇ ಮಾತನಾಡುವ, ಬರೆಯುವ ಹೆಮ್ಮೆಯನ್ನು ಬೆಳೆಸಿಕೊಂಡಿದ್ದ ವರಲ್ಲಿ ಪರಕೀಯತೆಯ ಪ್ರಜ್ಞೆ ಕಾಡತೊಡಗಲು ಆರಂಭಿಸಿತ್ತು. ಹೀಗಾಗಿ ಇಂಗ್ಲಿಷ್ 'ಸಮೂಹ ಸನ್ನಿ'ಗೆ ಒಳಗಾದ ಬಂಗಾಳಿ ನವೋದಯ ಸಾಹಿತಿಗಳು ಎಚ್ಚರಗೊಂಡರು. ಆ ಮೂಲಕ ತಮ್ಮ ಕಾವ್ಯಾಭಿವ್ಯಕ್ತಿಯಲ್ಲಿ ನಾಡು, ನುಡಿ, ರಾಷ್ಟ್ರ, ರಾಷ್ಟ್ರೀಯತೆ, ದಾಸ್ಯ ಮೊದಲಾದ ಪರಿಕಲ್ಪನೆಗಳನ್ನು ಅಳವಡಿಸಿಕೊಂಡು ವಸಾಹತು ಸರದಾರರಿಗೆ ಪ್ರತಿಕ್ರಿಯಿಸ ಲಾರಂಭಿಸಿದ್ದು ವಿಶೇಷವಾದದ್ದು. ತಮ್ಮನ್ನು ಅನುಕರಣೆ ಮಾಡಿ ಇಂಗ್ಲಿಷ್ ಮೋಹಕ್ಕೆ ಒಳಗಾಗುತ್ತಿದ್ದ ಯುವ ಜನಾಂಗಕ್ಕೆ ಸ್ವಭಾಷೆ, ಸ್ವಸಂಸ್ಕೃತಿಗಳ ಬಗ್ಗೆ ಗಮನಹರಿಸುವಂಥ ಹಿಂದಿನ ತಲೆಮಾರಿನವರು ಪ್ರೇರಣೆ ನೀಡಲಾರಂಭಿಸಿದ್ದರು. ಬಂಕಿಮಚಂದ್ರರು ಸಹ ಅಂದು ಇಂಗ್ಲಿಷಿನಲ್ಲಿ ಬರೆಯುತ್ತಿದ್ದ ಕವಿ-ಸಾಹಿತಿಗಳನ್ನು ''ಇಂಗ್ಲಿಷ್ ಬರಹಗಳ ಮೂಲಕ ನೀವು ಎಂದಿಗೂ, ಜೀವಂತವಾಗಿರಲಾರಿರಿ...'' ಎಂದು ಜರೆದದ್ದು ಉಂಟು. ಮುಂದೆ ತಮ್ಮ 'ವಂಗದರ್ಶನ್' ನಿಯತಕಾಲಿಕದಲ್ಲಿ ಬಂಕಿಮರು ''...ನಾಲ್ಕಾರು ಸಾವಿರ ನಕಲಿ ಆಂಗ್ಲರಲ್ಲದೆ ನಾವು ಮೂವತ್ತು ಕೋಟಿ ಸಾಹೇಬರಾಗಲಾರೆವು'' ಎಂದು ಇಂಗ್ಲಿಷ್ ವ್ಯಾಮೋಹಿಗಳನ್ನು ಕುರಿತು ದಾಖಲಿಸಿದ್ದಾರೆ.

ಕೊಲ್ಕತ್ತಾ-ಬಂಗಾಳ ಭೂಪರಿಸರವು ಅಂದು ಇಂಡಿಯಾದ ರಾಜಕಾರಣದ ಕೇಂದ್ರವೂ, ರಾಜಧಾನಿಯೂ ಮಾತ್ರವೇ ಆಗಿರಲಿಲ್ಲ. ಸಾಂಸ್ಕೃತಿಕವಾಗಿಯೂ ತನ್ನದೇ ಆದ ಛಾಪನ್ನು ಮೂಡಿಸಿತ್ತು. ಕೇವಲ ಭೌತಿಕ ನೆಲವೆಂದೇ ತಿಳಿದಿದ್ದ ಆಂಗ್ಲರಿಗೆ ಬೌದ್ಧಿಕವಾಗಿ ಪೆಟ್ಟುಕೊಟ್ಟ ತಾಣವೂ ಇದಾಗಿತ್ತು. 'ಇಂಡಿಯಾ' ಎಂಬುದು ಜಡ್ಡುಗಟ್ಟಿದ, ನಿಷ್ಕ್ರಿಯವಾದ, ಚರಿತ್ರೆ ರಹಿತ ಭೂಪರಿಸರ ಎಂದೇ ಭಾವಿಸಿದ್ದ ಆಂಗ್ಲರಿಗೆ ಆಧುನಿಕತೆಯನ್ನು ಮೊಟ್ಟಮೊದಲಿಗೆ ಅನುಕರಣೆ ಮಾಡಿದ್ದ 'ಬಂಗಾಳಿ ಬಾಬು'ಗಳಿಂದಲೇ ಪ್ರತಿರೋಧ ಗಳನ್ನು ಎದುರಿಸುವಂತೆ ಆಯಿತು. 'ಕೇವಲ ಮಣ್ಣು' ಎಂದು ತಿಳಿದಿದ್ದ ಅವರಿಗೆ ಭಾರತೀಯ ಧರ್ಮ-ಪುರಾಣ-ಚರಿತ್ರೆ-ಐತಿಹ್ಯಗಳಿಂದ ಆಯ್ದ ಸಾಂಸ್ಕೃತಿಕ ಪರಿಕರಗಳ ಮುಖೇನ ಸವಾಲುಗಳನ್ನು ಒಡ್ಡಿದ್ದು ಗಮನಾರ್ಹ. ಇಂಥ ಪ್ರತಿಕ್ರಿಯೆ-ಪ್ರತಿರೋಧಗಳನ್ನು ಬಂಗಾಳಿಗಳು ಪಾಶ್ಚಾತ್ಯರು ಸೃಷ್ಟಿಸಿದ್ದ 'ಒರಿಯೆಂಟಲಿಸ್ಟ್' 'ವೈಭವೀಭೂತ'ವನ್ನು ಅದರ ತಂತ್ರ-ಹುನ್ನಾರಗಳ ಮೂಲಕವೇ ಮತ್ತೆ ಆ ಕಡೆಗೇ ತಿರುಗಿಸಿದ್ದರಿಂದ ಅವರು ಬಲಿ ಆಗಬೇಕಾಯಿತು. ಇದರ ಮುಂದುವರೆದ ತೀವ್ರ ಪರಿಣಾಮವೇ ಅದು ನಮ್ಮನ್ನು ಸಹ ಬಲಿ ಆಗುವಂತೆ ಮಾಡಿದ ಈ ಹೊತ್ತಿನ ಪರಿಸ್ಥಿತಿ. ಆದರೆ ಈ ಚರ್ಚೆಯನ್ನು ನಂತರ ಪರಿಶೀಲಿಸಬಹುದು.

ದಾಸ್ಯದ ಸ್ಥಿತಿಗಳನ್ನು ಜನರಿಗೆ ಮನವರಿಕೆ ಮಾಡಿಕೊಡುವುದರ ಜೊತೆಗೆ ಅಂದಿನ ಸಾಮಾಜಿಕವಾದ ಅನಿಷ್ಟಗಳ ಕಡೆಗೂ ಗಮನ ಸೆಳೆಯುವಂತೆ ಮಾಡಿದವರು ಬಂಗಾಳಿ ಸಮಾಜ ಸುಧಾರಕರು. ಇದರಿಂದಾಗಿ ಜನರ ವೈಚಾರಿಕ ಪ್ರಜ್ಞೆ ಜಾಗೃತಗೊಳ್ಳುವಂತೆ ಆಯಿತು. ೧೯ನೆಯ ಶತಮಾನದ ಪೂರ್ವಾರ್ಧದ ವೇಳೆಗೆ ನಮ್ಮಲ್ಲಿ ಪರಕೀಯತೆಯ ಸ್ಪಷ್ಟ ಚಿತ್ರಣ ಹಾಗೂ ರಾಷ್ಟ್ರೀಯತೆಯ ಪ್ರಭಾವ-ಪರಿಣಾಮಗಳು ಗೋಚರವಾಗತೊಡಗಿದ್ದವು.

ಇದಕ್ಕೆ ಆಂಗ್ಲ ಸರದಾರರು ತಮ್ಮ ತೀವ್ರತರವಾದ ತಡೆಗಳ ಜೊತೆಗೆ ಕುತಂತ್ರ-ಹುನ್ನಾರ ಗಳನ್ನು ಭಾರತೀಯ ಜನಸಮುದಾಯ-ಸಂಸ್ಕೃತಿಗಳ ನಡುವೆ ಪ್ರಯೋಗ ಮಾಡಲು ಆರಂಭಿಸಿದ್ದರು. ಇವರಿಗೆ ಇಲ್ಲಿನ ಭಾಷೆಗಳು, ಧರ್ಮ-ಆಚರಣ ವಿಚಾರಗಳು ಸಹಕರಿಸಿದ್ದವು. ಈ ಘಟ್ಟದಲ್ಲಿಯೇ ಧಾರ್ಮಿಕ ನೆಲೆಯ 'ಕೋಮುವಾದಿ' ಚಿಂತನೆಗಳು ಆರಂಭದ ಹೆಜ್ಜೆಗಳನ್ನು ಇರಿಸಿದ್ದು. ಆಂಗ್ಲರಿಗೆ ಭಾರತೀಯ ಸಮಾಜ-ಧರ್ಮಗಳ ನಡುವೆ ಅಂತರಸಂಬಂಧ ಇರುವುದು ಸ್ಪಷ್ಟ ಆಗಿತ್ತು. ಯಾವುದೇ ಸಾಮಾಜಿಕ ಪ್ರತಿಕ್ರಿಯೆಗೂ ಪ್ರಬಲವಾದ ಧಾರ್ಮಿಕ ಒತ್ತಡ, ತಾತ್ವಿಕತೆಗಳು ಹಿನ್ನೆಲೆಯಾಗಿ ಇರುತ್ತವೆ ಎಂಬುದನ್ನು ಪ್ರಗತಿಪರ ಭಾರತೀಯರು ಹಾಗು ಆಂಗ್ಲರು ಏಕಕಾಲದಲ್ಲಿ ಗ್ರಹಿಸಿದ್ದು ಈ ಘಟ್ಟದಲ್ಲಿಯೇ. ಭಾಷೆ ಹಾಗೂ ಧರ್ಮಗಳ ಮುಖೇನ ಒಡಕನ್ನು ಉಂಟುಮಾಡುತ್ತಿದ್ದ ಆಂಗ್ಲರಿಗೆ ಅವು ಗಳಿಂದಲೇ ಬುದ್ಧಿ ಕಲಿಸಲು ಬಂಗಾಳಿ ಬುದ್ಧಿಜೀವಿಗಳು ಪ್ರಯತ್ನಗಳನ್ನು ಮಾಡತೊಡಗಿದರು. ರಂಗಲಾಲ್ ವಂದ್ಯೋಪಾಧ್ಯಾಯರಂಥವರು ತಮ್ಮ 'ಕಾಂಚಿ-ಕಾವೇರಿ'ಯಲ್ಲಿ ಸ್ವರ್ಗ-ನರಕಗಳ ಮೂಲಕವೇ ದಾಸ್ಯದ ಚಿಂತನೆಯನ್ನು ಮೂಡಿಸಿದ್ದರು. ಅವರು ''ಕೋಟಿಕಾಲ ದಾಸರಾಗಿ ಇರುವುದು ನರಕಕ್ಕೆ ಸರಿಸಮವಾದುದು, ಅದೇ ಒಂದು ದಿನದ ಸ್ವಾತಂತ್ರ್ಯವೂ ಸಹ ಸ್ವರ್ಗಕ್ಕೆ ಸಮಾನವಾದುದ್ದು'' ಎಂಬ ಅರ್ಥದಲ್ಲಿ ಜಾಗೃತಿ ಮೂಡಿಸಿದ್ದರು.

ಬಂಗಾಳದ ಪರಿಸರದಲ್ಲಿಯೆ ಡಾ. ಇಕ್ಬಾಲ್‌ರಂಥ ಕವಿ ತಮ್ಮ 'ತರನಾಯೇ ಹಿಂದ್' ಮುಖೇನ 'ಸಾರೆ ಜಹಾಂಸೆ ಅಚ್ಛಾ'ವನ್ನು ನೀಡಿದ್ದಲ್ಲದೆ, ಮಂದಿರ-ಮಸೀದಿಗಳೆರಡನ್ನು ತಿರಸ್ಕರಿಸಿದ್ದು ಗಮನಾರ್ಹ. ಇವರಿಗೆ ಮಣ್ಣಿನ ಕಣ ಕಣವು ದೇವರೇ ಆಗಿತ್ತು. ಇದರಿಂದ ಜಾತ್ಯತೀತ ಮನೋಚಿಂತನೆಗಳೂ ಮೂಡದೆ ಇರಲಿಲ್ಲ. ನಸರುಲ್ ಇಸ್ಲಾಂ, ಜಸೀಮುದ್ದೀನ್, ಶಬ್ಬೀರ್ ಹಸನ್ ಖಾನ್, ಮುನ್ಷಿ ಪ್ರೇಮ್‌ಚಂದ್ ಮೊದಲಾದವರು ಉರ್ದುವಿನಲ್ಲಿ ಬರೆಯುವುದರ ಮುಖೇನ ರಾಷ್ಟ್ರೀಯತೆಯನ್ನು ಮೆರೆದರು. ಜೊತೆಗೆ ಇದೇ ಸಂದರ್ಭದಲ್ಲಿ ಬಂಗಾಳಿ ತರುಣರಲ್ಲಿ ಕ್ರಾಂತಿಕಾರಕ ಮನೋಚಿಂತನೆಗಳು ಸಹ ಮನೆ ಮಾಡತೊಡಗಿದ್ದವು. ಸ್ವರ್ಣಕುಮಾರಿ, ಸರಳಾದೇವಿ, ಗಂಗಾಮಣಿ ದೇವಿ, ಆನಂದಮಯಿ, ಪಂಕಜಿನಿ ಬಸು, ಸರೋಜಿನಿ – ಮೊದಲಾದ ಕವಯತ್ರಿಯರು ತಮ್ಮ ಸಾಹಿತ್ಯ ಸೃಷ್ಟಿಯಲ್ಲಿ ರಾಷ್ಟ್ರ ಪ್ರೇಮದ ಜಾಗೃತಿಗಾಗಿ ಹಾತೊರೆದದ್ದು ಉಂಟು.

ಧರ್ಮದ ಹಿನ್ನೆಲೆಯ ಕೋಮುವಾದಿ ನೆಲೆಗಳ ಆರಂಭಿಕ ಲಕ್ಷಣಗಳು ೧೯ನೆಯ ಶತಮಾನದ ಮೊದಲ ಘಟ್ಟದಲ್ಲಿಯೇ ಕಾಣಿಸಿಕೊಂಡಿರುವ ಉದಾಹರಣೆ, ಉಲ್ಲೇಖಗಳು ಇವೆ. ಆದರೆ ಅವು ಎಲ್ಲಿಯೂ ಹಿಂಸಾತ್ಮಕ ರೂಪಗಳನ್ನು ಪ್ರತಿಬಿಂಬಿಸಿರಲಿಲ್ಲ. ದೇವರು ಮತ್ತು ಮಾನವನ ಅಸ್ತಿತ್ವದ ಚರ್ಚೆ, ಸಂಘರ್ಷಗಳು ನಡೆಯುತ್ತಿದ್ದ ಈ ಘಟ್ಟದಲ್ಲಿ ವಿವೇಕಾನಂದರಾಗಲಿ, ಬಂಕಿಮರಾಗಲಿ ತಮ್ಮ ಜಾತ್ಯಾತೀತ ಎಲ್ಲೆಗಳನ್ನು ಮೀರಿರಲಿಲ್ಲ. ರವೀಂದ್ರನಾಥ ಟಾಗೋರ್ ಎಂದಿಗೂ ರಕ್ತಪಾತ, ಹಿಂಸೆ, ದ್ವೇಷಗಳ ವಿರುದ್ಧವಾಗಿಯೇ ರಾಷ್ಟ್ರೀಯತೆ ರೂಪುತಳೆಯಬೇಕೆಂದು ಚಿಂತನೆ ನಡೆಸಿದವರು. ಇಕ್ಬಾಲ್, ಬಂಕಿಮ, ಟಾಗೋರ್ ಈ ಮೂವರು ವಸಾಹತು ಕಾಲ ಘಟ್ಟದ ಪ್ರತಿಕ್ರಿಯೆಗಾಗಿ ತಮ್ಮ ಕವಿತೆಗಳನ್ನು ರಚಿಸಿದ್ದರೂ ಇವು ಧ್ವನಿಸುವ ಧ್ವನಿಗಳು ಭಿನ್ನ. ಆದರೆ ಈ ಮೂವರು ಭಾರತೀಯರನ್ನು ಸ್ವಾತಂತ್ರ್ಯದ ಸಾಕಾರತೆಗಾಗಿ ಏಕ ಘನಾಕೃತಿಯ ನೆಲೆಗಳಲ್ಲಿಯೇ ಅನಾವರಣಗೊಳಿಸಿದ್ದರು. ಆದರೆ ಇಲ್ಲಿ ಬಂಕಿಮಚಂದ್ರರನ್ನು ಕುರಿತು ವಿಶೇಷವಾಗಿಯೇ ಚರ್ಚಿಸುವ ಜರೂರು ಇದೆ.

ಬಂಗಾಳಿಯಲ್ಲಿ ಮೊದಲ ಕಾದಂಬರಿಯನ್ನು ಒಳಗೊಂಡಂತೆ ಒಟ್ಟು ೧೪ ಕಾದಂಬರಿಗಳನ್ನು ಹಾಗೂ ಹಲವು ಪ್ರಬಂಧಗಳನ್ನು ಬರೆದವರು ಬಂಕಿಮಚಂದ್ರ ಚಟರ್ಜಿ (೧೮೩೮-೧೮೯೪). ಬಂಕಿಮರ 'ವಂದೇಮಾತರಂ' ಕವಿತೆಯ ಚಾರಿತ್ರಿಕ ವಿಶ್ಲೇಷಣೆಗಳನ್ನು ಕುರಿತಂತೆ ಇತ್ತೀಚಿನ ಕೃತಿಯೊಂದು ಅನೇಕ ವಿವರಗಳನ್ನು ನೀಡುತ್ತದೆ. ಅದನ್ನು ರಚಿಸಿದವರು ಸವ್ಯಸಾಚಿ ಭಟ್ಟಾಚಾರ್ಯ ಅವರು. ಈ ಕವಿತೆ ರಚನೆಗೊಂಡ ಘಟ್ಟದಿಂದ ಇಂದಿನವರೆಗೂ ಅನೇಕ ಪರಿಪ್ರೇಕ್ಷ್ಯ (perspective), ವಿಶ್ಲೇಷಣೆಗಳಿಗೆ ಒಳಗಾಗುತ್ತಲೇ ಇದೆ. ಆದರೆ ಅದು ಕಾಲ, ಪ್ರದೇಶ, ವ್ಯಕ್ತಿ ಹಾಗೂ ವಿಭಿನ್ನ ರಾಜಕೀಯ ನಿಲುವುಗಳಿಗೆ ಸಂಬಂಧಿಸಿದಂತೆ ಎಂಬುದು ಸ್ಪಷ್ಟ. ಇದು ಅರಬಿಂದ ಘೋಷ್, ನೆಹರು, ಗಾಂಧಿ, ಜಿನ್ನಾ, ಸಾವರ್ಕರ್ ಮೊದಲಾದವರಿಗೆ (ಈ ಹೊತ್ತಿನ ರಾಜಕಾರಣಿಗಳವರೆಗೆ) ಧ್ವನಿಸುತ್ತಿರುವುದು ಭಿನ್ನವಾಗಿಯೆ. ಅಷ್ಟೇ ಅಲ್ಲದೆ ಕುತೂಹಲ, ಪರಿಣಾಮಗಳಿಗೂ ಎಡೆಮಾಡಿಕೊಟ್ಟ ಈ ಕವಿತೆ ಭಾರತೀಯ ಇತರೆ ಭಾಷಿಕರನ್ನೂ ಅನುಸಂಧಾನಗೊಳಿಸುವಂತೆ ಮಾಡಿತು.

ಬಂಕಿಮರನ್ನು 'ರಾಷ್ಟ್ರೀಯತೆಯ ಋಷಿ' ಎಂದೇ ಕರೆದವರು ಅರಬಿಂದರು. ಅರಬಿಂದೊ ಅವರು ಈ ಕವಿತೆಯನ್ನು ೧೮೭೫ರಲ್ಲಿ ರಚಿಸಲಾಗಿದೆ ಎಂದು ಒಂದೆಡೆ

ಪ್ರಸ್ತಾಪಿಸಿದ್ದಾರೆ. ಆದರೆ ೨೭ ಸಾಲುಗಳುಳ್ಳ 'ವಂದೇ ಮಾತರಂ' ಕವಿತೆ ಎರಡು ಹಂತಗಳಲ್ಲಿ ರಚನೆಗೊಂಡಿರುವುದು ಇತ್ತೀಚಿನ ಅಧ್ಯಯನಗಳಿಂದ ಸ್ಪಷ್ಟ ಆಗಿದೆ. ಮೊದಲ ೧೨ ಸಾಲುಗಳು ೧೮೭೫ರಲ್ಲಿ ಬರೆದಿರಬಹುದಾದರೂ ೧೩ರಿಂದ ೨೭ರವರೆಗಿನ ಸಾಲುಗಳು ೧೮೮೧ರಲ್ಲಿ ರಚನೆಗೊಂಡಂಥವು. ಏಕೆಂದರೆ ಮೊದಲ ೧೨ ಸಾಲುಗಳು Quotation ಗಳ ಮೂಲಕ ದಾಖಲಾಗಿದೆ. ಅನಂತರದವು ೧೮೮೧ರಲ್ಲಿ ಬಂಕಿಮರ 'ಆನಂದ ಮಠ' ಕಾದಂಬರಿಯ ರಚನೆಯ ಸನ್ನಿವೇಶದಲ್ಲಿ ಮೂಡಿಬಂದಂಥವು. ಈ ಕವಿತೆ ತನ್ನ ೨೭ಸಾಲುಗಳಲ್ಲಿ ಮೊಟ್ಟ ಮೊದಲು ಕಾಣಿಸಿಕೊಂಡದ್ದು 'ಆನಂದಮಠ'ದಲ್ಲಿಯೇ. ಇದರಲ್ಲಿನ (ಕವಿತೆಯಲ್ಲಿನ) ೭ ಕೋಟಿ ಪ್ರಸ್ತಾಪದ ಹಿನ್ನೆಲೆಯಲ್ಲಿ ಇದರ ರಚನೆಯ ಕಾಲ ಸ್ಪಷ್ಟವಾಗಿದೆ. ಈ ಕವಿತೆಯು ತಾನು ರಚನೆಗೊಂಡ ಘಟ್ಟದಲ್ಲಿ ಧ್ವನಿಸಿದ ರೀತಿಗೂ, ಅನಂತರದ ಧ್ವನಿಗಳಿಗೂ ವ್ಯತ್ಯಾಸಗಳು ಕಾಣಿಸಿಕೊಂಡವು. ಕವಿತೆಯನ್ನು 'ರಾಷ್ಟ್ರದ ಸಾಂಸ್ಕೃತಿಕ ಅಸ್ಮಿತೆ'ಯೆಂದು ಬಿಂಬಿಸಲು ಹೊರಟಾಗ ಅನೇಕ ಟೀಕೆ-ವಿರೋಧಗಳು ಕಾಣಿಸಿಕೊಳ್ಳದಿರಲಿಲ್ಲ. ಅದರಲ್ಲೂ ಕವಿತೆಯಲ್ಲಿನ ೧೩ನೆಯ ಸಾಲಿನಿಂದ ೨೭ನೆಯ ಸಾಲುಗಳವರೆಗೆ ಅನೇಕ ಪ್ರತಿರೋಧಗಳು ಕಾಣಿಸಿಕೊಂಡದ್ದೇ ಹೆಚ್ಚು. ಏಕೆಂದರೆ ಈ ಸಾಲುಗಳು ಸೃಷ್ಟಿಸಿದ ಪ್ರತಿಮೆಗಳಿಂದಾಗಿ (imageries). ಹಿಂದು ದೇವತೆ 'ದುರ್ಗೆ'ಯನ್ನು ಆರಾಧಿಸುವ ಪ್ರತಿಮಾತ್ಮಕ ಸಾಲುಗಳನ್ನು ವಿರೋಧಿಸಿದವರ ಪೈಕಿ ಮಹಮ್ಮದ್ ಆಲಿ ಜಿನ್ನಾ ಅವರು ಪ್ರಮುಖರು. ಇದರಲ್ಲಿನ ಪೂಜ್ಯತೆಯ ಪರಿಭಾವವನ್ನು ೧೯೩೦ ಹಾಗೂ ೪೦ರ ದಶಕದಲ್ಲಿ 'ಮುಸ್ಲಿಂ ಲೀಗ್' ಬಲಗೊಂಡಂತೆಲ್ಲಾ ವಿರೋಧಗಳೂ ಹೆಚ್ಚುತ್ತಾ ಹೋದವು. ಮುಸ್ಲಿಮರು ಈ ಕವಿತೆ 'ಹಿಂದೂ ಕೋಮುವಾದಿ ಉತ್ಸಾಹದ ನೆಲೆಗಳನ್ನು ಬಿಂಬಿಸುತ್ತದೆ'ಯೆಂಬ ಕಾರಣಕ್ಕೆ ವಿರೋಧಿಸಿದಂತೆಲ್ಲಾ ಹಿಂದೂ ಕೋಮುವಾದಿ ಸಂಘಟನೆಗಳು ಇದನ್ನು ಅಲ್ಲಗಳೆದವು. ರಾಷ್ಟ್ರೀಯತೆಯ ಪ್ರತೀಕವಾದ 'ವಂದೇ ಮಾತರಂ'ನ್ನು ಸ್ವೀಕರಿಸಬೇಕೆಂದು ಪಟ್ಟು ಹಿಡಿಯಲಾಯಿತು. ಈ ಕವಿತೆಯ ವಿರೋಧಿಗಳನ್ನು 'ರಾಷ್ಟ್ರವಿರೋಧಿ' ಗಳನ್ನಾಗಿ ಚಿತ್ರಿಸುವ ಪರಿಪಾಠಗಳು ಬೆಳೆದವು.

ಇಂಥ ಕೋಮುವಾದಿ ಚರ್ಚೆ-ವಿರೋಧಗಳಿಗೆ 'ಆನಂದಮಠ' ಕಾದಂಬರಿಯಲ್ಲಿ ಸಂಗತಿಗಳು ಸಹ ಕಾರಣ ಆಗುತ್ತವೆ. ರೈತರನ್ನು, ಸೈನಿಕರನ್ನು ಪ್ರೇರೇಪಿಸಿದ ಸನ್ಯಾಸಿಗಳ ನಾಯಕತ್ವದ ಮೊಟ್ಟಮೊದಲ ನಾಗರಿಕ ಚಳವಳಿಯ ಉಲ್ಲೇಖನಗಳು ಕಾಣಿಸಿಕೊಳ್ಳುವುದು ಈ ಕಾದಂಬರಿಯಲ್ಲಿಯೇ. ೧೯೦೫ರ ವೇಳೆಗೆ 'ವಂದೇ ಮಾತರಂ' ಎಂಬುದು ಸ್ವದೇಶಿ ಘೋಷಣೆಯಾಗಿಯೂ ಅಭಿವ್ಯಕ್ತಿ ಪಡೆಯಿತು. ಅಲ್ಲದೆ 'ವಂಗ-ಭಂಗ' ಚಳವಳಿಯ ಸನ್ನಿವೇಶದಲ್ಲೂ ಹಿಂದೂ-ಮುಸ್ಲಿಮರ ನಡುವಿನ ತಾರತಮ್ಯದ ಘೋಷಣೆಯಾಗಿಯೂ ಈ ಕವಿತೆ ಧ್ವನಿಸುವಂತೆ ಮಾಡುವಲ್ಲಿಯೂ ಬ್ರಿಟಿಷರ ಕುತಂತ್ರಗಳು ಫಲಿಸಿದವು. ಆದರೆ ರವೀಂದ್ರರು ಈ ಕವಿತೆಯ ವಿರೋಧಗಳಿಗೆ ಉತ್ತರಗಳನ್ನು ಹುಡುಕ ಹೊರಟಿದ್ದು ಗಮನಾರ್ಹ. ಅವರು ಲೇಖಕನ ಸ್ವಾಯತ್ತತೆ, ಅಹಿಂಸಾ ತತ್ವಗಳ ಹಿನ್ನೆಲೆಯಲ್ಲಿ ಸ್ವರಾಜ್ಯವನ್ನು ದಕ್ಕಿಸಿಕೊಳ್ಳಲು ಒಗ್ಗಟ್ಟಿನ ಪ್ರತಿಪಾದನೆಯನ್ನು ಕುರಿತು ಚಿಂತನೆ ನಡೆಸಿದ್ದರು. ಆದರೆ ಟಾಗೋರರ ಈ ಚಿಂತನೆ ಅಥವಾ 'ವಂದೇ ಮಾತರಂ', 'ರಾಷ್ಟ್ರದ ಹಾಡಿ'ನ ಮನ್ನಣೆ ಪಡೆಯುವ ವೇಳೆಗೆ ಬಂಕಿಮರೇ ಇರಲಿಲ್ಲ. ೧೯೨೦ರ ವೇಳೆಗೆ ದಕ್ಷಿಣದ ಪ್ರಾಂತೀಯ ಭಾಷೆಗಳನ್ನೂ ಒಳಗೊಂಡಂತೆ ಅನೇಕ ಪ್ರಾಂತೀಯರಿಗೆ ಈ ಕವಿತೆ ಅನುಸಂಧಾನಗೊಂಡಿತ್ತು.

'ವಂದೇ ಮಾತರಂ' ಕವಿತೆಯ ಸಾಲುಗಳನ್ನು ಪರಿಶೀಲಿಸಿದಾಗ ಅದು ಮೂರು ಹಂತಗಳಲ್ಲಿ ಧ್ವನಿಸುವುದನ್ನು ಗಮನಿಸಬಹುದು. ಈ ಮೂರು ಹಂತಗಳಲ್ಲಿ ಮೊದಲ ಹಂತ ಹಿಂದಿನ ಕವಿಗಳ ಪರಂಪರೆಯಂತೆ ಪ್ರಕೃತಿ ಸೌಂದರ್ಯದ ಆರಾಧನೆಯನ್ನು ಬಿಂಬಿಸುವಂಥದ್ದು. ಇದರಲ್ಲಿ ಜಲಧಾರೆಗಳು, ಹಸಿರು, ಬೆಳದಿಂಗಳ ಶಾಂತ ಸ್ವರೂಪವನ್ನು 'ರಾಷ್ಟ್ರ'ದ ಹಿನ್ನೆಲೆಯಲ್ಲಿ ವರ್ಣಿಸಲಾಗಿದೆ. ಆದರೆ ಉಳಿದ ಎರಡು ಹಂತಗಳು ಭಿನ್ನ. ಇವುಗಳಲ್ಲಿ ರಾಷ್ಟ್ರೀಯತೆಯು ಹೆಣ್ಣು ಸಂಕಥನದ ಪ್ರತಿಮೆ-ರೂಪಕಗಳಲ್ಲಿ ಕಾಣ ಸಿಗುತ್ತದೆ. ಆದರೆ ಕವಿತೆಯ ಎರಡನೆಯ ಹಂತದ ಹೆಣ್ಣಿನ ಚಹರೆ 'ಶಾಂತ ಸ್ವರೂಪ' ದ್ದಾದರೆ, ಮೂರನೆಯ ಹಂತದ್ದು 'ರೌದ್ರರೂಪಿ' ಚಹರೆಯದು.

ಭೂಮಿಗೆ 'ಲಕ್ಷ್ಮಿ'ಯನ್ನು ಆಳವಡಿಸುವ ನೋಟ ನಮ್ಮಲ್ಲಿತ್ತಾದರೂ ರಾಷ್ಟ್ರಕ್ಕೆ 'ತಾಯಿ'ಯ ಪ್ರತೀಕವನ್ನು ಜೋಡಿಸಿದ್ದು 'ವಂದೇ ಮಾತರಂ'ನಲ್ಲಿ ವಿಶೇಷತೆ ಪಡೆಯಿತು. ಹೆತ್ತ ತಾಯಿಯ ಕರುಣೆ, ವಾತ್ಸಲ್ಯ, ಮಮತೆಗಳನ್ನು ಚಿತ್ರಿಸುವ ಹೆಣ್ಣಿನ ಚಹರೆ ಆಕೆಯ ಶಾಂತ ಸ್ವರೂಪವನ್ನು ಬಿಂಬಿಸುವಂಥದ್ದು. ಆದರೆ ಈ ಚಹರೆಗಿಂತ ಭಿನ್ನವಾದ ಪ್ರತಿರೂಪ ಕವಿತೆಯ ಮೂರನೆಯ ಹಂತದಲ್ಲಿದೆ. ಇದು ಸಹ ಹೆಣ್ಣಿನ ಚಹರೆಯೇ ಆಗಿದ್ದರೂ 'ರೌದ್ರರೂಪಿ' ಸ್ವರೂಪದ್ದು. ಇಲ್ಲಿ ಆಕೆ ಮುನಿಸಿಕೊಂಡ ರೌದ್ರವೇಷದ ಕೊಲ್ಕತ್ತಾದ (ಕಾಳಿ ಘಾಟಿನ) ಕಾಳಿ-ದುರ್ಗೆಯನ್ನು ಪ್ರತಿನಿಧಿಸುವಂಥದ್ದು. ವಸಾಹತು ಸನ್ನಿವೇಶದ ವಿರೋಧಕ್ಕೆ ಅಭಿವ್ಯಕ್ತಿಸಿದ ಈ ಹೆಣ್ಣು ಸಂಕಥನದ ರಾಷ್ಟ್ರೀಯತೆಯ ಪ್ರತೀಕಗಳು ಭಾರತೀಯ ಸೂಕ್ಷ್ಮ ಸಂವೇದನೆಯೊಂದನ್ನೇ ಮೂಡಿಸಿದ್ದವು. ಭಾವನಾತ್ಮಕ ಹಾಗೂ ಸಾಂಸ್ಕೃತಿಕ ನೆಲೆಗಳೆರಡರಲ್ಲೂ ಈ ಥರದ ಪ್ರಯೋಗ ಆಂಗ್ಲ ಸರದಾರರಿಗೆ ಅನೇಕ ಸವಾಲುಗಳನ್ನು ತಂದೊಡ್ಡುವಂತೆ ಮಾಡಿತ್ತು. ಭಾರತೀಯ ಜನಮನದ ಮಾತೃ ಸ್ವರೂಪಿ ಹೆಣ್ಣು ಒಲಿದರೆ ಕಾರುಣ್ಯ - ಮಮತೆಯ ಸಾಕಾರ ಮೂರ್ತಿಯಂತೆಯೂ, ಮುನಿದರೆ ಆಕೆ ಚಂಡಿ ಅಥವಾ ಕಾಳಿಯ ರೌದ್ರರೂಪಿ ದರ್ಶನವನ್ನು ತಾಳಬಲ್ಲಳು ಎಂಬುದನ್ನೂ 'ವಂದೇ ಮಾತರಂ' ನಿರೂಪಿಸಲು ಪ್ರಯತ್ನಿಸಿತು. ಇಂತಹ ಪ್ರಯೋಗಗಳು ಬಂಕಿಮರಿಂದಲೇ ಪ್ರೇರಿತವಾಗಿ ಇತರೆ ಭಾಷೆಗಳಲ್ಲೂ ಕಾಣಿಸಿಕೊಂಡವು. ಕನ್ನಡದ ಸಂದರ್ಭದಲ್ಲಿ ಈ ಹೆಣ್ಣು ಸಂಕಥನದ ಅಭಿವ್ಯಕ್ತಿ ಸೃಷ್ಟಿಶೀಲ ಸಾಹಿತ್ಯದಲ್ಲಿ ಕಾಣಿಸಿಕೊಂಡಿದೆ.

ಬಂಗಾಳಿ, ಮರಾಠಿ ಭಾಷೆಗಳ ಮುಖೇನ ಕನ್ನಡದಲ್ಲಿ ಕಾಣಿಸಿಕೊಂಡ ರೂಪಾಂತರ-

## ನಾನೆಂಬ ನ್ಯಾಸ

**ಬಿ**ಳಿಯ ಹಾಳೆ
ಮತ್ತು
ಕಪ್ಪು ಶಾಯಿ.

ಚುಕ್ಕಿಯಿಟ್ಟರೆ ಕಂಬ
ಗೆರೆ ಎಳೆದರೆ ಗೋಡೆ
ಚೌಕ ಬರೆದರೆ ಕೋಣೆ

ಸುತ್ತಿದುದು ಕಮಾನು
ಸುಳಿದದ್ದು ಗುಮ್ಮಟ
ಗುಂಡಾಗಿ ಎಳೆದದ್ದು ಗೋಳ

ಗೆರೆಗಳನು
ಎಳೆದಂತೆ ಎಳೆದಂತೆ
ತಳೆದುಕೊಂಡಾವಿಲ್ಲಿ ಆಕಾಶಗಂಗೆ



ಹಾಳೆಯೇ ಆಕಾಶ ಬಿಳಿಯೆಲ್ಲ ತತ್ತ್ವ
ಕಪ್ಪು ಗೆರೆಗಳೆಲ್ಲ ಮೂರ್ತವಾದ
ಭೌತ ವಸ್ತುಗಳು

ಇನ್ನು ನಾನು ?

ಅಣುವಾಗಿ ಕಣವಾಗಿ ಕಾಣದಂತಾಗಿ
ನಾನೆಂಬುದಳಿದು ಬಿಳಿಯಲ್ಲಿ ಬಿಳಿಯಾ
ಎಲ್ಲೋ ಯಾರೋ ಹೂಡಿಟ್ಟ
ಸ್ಥಿತಿಯಲ್ಲಿ

ಹಾಳೆಯಿಂದಾಚೆ ನಿಂತು ಎಲ್ಲ ನಿರುಕಿಸುವ 'ನಾನು'

ನಾಗರಾಜ ವಸ್ತಾರೆ
ನಂ. ೭೦೨, ೧೪ನೇ ಮುಖ್ಯರಸ್ತೆ, ೨೦ನೇ ಕ್ರಾಸ್, ಬನಶಂಕರಿ
ಎರಡನೇ ಹಂತ, ಬೆಂಗಳೂರು - ೫೬೦ ೦೭೦

ಭಾಷಾಂತರಗಳು ಕನ್ನಡಿಗರನ್ನು ಇಂಡಿಯಾದ ಸ್ವಾತಂತ್ರ್ಯ, ನಾಡಿನ ಏಕೀಕರಣ ಎರಡೂ ಆಶಯಗಳಿಗೆ ಪ್ರತಿಕ್ರಿಯಿಸು ವಂತೆ ಮಾಡಿದ್ದವು. ಏಕಕಾಲದಲ್ಲಿ ನಡೆದ ಈ ಚಳವಳಿ ಗಳಿಗೆ ಎಲ್ಲಿಯೂ ಸಂಘರ್ಷ-ಪ್ರತಿರೋಧಗಳು ಅಭಿವ್ಯಕ್ತ ಆಗದಂತೆ ನೋಡಿಕೊಂಡದ್ದೇ ಇಲ್ಲಿನ ವಿಶೇಷತೆ. ರಾಷ್ಟ್ರೀಯ ಮಟ್ಟದಲ್ಲಿ ಭಾರತವನ್ನು 'ತಾಯಿ'ಯನ್ನಾಗಿಯೂ ಪ್ರಾಂತೀಯ (ಕನ್ನಡದ ಭೂಪ್ರದೇಶಗಳಲ್ಲಿ) ಹಂತಗಳಲ್ಲಿ 'ಮಗಳ'ನ್ನಾಗಿಯೂ ನೋಡಿದ ನೋಟ ಕನ್ನಡ ಕಾವ್ಯದ್ದು. 'ಭಾರತ-ಕರ್ನಾಟಕ'ಗಳು 'ತಾಯಿ-ಮಗಳ' ಹೊಕ್ಕಳು ಸಂಬಂಧವನ್ನು ಬೆಸೆಯುವಂತೆ ಮಾಡಿದ್ದವು. ಇದರ ಜೊತೆಗೆ ಬಂಗಾಳಿ-ಮರಾಠಿ ಭಾಷಿಕರಲ್ಲಿನ ಧರ್ಮ-ಪುರಾಣ-ಚರಿತ್ರೆ -ಐತಿಹ್ಯಗಳ ಪರಿಕರಗಳು ಕನ್ನಡದಲ್ಲೂ ಪ್ರತಿಬಿಂಬಿತವಾದವು.




'ನಾಡು' ಎಂಬ ನಪುಂಸಕ ಲಿಂಗಕ್ಕೆ ಹೆಣ್ಣಿನ (ಸ್ತ್ರೀಲಿಂಗ ವನ್ನು) ಚಹರೆಗಳನ್ನು ಜೋಡಿಸಿದ ಕನ್ನಡ ಸೃಷ್ಟಿಶೀಲರು ಬಂಕಿಮರಂತೆಯೇ ವಸಾಹತುಶಾಹಿಗೆ ಪ್ರತಿಕ್ರಿಯಿಸಿದರು. 'ದೇಶ'ವನ್ನು ತಾಯಿ, ಭಾರತಮಾತೆ, ಭಾರತಿ, ಜನನಿ, ಮಾತೃಭೂಮಿ, ಭಾರತೀ ದೇವಿ, ಭಾರತ ಲಕ್ಷ್ಮಿ ಮೊದಲಾದ ಪ್ರತಿಮೆಗಳಲ್ಲಿ ಒಡ ಮೂಡಿಸಿದಂತೆಯೇ ಪ್ರಾಂತ್ಯ ಅಥವಾ 'ನಾಡ'ನ್ನೂ ಬಿಂಬಿಸಲಾಯಿತು. ಇಲ್ಲಿ 'ನಾಡು' ಎಂಬುದು ಮಗಳು, ತನುಜಾತೆ, ಹಿರಿಮಗಳು, ಪೆರ್ಮಗಳ್, ಪುತ್ರಿ ಮೊದಲಾದ ಪ್ರತಿಮೆ ಗಳಲ್ಲಿ ಕಾಣಿಸಿಕೊಂಡಿದೆ. ಇವೆಲ್ಲವು ಹೆಣ್ಣು ಸಂಕಥನದ ಶಾಂತರೂಪಿ ಚಹರೆಗಳೇ ಆಗಿವೆ. ತಾಯಿಯಲ್ಲಿ ರೌದ್ರರೂಪಿ ಚಹರೆ ಕಾಣಿಸಿಕೊಳ್ಳುವಂತೆ ಮಗಳ ಚಹರೆಯಲ್ಲೂ ಮೂಡಿಸಿದ್ದೂ ಅಲ್ಲದೆ ಅನೇಕ ರೂಪಕ-ಪ್ರತಿಮೆಗಳಲ್ಲಿ ಆಕೆ ಕಾಣಿಸಿಕೊಳ್ಳುವಂತೆ ಅಭಿವ್ಯಕ್ತಿಸಲಾಯಿತು. ಉದಾಹರಣೆಗೆ ಕ್ಷಾತ್ರ ತೇಜಸ್ಸಿನ, ವೀರತ್ವದ ಪ್ರತೀಕವಾಗಿ ಮಗಳಿಗೂ (ಕರ್ನಾಟಕಕ್ಕೂ) ದೇವಿ, ಶಕ್ತಿ, ಮಾರಿ, ಚಂಡಿ, ಚಾಮುಂಡಿ, ಕಾಳಿ, ಶೂರರ ರಾಣಿ, ಕ್ರಾಂತಿ ಕಾಳಿ, ವೀರ ರಸವಾಣಿ ಮೊದಲಾದವುಗಳನ್ನು ಪರಿಶೀಲಿಸಬಹುದು. ಇಲ್ಲಿಯೂ ನರಬಲಿ, ತ್ಯಾಗ, ಅರ್ಪಣಾ ಮನೋಭಾವದ ವೈಚಾರಿಕತೆ ಪ್ರಧಾನವಾಗಿ ರೂಪು ತಳೆಯಿತು. ಬಂಕಿಮರ ಕಾಲಘಟ್ಟದ ಶಾಂತಕವಿ (೧೮೫೬-೧೯೨೦)ಗಳಿಂದ ಹಿಡಿದು ಗೋವಿಂದ ಪೈ, ಬಿ. ಎಂ. ಶ್ರೀಕಂಠಯ್ಯ, ತೀ. ನಂ. ಶ್ರೀಕಂಠಯ್ಯ, ಎಂ.ಎನ್. ಕಾಮತ್, ಭೀಮಸೇನ ರಾವ್, ಪಂಜೆ ಮಂಗೇಶರಾವ್, ಬೇಂದ್ರೆ, ಕೆ.ವಿ.ಪುಟ್ಟಪ್ಪ (ಕುವೆಂಪು) ಮೊದಲಾದವರ ಕಾವ್ಯ ಸೃಷ್ಟಿಯಲ್ಲಿ ಈ ಬಗೆಯ ಹೆಣ್ಣು ಸಂಕಥನದ ರಾಷ್ಟ್ರೀಯತೆಯ, ಉಪರಾಷ್ಟ್ರೀಯತೆಯ ಚಿತ್ರಣಗಳು ಅಭಿವ್ಯಕ್ತಗೊಂಡಿವೆ. ವಿಭಜಿತ ಐದು ಕನ್ನಡ ಭೂ ಪ್ರದೇಶಗಳು ಒಂದೇ ಆಡಳಿತದ ತೆಕ್ಕೆಗೆ ಬರಲು ನಡೆಸಿದ ಪ್ರಯತ್ನಗಳಾಗಿ ಈ ಚಿಂತನೆ ಪ್ರಾಂತೀಯವಾಗಿ ಹೊರಹೊಮ್ಮಿದೆ.

ಶಾಂತಕವಿಗಳು ಬಂಕಿಮರಂತೆಯೇ ಕನ್ನಡಿಗರಿಗೆ ತಾಯಿ 'ಭುವನೇಶ್ವರಿ'ಯ ದರ್ಶನವನ್ನು ಮಾಡಿಸುತ್ತಾರೆ. ತಮ್ಮ 'ಶ್ರೀ ವಿದ್ಯಾರಣ್ಯ ವಿಜಯ'ವು ನಾಡು ನುಡಿಗಳ ಬಗೆಗೆ ಕನ್ನಡಿಗರಲ್ಲಿ ಅಭಿಮಾನವನ್ನು ಮೂಡಿಸಲೆಂದೇ ರಚಿತವಾದ ಕೃತಿ. ಇದರಲ್ಲಿಯೂ 'ವಂದೇ ಮಾತರಂ' ರೀತಿಯಲ್ಲಿಯೇ ರಾಷ್ಟ್ರೀಯತೆಯ ಬದಲಾಗಿ ಪ್ರಾಂತ್ಯಾಭಿಮಾನವನ್ನು ಮೂಡಿಸಲು ಚರಿತ್ರೆ, ಧರ್ಮದ ಪ್ರತೀಕ-ರೂಪಕಗಳನ್ನು ಬಳಸಿಕೊಂಡಿರುವುದನ್ನು ಪರಿಶೀಲಿಸಬಹುದು. ಇಲ್ಲಿಯೂ ನಾಡಿನ ಸ್ಥಿತಿಗತಿಗಳನ್ನು ವಿವರಿಸಲು ವೀರತ್ವ-ಶೂರತ್ವ ಗಳನ್ನು ಪ್ರದರ್ಶಿಸಲಾಗಿದೆ. ಅಲ್ಲದೆ 'ಹಿಂದುತ್ವ'ದ ಚಿಂತನಾ ನೆಲೆಗಳು ಅನಾವರಣ ಗೊಂಡಿವೆ. ಶಾಂತಕವಿಗಳು ಇದನ್ನು ರಚಿಸಿದ ಕಾಲಘಟ್ಟ ಇಂಥ ವೈಚಾರಿಕತೆಯ ಕಾಲಘಟ್ಟವೇ ಆಗಿತ್ತು (೧೯೧೮-೨೦).

ಕನ್ನಡ ಕವಿಗಳಲ್ಲಿ ದ. ರಾ. ಬೇಂದ್ರೆ 'ಮುತ್ತೈದೆ'ಯ ರೂಪದಲ್ಲಿ ತಾಯಿಯನ್ನು ಕಂಡವರು. ಕೇವಲ 'ಕರ್ನಾಟಕ ಮಾತೆ'ಯಾಗಿರದೆ ಆಕೆ ಕನ್ನಡ ಭಾರತಿ, ಕನ್ನಡರತಿ, ನಾಡ ರಾಣಿ, ವಿಶ್ವರತಿ, ಸಿರಿಗನ್ನಡ ಭಾರತಿ, ನವೋನವಶ್ರೀ ಭಾರತಿ, ಪಂಚಮುಖಿ, ಗರತಿ, ಪಂಚಮಾತೃಕೆ, ಚಂಡಿ, ಚಾಮುಂಡಿ ಮೊದಲಾದ ರೂಪಗಳಲ್ಲೂ ಕಾಣಿಸಿಕೊಂಡಿದ್ದಾಳೆ. ಬಂಕಿಮರ 'ವಂದೇ ಮಾತರಂ' ಕವಿತೆಯ ರೀತಿಯಲ್ಲಿಯೆ ಬೇಂದ್ರೆ ಅವರ 'ಕನಸಿನೊಳ ಗೊಂದು ಕನಸು' ಎಂಬ ಕವಿತೆ ಹೆಚ್ಚು ಮಾರ್ಮಿಕತೆಯನ್ನು ಅಭಿವ್ಯಕ್ತಿಸುವಂಥದ್ದು. ಇದರಲ್ಲಿಯೂ ಆರಂಭದ ಸಾಲುಗಳು ಮಮತೆಯ, ಕಾರುಣ್ಯತೆಯ ಸಾಕಾರ ಮೂರ್ತಿ ಯನ್ನಾಗಿ 'ತಾಯಿ'ಯನ್ನು ಪರಿಚಯಿಸುತ್ತವೆ. ಆದರೆ ಆಕೆ ಕಳೆಗುಂದಿದ ಚಹರೆಯ ಹಿನ್ನೆಲೆ ಏನೆಂದು ಕವಿ ನಂತರದ ಸಾಲುಗಳಲ್ಲಿ ಪ್ರಶ್ನಿಸುತ್ತಾನೆ. ಅದಕ್ಕೆ ನಾಡಿನ ಛಿದ್ರಗೊಂಡ, ಅನೈಕ್ಯತೆಯ ಸ್ಥಿತಿಗತಿಗಳೇ ಕಾರಣ ವೆಂಬುದನ್ನು ಹೇಳಿಕೊಳ್ಳಲಾರದ ಸನ್ನಿವೇಶವನ್ನು ಅಭಿವ್ಯಕ್ತಿಸು ತ್ತಾಳೆ. ಅನಂತರದ ಸಾಲುಗಳಲ್ಲಿ ಆಕೆಗೆ ಬೇಕಿರುವುದು ಏನೆಂದು ಕೇಳಿದಾಗ ಪ್ರಶ್ನಿಕ ದಂಗಾಗುವ ರೀತಿಯಲ್ಲಿ ಉತ್ತರ ಹೊರಬೀಳುತ್ತದೆ. ಮೊದಲಿನ ಚಹರೆ ಇದ್ದಕ್ಕಿದ್ದ ಹಾಗೆ ರೌದ್ರರೂಪ ಪಡೆದ ಆಕೆ ಅವನನ್ನು ''ಗಂಡಸಾದರೆ ನಿನ್ನ ಬಲಿ ಕೊಡುವೆಯೇನು?'' ಎಂದು ಸವಾಲು ಹಾಕುತ್ತಾಳೆ. ತ್ಯಾಗ-ಬಲಿದಾನಗಳನ್ನು ಬಯಸುವ ಈ ವಿರಾಟ್ ಸ್ವರೂಪದ ಹೆಣ್ಣಿನ ದರ್ಶನ 'ವಂದೇ ಮಾತರಂ'ನ ಕಾಳಿಯ ಆಶಯವನ್ನು ಅಭಿವ್ಯಕ್ತಿಸುವಂಥದ್ದು.

ಕೆ.ವಿ.ಪುಟ್ಟಪ್ಪ (ಕುವೆಂಪು) ಅವರ ಕಾವ್ಯಸೃಷ್ಟಿಯಲ್ಲಿಯೂ ಇಂಥ ಆಶಯಗಳನ್ನು ಹೊತ್ತ ಹೆಣ್ಣಿನ ಎರಡೂ ಚಹರೆಗಳ ದರ್ಶನ ಆಗುತ್ತದೆ. ಕವಿಗೆ ನಾಡು ಕೇವಲ ಮಣ್ಣಿನ ಪ್ರತೀಕವಲ್ಲ, ಬದಲಾಗಿ ಅದೊಂದು 'ಶಕ್ತಿ'ಯೂ ಹೌದು. ಕುವೆಂಪು ತಮ್ಮ ಕಾವ್ಯದಲ್ಲಿ ನಾಡನ್ನು ಮಾತೆ-ತಾಯಿಯನ್ನಾಗಿ ನೋಡುವುದರ ಜೊತೆಗೆ ದೇವಿ, ಮಗಳು, ಚಂಡಿ, ಚಾಮುಂಡಿ, ಕಾಳಿಗಳಾಗಿ ಅಭಿವ್ಯಕ್ತಿ ಪಡೆದಿರುವುದನ್ನು ಮೂಡಿಸಿದ್ದಾರೆ. 'ವಂದೇ ಮಾತರಂ' ಕಾಳಿಯ ರೌದ್ರರೂಪಿ ಚಹರೆ ಕಾಣಿಸಿಕೊಳ್ಳುವುದು ಕುವೆಂಪು ಅವರ 'ಕ್ರಾಂತಿಕಾಳಿ' ಕವಿತೆಯಲ್ಲಿ. ಇದರಲ್ಲಿ ಆಕೆ ಆಶಯವನ್ನು ಮರೆತ ಕವಿಯೊಬ್ಬನನ್ನು 'ಹೆಂಬೇಡಿ' ಎಂದು ಜರೆದು ಆತನ ಬಲಿಯನ್ನೇ ಅಪೇಕ್ಷಿಸುತ್ತಾಳೆ. ವಸಾಹತುಕಾಲೀನ ಭಾರತದ ಮುಕ್ತತೆಗೆ ಸೃಷ್ಟಿಸಲಾದ ಅನೇಕ ಚಿಹ್ನೆ, ಗುರುತು, ಸಂಕೇತ, ಪ್ರತಿಮೆ, ರೂಪಕ-ಪ್ರತೀಕಗಳು ಇಂದು ಮತೀಯವಾದ ಕೋಮುವಾದಿ ನೆಲೆಗಟ್ಟಿಗೆ ಬಂದು ತಲುಪಿವೆ. ಪಾಶ್ಚಾತ್ಯ ಚಿಂತನೆ-ಚಟುವಟಿಕೆಗಳನ್ನು ವಿರೋಧಿಸುವ ಪರಿಕರಗಳ ಬಳಕೆಯಲ್ಲಿ ನಾವು ಪರಿಮಿತಗಳಿಗೆ ಒಳಗಾಗಿದ್ದೆವು ಎಂಬುದು ಇಂದು ರುಜುವಾತು ಆಗುತ್ತಿದೆ. ಹಿಂಸಾತ್ಮಕ ಘಟನೆ ಗಲಭೆಗಳು ಅಂದು ನಾವು ಸೃಷ್ಟಿಸಿದ ಪ್ರತೀಕಗಳ ಕೂಸಾಗಿ ಮರುಹುಟ್ಟು ಪಡೆದಿವೆ. ಬಂಕಿಮರನ್ನು ಹಾಗೂ ಅವರು ಸೃಷ್ಟಿಸಿದ ಪ್ರತೀಕಗಳನ್ನು 'ಹಿಂದೂ ಧರ್ಮ'ದ ಹಿನ್ನೆಲೆಯಲ್ಲಿಯೆ ಪರಿಗಣಿಸುವಂತೆ ಆಯಿತು. ತಮ್ಮ ಸಾಹಿತ್ಯ ಸೃಷ್ಟಿಯಲ್ಲಿ ಬಂಕಿಮರನ್ನೂ ಒಳಗೊಂಡಂತೆ ಅಂದಿನ ಬರೆಹಗಾರರು ಮುಸ್ಲಿಮರನ್ನು 'ಹೊರಗಿನವ'ರೆಂದೇ (foreigners) ಎಂದು ಚಿತ್ರಿಸಿದ್ದು ಗಂಭೀರ ಪರಿಣಾಮಗಳಿಗೆ ಎಡೆಮಾಡಿಕೊಟ್ಟಿದೆ. ಅಲ್ಲದೆ ಮುಸ್ಲಿಮ್ ಆಡಳಿತಗಾರರನ್ನು, ಅಧಿಕಾರಿಗಳನ್ನು 'ದುರಾಕ್ರಮಣಕಾರಿಗಳು', 'ನಿರಂಕುಶ ಪ್ರಭು'ಗಳೆಂದೇ ವರ್ಣಿಸಲಾಯಿತು. ಇವೆಲ್ಲದರ ಪರಿಣಾಮವಾಗಿ 'ರಾಷ್ಟ್ರೀಯತೆ' ಎಂಬುದು 'ಹಿಂದು'ಗಳಿಗೆ ಮಾತ್ರ ಸೀಮಿತ ಎನ್ನುವುದರ ಜೊತೆಗೇ ತಮ್ಮದೇ ಆದ ರೂಪಕ-ಪ್ರತೀಕ, ಆಚರಣೆ-ಸಂಪ್ರದಾಯಗಳ ಮುಖೇನ ಇನ್ನೆಲ್ಲವನ್ನು ವಿರೋಧಿಸುವಂತೆ ಮಾಡಿತು. ಬಹುಶಃ ಈ ಹೊತ್ತಿನ ಕೋಮುವಾದಿ ಚಿಂತನೆ, ಚಟುವಟಿಕೆ, ಹಿಂಸೆಗಳಿಗೆ ನಾವು ಅಂದು ಆಯ್ಕೆ ಮಾಡಿಕೊಂಡ ಏಕಪ್ರಕಾರದ ಮತೀಯ ಚಿಂತನಾ ಪರಿಕರಗಳೇ ಕಾರಣ ಅನ್ನಿಸುತ್ತದೆ. ವಸಾಹತುಶಾಹಿ ವಿರೋಧಕ್ಕೆ ಇನ್ನಾವುದೇ ಪರ್ಯಾಯ ಪರಿಕರಗಳನ್ನು ಹಿಂದಿನವರು ಬಳಸದೆ ಇದ್ದದ್ದು ನಮ್ಮ ದುರಂತವೇ ಸರಿ.

ಮಧ್ಯಮ, ಮೇಲ್ಮಧ್ಯಮ ವರ್ಗದವರ ಆಸೆ-ಆಕಾಂಕ್ಷೆಗಳ ಅಗತ್ಯತೆಯ ಸಾಕಾರತೆಗಾಗಿ ಸೃಷ್ಟಿಸಲಾದ ಮತೀಯ ಚಿಂತನೆಗಳು ಈ ಹೊತ್ತು ಶ್ರೀಮಂತ ವರ್ಗದವರ ಬಂಡವಾಳದ ಪರಿಕರಗಳಾಗಿ ರೂಪು ತಳೆದಿವೆ. ಆದರೆ ಇದರ ಅಂತಿಮ ಪರಿಣಾಮ ಭೀಕರತೆಗಳನ್ನು ಅನುಭವಿಸುತ್ತಿರುವವರು ಕೆಳವರ್ಗದ ಬಡಜನರೇ ಆಗಿದ್ದಾರೆ. ಇದು ಚರಿತ್ರೆಯ ಕುಹಕವಾಗಿ ನಮ್ಮನ್ನು ಕಾಡದೆ ಬಿಟ್ಟಿಲ್ಲ. ಸಮಧಾನದ ಸಂಗತಿ ಅಂದರೆ ಬಂಗಾಳಿ-ಕನ್ನಡ ಭಾಷಿಕರು ಸೃಷ್ಟಿಸಿದ ಪ್ರತಿಮೆ-ಪ್ರತೀಕಗಳನ್ನು ಅಂದಿನ ಅವಶ್ಯಕತೆಗೆ ಬಳಸಿದ ನಂತರ ಮತ್ತೆ ಅದಕ್ಕೆ ಬಲಿಯಾಗದ ರೀತಿಯಲ್ಲಿ ಎಚ್ಚರಗಳನ್ನು ವಹಿಸುತ್ತಿ ರುವುದು. ಇದಕ್ಕೆಲ್ಲ ನಮ್ಮ ಸೃಷ್ಟಿಶೀಲ ಸಂವೇದನೆಯೇ ಕಾರಣ ಎಂದರೆ ತಪ್ಪಲ್ಲ.

ಸಿ. ಆರ್. ಗೋವಿಂದರಾಜು
ಮುಖ್ಯಸ್ಥರು, ಚರಿತ್ರೆ ವಿಭಾಗ, ಕನ್ನಡ ವಿ. ವಿ., ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಗುಂಡಯ್ಯನ ಬಂಡೆ ಥಳಥಳ ಹೊಳೆದಾಗ !

**ಎಂ**ದಿನಂತೆ ಕಲ್ಲು ಕರಗುವ ಸಮಯದಲ್ಲಿ ಗುರುವಜ್ಜ ಮೈನೀರು ಬಿಡಲು ಹೊರಬಂದ. ಸಾವಕಾಶ ಮುಗಿಸಿ ಎದ್ದುನಿಂತಾಗ ಮೂಡಲಲ್ಲಿ ಗುಂಡಯ್ಯನ ಬಂಡೆ ಒಂದೇ ಸಲಕ್ಕೆ ದಿಗ್ಗನೆ ಉರಿದಂತಾಯಿತು! ಗುರುವಜ್ಜನ ಮೈ ರೋಮಗಳು ಸೆಟೆದು ನಿಂತವು. 'ಗುಂಡೇಸ್ವರಾ ಕಾಪಾಡಪ್ಪ' ಎಂದು ಕೈ ಮುಗಿದ. ಹಾಸಿಗೆಯಲ್ಲಿ ಉರುಳಿಕೊಂಡಾಗ ಏನಿರಬಹುದು ಈ ಚಮತ್ಕಾರ! ಇಷ್ಟು ವರ್ಷಗಳಲ್ಲಿ ಎಂದೂ ಗುಂಡಯ್ಯನ ಬಂಡೆಗೆ ಬೆಂಕಿ ಬಿದ್ದಿರಲಿಲ್ಲ, ಎಲ್ಲಿ ತಪ್ಪಾಗಿರಬಹುದು – ಎಂದು ಗೊಂದಲಕ್ಕೆ ಬಿದ್ದ. ಇದೊಂದು ಕೇಡಿನ ಸೂಚನೆ ಇರಬಹುದೆ ಎನ್ನಿಸಿ ಮತ್ತೆ ಕಣ್ಣಿಗೆ ನಿದ್ದೆ ಹತ್ತಲಿಲ್ಲ.

ಸುದ್ದಿ ಗೊಂದಲಪುರದ ತುಂಬಾ ಹರಡಿತು. ಜನರು ಭಯ-ಭಕ್ತಿ, ಅಚ್ಚರಿಯಿಂದ ತಮ್ಮ ಎಂದಿನ ಕೆಲಸ ಕಾರ್ಯ ಮರೆತು ಈ ಸುದ್ದಿಯನ್ನು ಜಗಿಯತೊಡಗಿದರು. ಊರ ಯಜಮಾನನಿಗೆ ಬಂಡೆ ಹತ್ತಿ ಉರಿದಂತೆ ಕಾಣಿಸಿರಬೇಕಾದರೆ ಮುಂದಾಗಲಿರುವ ಕೇಡಿನ ಸೂಚನೆಯೇ ಎಂದು ಒಳಗೊಳಗೇ ನಡುಗಿದರು ಕೆಲವರು. ಗೊಂದಲಪುರದ ಜನರಿಗೆ ಗುಂಡಯ್ಯನ ಗುಡ್ಡ ಒಂದು ಪವಿತ್ರ ಸ್ಥಳ. ಪ್ರತಿವರ್ಷ ಗುಂಡೇಶ್ವರನ ಜಾತ್ರೆಯನ್ನು ಸಂಭ್ರಮದಿಂದ ಆಚರಿಸುತ್ತಾರೆ. ಕಳೆದ ವರ್ಷವಷ್ಟೆ ಹೆಬ್ಬಂಡೆಯ ಬುಡದ ಹಾಸುಗಲ್ಲಿನ ಮೇಲೆ ಯಗ್ನ ಯಾಗ ಮಾಡಿಸಿದರು, ಬೆಳದಿಂಗಳೂಟ ಉಂಡರು. ಆದರೆ, ಒಣಮೀನಿನ ಸಾರಿನಂಥ ಕ್ಷುಲ್ಲಕ ಕಾರಣದಿಂದ ಸ್ವಲ್ಪ ಗೊಂದಲವೂ ಆಯಿತೆನ್ನಿ! ಅದು ಬೇರೆ ವಿಚಾರ. ಆದರೆ ಈಗೇನಾಯಿತು? ಅಂಥಾ ಗುಂಡಯ್ಯನಿಗೇ ಕೋಪ ಬಂದು ತನ್ನಷ್ಟಕ್ಕೆ ಉರಿಯುವಂತಾಗಬೇಕಾದರೆ ಅಂಥ ಯಾವ ಮಹಾಪಾಪ ಈ ಊರಿನ ಜನರು ಮಾಡಿರಬಹುದು ಅಥವಾ ಯಾವ ಮಹಾಪಾಪಿ ಈ ಉರಿತಕ್ಕೆ ಕಾರಣನಾಗಿರಬಹುದು ಎಂದು ಕೆಲವರು ತಳಮಳಗೊಂಡರು.

ಕೆಲವು ಸಂದೇಹವಾದಿಗಳು, 'ಈ ಗುರುವಜ್ಜಂಗೆ ಮೊದ್ಲೇ ಮಂಜ್‌ಗಣ್ಣು! ಎದುರ್‍ಗೆ ಬರೋವ್ರ ಮುಖಾನೇ ಕಾಣ್ಸೊಲ್ಲ ಅಂಥಾದ್ರಲ್ಲಿ, ಅಷ್ಟ್ ದೂರ್‍ದಲ್ಲಿರೋ ಗುಂಡಯ್ನ್ ಬಂಡೆ ಉರೀತಿದ್ದದ್ದು ಎಂಗ್ ಕಾಣಿಸ್ತು? ಮೊದ್ಲೇ ಅರಳು ಮರುಳು, ಎಲ್ಲೋ ಸಪ್ನ ಕಂಡಿರ್‍ಬೇಕು ಕಣ್ರಲ' – ಎಂದು ತರ್ಕಿಸಿದ್ದುಂಟು.

ಮುಂದಿನ ಒಂದೆರಡು ದಿನಗಳಲ್ಲಿ ಕೆಲವು ಧೈರ್ಯವಂತರು ಅರ್ಧರಾತ್ರಿಯಲ್ಲಿ ಎದ್ದು ಗುಂಡಯ್ಯನ ಬಂಡೆಯ ಕಡೆ ನೋಡುತ್ತ ತಪಸ್ಸಿಗೆ ನಿಂತರು. ಕೆಲವರು ಸೊಳ್ಳೆಗಳ ದಾಳಿ ಎದುರಿಸಲಾಗದೆ ಹಾಸಿಗೆಗೆ ಹಿಂದಿರುಗಿದರು. ತರಲೆ ತಿಪ್ಪನ ಕಣ್ಣಿಗೆ 'ಗುಂಡಯ್ಯನ ಬಂಡೆ ತಳತಳಾಂತ ಒಳೀತಿದ್ದಂಗೆ' ಕಾಣಿಸ್ತು! ಹಳೇ ಕುಳಗಳಾದ ಸಿದ್ದೇಶ್ವರಾನಂದಜ ಹಾಗೂ ಪೂಜಾರಿ ಮಾಂತಪ್ಪರಿಗೆ ಗುಂಡಯ್ಯನ ಬಂಡೆ ದಿವ್ಯ ಜ್ಯೋತಿಯಂತೆ ಬೆಳಗಿತಂತೆ!

ಗೊಂದಲಪುರದ ಜನರು ಬೆಳಗ್ಗೆ ಎದ್ದ ಕೂಡಲೇ, ರಾತ್ರಿ ನೀವು ಕಂಡಿರಾ, ನೀವು ಕಂಡಿರಾ? ಎಂದೇ ಮಾತಿಗೆ ಪ್ರಾರಂಭಿಸುವುದು ರೂಢಿಯಾಯಿತು. ಕೆಲವು ಹೆಂಗಸರು, ಪಡ್ಡೆ ಹೈಕಳು ಸಹ ರಾತ್ರಿ ಎದ್ದು ಗುಂಡಯ್ಯನ ಬಂಡೆ ನೋಡುತ್ತ ನಿದ್ದೆಗೆಟ್ಟಿದ್ದುಂಟು.

ಊರಿನ ಇತರರಿಗೆ ಬಡಪಟ್ಟಿಗೆ ಗುಂಡಯ್ಯನ ದಿವ್ಯ ಜ್ಯೋತಿಯ ದರ್ಶನ ಕೈಕೊಟ್ಟಾಗ, ಪ್ರಾಯಶಃ ಊರಿನ ಯಾವುದೇ ಒಂದು ಪುಣ್ಯಸ್ಥಳದಲ್ಲಿ ನಿಂತು ನೋಡಿದಾಗ ಮಾತ್ರ ಜ್ಯೋತಿ ಕಾಣಿಸುತ್ತದೆ ಎಂಬ ತೀರ್ಮಾನಕ್ಕೆ ಬಂದು, ಗುರುವಜ್ಜ ಯಾವ ಜಾಗದಲ್ಲಿ ನಿಂತು ನೋಡಿದನೋ ಅಲ್ಲೇ ನೋಡಲು ನೂಕು ನುಗ್ಗಾಟ ನಡೆಯಿತು. ಮತ್ತೆ ಕೆಲವರು ತಮಗೆ ಏನೂ ಕಾಣಿಸಲಿಲ್ಲ ತಮ್ಮದೇ ಏನೋ ಐಬಿರಬಹುದು ಎಂದುಕೊಂಡರು. ಇನ್ನೂ ಕೆಲವರು ತಮಗೆ ಏನೂ ಕಾಣಿಸಲಿಲ್ಲವೆಂದರೆ ಅಷ್ಟು ಗೌರವವಲ್ಲವೆಂದು ಭಾವಿಸಿ ತಮಗೂ ಸ್ವಲ್ಪ ಕಾಣಿಸಿತು ಎಂದು ಬುರುಡೆಬಿಟ್ಟರು.

ಬರಗಾಲದ ಬವಣೆಯಿಂದ, ಸಾಲಗಾರ ನಕ್ಷತ್ರಿಕರ ಕಿರುಕುಳದಿಂದ ರೋಸಿ ಹೋಗಿ ಇನ್ನು ಆತ್ಮಹತ್ಯೆಯೇ ಮಾರ್ಗವೆಂದು ಆಲೋಚಿಸುತ್ತಿದ್ದ ರೈತರು ಸಹ ತಮ್ಮ ಪ್ರಯತ್ನವನ್ನು ಮುಂದೂಡಿದರು. ವಾರದ ಸಂತೆಯ ದಿನ ಸುದ್ದಿ ಹಬ್ಬಿದ್ದೇ ತಡ, ಗೊಂದಲಪುರದ ಸುತ್ತಲಿನ ಊರಿನವರು, ತಮ್ಮ ತಮ್ಮ ಊರುಗಳಿಂದಲೇ ಗುಂಡಯ್ಯನ ಬೆಟ್ಟ ನೋಡಿ ಅದು ಹೊಳೆಯುವುದನ್ನು ಕಾಣದೆ ನಿರಾಶರಾಗಿ, ಗೊಂದಲಪುರದ ಜನರ ಮೇಲೆ ಒಂದು ಬಗೆಯ ಅಸೂಯೆಯಿಂದ ಕರುಬಿದ್ದುಂಟು. ಏನಾದರೂ ಈ ಗೊಂದಲಪುರದವರೇ ಅದೃಷ್ಟವಂತರಪ್ಪ, ತಮ್ಮ ಊರಿನ ಕೀರ್ತಿ ಎಲ್ಲ ಕಡೆ ಹರಡುವಂತೆ ಏನಾದರೂ ಹಿಕಮತ್ತು ಮಾಡಿಬಿಡುತ್ತಾರೆ ಎಂದು ಹಲುಬಿದ್ದುಂಟು.

ಹೇಳಿಕೇಳಿ ಇದು ಸಮಾಚಾರ ಕ್ರಾಂತಿಯ ಯುಗ. ಕೇಳಬೇಕೆ! ಗುಲ್ಲೂರು ಪತ್ರಿಕೆಗಳು, ಸಂತೆ ಸುದ್ದಿಯನ್ನೇ ದೊಡ್ಡದು ಮಾಡಿ 'ಗೊಂದಲಪುರ ಪ್ರಕಾಶಿಸುತ್ತದೆ!', 'ಶೈನಿಂಗ್ ಫೆನಾಮೆನನ್' – ಮುಂತಾದ ದೊಡ್ಡಕ್ಷರದ ತಲೆಬರಹದಡಿ ದೊಡ್ಡ ಸುದ್ದಿ ಮಾಡಿದವು. 'ಬೆಳಗುತಿದೆ ನೋಡಿದಿರಾ ಗುಂಡಯ್ಯನ ಬಂಡೆ' – ಎಂಬಂಥ ಶೀರ್ಷಿಕೆಗಳಲ್ಲಿ ಕವಿಗಳು ಕವಿತೆ ಕೊರೆದರೆ, ಗೊಂದಲಪುರ ಯಾವ ದಿಕ್ಕಿನಲ್ಲಿದೆ ಎಂಬುದೇ ತಿಳಿಯದ ಕೆಲವು ವಿದ್ವಾಂಸರು 'ಗುಂಡಯ್ಯನ ಬಂಡೆಯ ಉಜ್ವಲ ಪ್ರಕಾಶ' – ಎಂಬ ವಿಷಯದ ಮೇಲೆ ವಿಚಾರ ಸಂಕಿರಣ ನಡೆಸಿದರಂತೆ!

ಈರಾಂಜಣಿ ಸುದ್ದಿ ಕೇಳಿ ಓಡಿಬಂದ. ಗುಂಡಯ್ಯನ ಬಂಡೆಯವರೆಗೆ ನಡೆದು ಹೋಗಿ ಅಜಮಾಸಿ ನಡೆಸಿದ. ಯಗ್ನ ಕಾರ್ಯ ನಡೆಸಿಕೊಡಲು ಬಂದಿದ್ದ ಕಾವಿಗುರುಗಳು ಇದೊಂದು ಪವಿತ್ರ ಸ್ಥಳವೆಂದು ಹೇಳಿದ್ದುದು ನೆನಪಾಯಿತು. ಬಂಡೋಪನಿಷತ್ತಿನಲ್ಲಿ ಜಡೆಮುನೇಶ್ವರನ ಕುರಿತು ಇಲ್ಲದಿರುವ ನಾಲ್ಕು ಸಂಸ್ಕೃತ ಶ್ಲೋಕಗಳನ್ನು ರಚಿಸಿಕೊಡುವಂತೆ ಅವರನ್ನು ಕೇಳಬೇಕು ಎಂದುಕೊಂಡ.

ಅಂಥ ಈರಾಂಜಣಿ ಈ ಅದ್ಭುತ ವಿಷಯದಲ್ಲಿ ಪಾಲು ಪಡೆಯದಿದ್ದರೆ ಹೇಗಾದೀತು! ಗುಲ್ಲೂರಿನ ಬೊಂಬಾಟ್ ಖಾಸಗಿ ಚಾನೆಲ್‌ನ ಬೆಡಗಿಯನ್ನು ಪುಸಲಾಯಿಸಿ ಗೊಂದಲಪುರದ ಗುಂಡಯ್ಯನ ಬಂಡೆಯ ಬಗ್ಗೆ ಒಂದು ಸಾಕ್ಷ್ಯಚಿತ್ರ ತಯಾರಿಸಿ ತಾನೇ ಕಾಮೆಂಟರಿ ನೀಡಿ ಊರಿನ ಕೀರ್ತಿಯನ್ನು ಪ್ರಸಾರ ಮಾಡಲು ತಯಾರಿ ನಡೆಸಿದ. ಸಿದ್ದೇಶ್ವರಾನಂದಜ, ಮಾಂತಪ್ಪ, ಈರಬದ್ರ ಪಟಾಲಂ ಸಾಕ್ಷ್ಯಚಿತ್ರ ತಯಾರಿಕೆಯಲ್ಲಿ ಮುಖ್ಯ ಪಾತ್ರ ವಹಿಸಿತು.

ಈ ಚಿತ್ರ ಪ್ರಸಾರವಾದ ಮೇಲೆ ದೂರದರ್ಶನ, ಎನ್‌ಡಿಟಿವಿ, ಬಿಬಿಸಿ ಚಾನೆಲ್‌ನವರು ತಮಗೆ ಇಂಥ ಛಾನ್ಸ್ ಸಿಕ್ಕದೆ ಹೋಯಿತಲ್ಲ ಎಂದು ಪೇಚಾಡಿಕೊಂಡರಂತೆ!

ಗೊಂದಲಪುರದ ಹೆಚ್ಚಿನ ಜನರಿಗೆ ಗುಂಡೇಶ್ವರ ಎಷ್ಟೂ ದಯೆ ತೋರಲಿಲ್ಲ. ಏನೋ ಬೇಸರವಾಗಿ ಸ್ವಯಂ ಹೊಳೆಯುವುದನ್ನು ನಿಲ್ಲಿಸಿರಬಹುದು – ಎಂದೂ ಕೆಲವು ಅರೆ ಸಂದೇಹವಾದಿಗಳು ತರ್ಕಿಸಿದರು. ಮುಂದೆ ಎಷ್ಟೋ ಜನ ಗುಟ್ಟಾಗಿ ಹರಕೆ ಕಟ್ಟಿಕೊಂಡರೂ ಗುರುವಜ್ಜನ ಮಂದಗಣ್ಣಿಗೆ ಕಾಣಿಸಿದ ಪ್ರಕಾಶ ಮತ್ತೆ ಕಾಣಿಸಲಿಲ್ಲ.

ಹೀಗಿರುತ್ತ ಒಂದು ದಿನ, ಉರಿಬೇಸಗೆ ಮಧ್ಯೆ ಗೊಂದಲಪುರದವರೇ ಕಕ್ಕಾಬಿಕ್ಕಿಯಾಗುವಂತೆ ಮಾಯದಂಥ ಮಳೆ ಸುರಿಯಿತು. ಹೊಲಗದ್ದೆಗಳಿಗೆ ಹೋಗಿ ಕೆಲಸ ಮಾಡುವ ಸಂಭ್ರಮದಲ್ಲಿ ಗುಂಡಯ್ಯನ ಬಂಡೆ ಹೊಳೆಯಿತೆ, ಹತ್ತಿ ಉರಿಯಿತೆ – ಎಂಬಂಥ ಸೂಕ್ಷ್ಮ ವಿಚಾರಗಳನ್ನು ಅವರು ಮರೆತೇಬಿಟ್ಟರು!

ಹಲವು ದಿನಗಳ ನಂತರ ತಿಳಿದ ಮಾಹಿತಿಯಂತೆ ಗುಂಡಯ್ಯನ ಬಂಡೆಯ ಆಸುಪಾಸಿನಲ್ಲಿ ಕಳ್ಳಭಟ್ಟಿಯವರು ಸಾಮ್ರಾಜ್ಯ ಸ್ಥಾಪಿಸಿದ್ದರಂತೆ! ಸಣ್ಣಪುಟ್ಟ ಖಾಸಗಿ ವ್ಯಕ್ತಿಗಳು ನಡೆಸುತ್ತಿದ್ದ ಈ ದಂಧೆ ಜಾಗತೀಕರಣದ ಪ್ರಭಾವಕ್ಕೊಳಪಟ್ಟು, ವಿದೇಶಿ ಕಂಪೆನಿಗಳ ಪಾಲಿಗೆ ಹೋಯಿತಂತೆ. ಆ ಕಂಪೆನಿಗಳು ಪ್ರಾಯಶಃ ದೊಡ್ಡ ಪ್ರಮಾಣದಲ್ಲಿ ಕಳ್ಳಭಟ್ಟಿ ತಯಾರಿಸುತ್ತಿದ್ದು ಅವರ ಭಟ್ಟಿಗಳ ಬೆಂಕಿ ಹೀಗೆ ಥಳಥಳ ಹೊಳೆದಿರಬಹುದು ಎಂಬುದು ಕೆಲವರ ಗುಮಾನಿ. ಅಂತೂ ಯಾವುದಾದರೂ ಕಾರಣಕ್ಕೆ ಗೊಂದಲಪುರ ಸುದ್ದಿಯಾದದ್ದಂತೂ ನಿಜ.



ಬೀರಣ್ಣ, ಗೊಂದಲಪುರ

# ಹಗಲಿನಲ್ಲಿ ಶುಕ್ರದರ್ಶನ



**ಕ**ಳೆದ ತಿಂಗಳುಗಳಲ್ಲಿ ಸಂಜೆಯ ಆಕಾಶದಲ್ಲಿ ರಾಜನಂತೆ ರಾರಾಜಿಸುತ್ತಿದ್ದ ಶುಕ್ರಗ್ರಹ ಈಗ ಸಂಜೆ ಕಾಣದಂತಾಗಿದೆ. ಬರುವ ತಿಂಗಳುಗಳಲ್ಲಿ ಬೆಳಗಿನ ಜಾವ ಕಾಣುವ ಸನ್ನಾಹದಲ್ಲಿ ಅದು ಸೂರ್ಯನನ್ನು ಹಾದು ಹೋಗಲಿದೆ. ಇದು ಆಗಾಗ್ಗೆ ನಡೆಯುತ್ತಲೇ ಇರುತ್ತದೆ ಯಾದರೂ ಅದು ಸೂರ್ಯನನ್ನು ಹಾದು ಹೋಗುವುದನ್ನು ನೋಡಲು ನಮಗೊಂದು ಅವಕಾಶ ಸಿಕ್ಕಿದೆ. ಇದೇ ಶುಕ್ರ ಸಂಕ್ರಮಣ. ಜೂನ್ ೮ರಂದು ಬೆಳಗಿನ ೧೦.೪೫ ರಿಂದ ೫ ಗಂಟೆಯವರೆಗೆ ಅದು ಸೂರ್ಯನ ಮೇಲೆ ಕಪ್ಪು ಬಿಲ್ಲೆ ಯಂತೆ ಕಾಣಲಿದೆ. ಹೀಗಾಗಿ ನಭಾಸಕ್ತರಿಗೆ ಅಂದು ಹಗಲಿನಲ್ಲಿ ಕೆಲಸ.




ದೂರದರ್ಶಕ ಇರುವವರು ಅದರ ಸಹಾಯದಿಂದ ಗೋಡೆ ಅಥವಾ ತೆರೆಯ ಮೇಲೆ ಬಿಂಬ ಮೂಡಿಸಬಹುದು. ಶಾಲೆಗಳಲ್ಲಿ ಇದನ್ನು ಪ್ರಯೋಗಿಸಲು ಈಗ ಸದವಕಾಶ. ದೂರದರ್ಶಕದ ಬಗ್ಗೆ ಸೂರ್ಯನ ಬಗ್ಗೆ ಮತ್ತು ಶುಕ್ರದ ಬಗ್ಗೆ ತಿಳಿಸಿ ಕೊಡುವ ಕಾರ್ಯಕ್ರಮಗಳನ್ನು ಏರ್ಪಡಿಸಬಹುದು. ನೇರವಾಗಿ ಸೂರ್ಯನನ್ನು ನೋಡದಂತೆ ಮುನ್ನೆಚ್ಚರಿಕೆ ವಹಿಸುವುದು. ಕಣ್ಣಿನ ವರ್ಣಪಟಲ (ರೆಟಿನಾ) ಸುಟ್ಟು ಹೋಗುವ ಸಾಧ್ಯತೆ ಇದೆ.

ಹೀಗೆ ಎಂಟರಂದು ಸೂರ್ಯನನ್ನು ದಾಟುವ ಶುಕ್ರ ತಿಂಗಳ ಕೊನೆಯಲ್ಲಿ ಬೆಳಗಿನ ಜಾವ ಕಾಣಿಸಿಕೊಳ್ಳಲಿದೆ. ೧೬ರಂದು ಬೆಳಗಿನ ಜಾವ ಚಂದ್ರನ ಪಕ್ಕವೇ ಕಾಣುತ್ತದೆ. ತಿಂಗಳ ಕೊನೆಯ ದಿನ ಸೂರ್ಯೋದಯಕ್ಕೆ ಒಂದು ಗಂಟೆ ಮುಂಚೆ ಪೂರ್ವ ದಿಗಂತದ ಅಂಚಿನಲ್ಲಿ ಕಾಣಲಿದೆ. ಸೂರ್ಯನ ಇನ್ನೊಂದು ಬದಿಯಿಂದ ಬಳಸಿ ಬಂದ ಬುಧ ತಿಂಗಳ ಕೊನೆಗೆ ಸಂಜೆಯ ಆಕಾಶದಲ್ಲಿ ಕಾಣಲಿದೆ.

ಶನಿಗ್ರಹ ಈ ತಿಂಗಳು ನೋಡಲು ಸಿಗುವುದೇ ಇಲ್ಲ. ಮಂಗಳ ಕ್ಷೀಣವಾಗಿದೆ. ಪಶ್ಚಿಮದ ಅಂಚಿನಲ್ಲಿ ಸಂಜೆ ಕಾಣುತ್ತದೆ. ಆದ್ದರಿಂದ ಸಂಜೆಯ ಆಕಾಶದಲ್ಲಿ ದೊರಕುವ ಏಕಮಾತ್ರ ಗ್ರಹ ಗುರು ಎನ್ನಬಹುದು. ಜೂನ್ ೨೨-೨೩ರ ನಡುವೆ ಚಂದ್ರ ಗುರು ಗ್ರಹವನ್ನು ಹಾದು ಹೋಗುವುದು.

### ಶುಕ್ರ ಸಂಕ್ರಮಣದ ವಿವರಗಳು

| | ಆರಂಭ | | | ಎರಡನೆಯ ಸ್ಪರ್ಶ | | | ಮೂರನೆಯ ಸ್ಪರ್ಶ | | | ಮುಕ್ತಾಯ | | |
|---|---|---|---|---|---|---|---|---|---|---|---|---|
| | ಗಂ. | ನಿ. | ಸೆ. | ಗಂ. | ನಿ. | ಸೆ. | ಗಂ. | ನಿ. | ಸೆ. | ಗಂ. | ನಿ. | ಸೆ. |
| ಬೆಂಗಳೂರು | ೧೦ | ೪೫ | ೩೬ | ೧೧ | ೦೪ | ೧೯ | ೧೬ | ೩೨ | ೪೨ | ೧೬ | ೫೧ | ೩೬ |
| ಚೆನ್ನೈ | ೧೦ | ೪೫ | ೧೯ | ೧೧ | ೦೪ | ೦೨ | ೧೬ | ೩೨ | ೩೧ | ೧೬ | ೫೧ | ೨೬ |
| ಹೈದರಾಬಾದ್ | ೧೦ | ೪೫ | ೪೨ | ೧೧ | ೦೪ | ೨೮ | ೧೬ | ೩೨ | ೧೬ | ೧೬ | ೫೧ | ೧೩ |
| ಪಣಜಿ | ೧೦ | ೪೬ | ೦೭ | ೧೧ | ೦೪ | ೫೨ | ೧೬ | ೩೨ | ೪೫ | ೧೬ | ೫೧ | ೩೮ |
| ಪುಣೆ | ೧೦ | ೪೬ | ೧೩ | ೧೧ | ೦೫ | ೦೧ | ೧೬ | ೩೨ | ೨೯ | ೧೬ | ೫೧ | ೨೫ |

ಕರ್ನಾಟಕದ ಯಾವುದೇ ಸ್ಥಳದಿಂದ ಸುಮಾರು ೧೧.೦೫ ರಿಂದ ೧೬. ೩೦ರವರೆಗೆ ಸೂರ್ಯನನ್ನು ನೋಡಿದರೆ ಕಪ್ಪು ಬಿಲ್ಲೆ ಕಾಣುವುದು.

ಲೀನಿಯರ್ ಧೂಮಕೇತು ತಿಂಗಳುದ್ದಕ್ಕೂ ಪಶ್ಚಿಮ ದಿಗಂತದ ಅಂಚಿನಲ್ಲಿ ಸಂಜೆ ಕಾಣುತ್ತದೆ. ದುರ್ಬೀನಿನಿಂದ ಮಾತ್ರ ಇದನ್ನು ನೋಡಲು ಸಾಧ್ಯವಾಗುವುದು. ಇನ್ನೊಂದು ಧೂಮಕೇತು ನೀಟ್ ಕೂಡ ಕ್ಷೀಣವಾಗುತ್ತದೆ. ಆದರೆ ಸಪ್ತರ್ಷಿ ಮಂಡಲದಲ್ಲಿ ಇರುವುದರಿಂದ ರಾತ್ರಿ ಇಡೀ ನೋಡಲು ಸಿಗುತ್ತದೆ ಎಂಬುದೇ ವಿಶೇಷ.

ರಾತ್ರಿಯ ಆಕಾಶ ಶುಭ್ರವಾಗಿದ್ದರೂ ನಕ್ಷತ್ರಗಳಿಗೆ ಕೊರತೆ ಎನ್ನಿಸುತ್ತದೆ. ಉತ್ತರದ ಸಪ್ತರ್ಷಿಮಂಡಲ, ನೆತ್ತಿಯ ಮೇಲಿನ ಸಿಂಹ, ದಕ್ಷಿಣದಲ್ಲಿ ಕ್ರಕ್ಸ್ (ತ್ರಿಶಂಕು, ದಕ್ಷಿಣ ಶಿಲುಬೆ) ಇವು ಪ್ರಕಾಶಮಾನವಾದ ಪುಂಜಗಳು. ತಿಂಗಳ ಕೊನೆಯ ಹೊತ್ತಿಗೆ ಪೂರ್ವದಲ್ಲಿ ವೃಶ್ಚಿಕ ರಾಶಿಯ ಸೊಬಗು ಕಾಣತೊಡಗುತ್ತದೆ. ಜೂನ್ ೩ರ ಹುಣ್ಣಿಮೆಯಂದು ಚಂದ್ರನ ಪಕ್ಕ ಕಾಣುವ ಕೆಂಪು ನಕ್ಷತ್ರವೇ ಜ್ಯೇಷ್ಠಾ.

ಜೂನ್ ೨೦ರ ಬೆಳಗಿನ ಜಾವ ಸೂರ್ಯ ಉತ್ತರದ ತುದಿಯನ್ನು ಮುಟ್ಟುತ್ತದೆ. ದಕ್ಷಿಣಕ್ಕೆ ಹೊರಳುತ್ತದೆ. ಅದೇ ದಕ್ಷಿಣಾಯನ. ಬೇಸಿಗೆಯ ಮುಕ್ತಾಯವನ್ನು ಸೂಚಿಸುವ ಘಟನೆ.



೧೮೮೨ರ ಶುಕ್ರ ಸಂಕ್ರಮಣವನ್ನು ಅಮೆರಿಕದಿಂದ ವೀಕ್ಷಿಸಿದ್ದು (ಚಿತ್ರ ಕೃಪೆ : ನಾಸಾ)

### ಖಗೋಳ ದಿನಚರಿ

- ೩ ಹುಣ್ಣಿಮೆ ೯.೫೦ಕ್ಕೆ
- ೮ ಶುಕ್ರಗ್ರಹದ ಸಂಕ್ರಮಣ
- ೧೦ ಚಾಂದ್ರಮಾಸದ ಕೊನೆಯ ಪಾದ ಚಂದ್ರೋದಯ ನಡುರಾತ್ರಿಯಲ್ಲಿ
- ೧೬ ಶುಕ್ರ-ಚಂದ್ರದ ನಡುವೆ ೫ ಡಿಗ್ರಿ ಅಂತರ
- ೧೮ ಅಮಾವಾಸ್ಯೆ ೧.೨೪ಕ್ಕೆ
- ೨೦ ದಕ್ಷಿಣಾಯನ
- ೨೪ ಗುರು – ಚಂದ್ರ ನಡುವೆ ಕನಿಷ್ಠಕೋನ
- ೨೬ ಚಾಂದ್ರಮಾಸದ ಮೊದಲ ಪಾದ ಚಂದ್ರಾಸ್ತ ನಡುರಾತ್ರಿಯಲ್ಲಿ
- ೨೯ ಶುಕ್ರದ ಹಿನ್ನಡೆ ಮುಕ್ತಾಯ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

ಸೀಯಾರ್ಕೆ

# ಇರಾಕಿನಲ್ಲಿ ಅಮೆರಿಕದ ಅಮಾನುಷ ಬರ್ಬರ ಕೃತ್ಯ



ಇಪ್ಪತ್ತನೆ ಶತಮಾನದ ಎರಡನೇ ಮಹಾಯುದ್ಧದ ಕಾಲದಲ್ಲಿ ಫಾಸಿಸ್ಟ್ ಹಿಟ್ಲರ್ ನಡೆಸಿದ ಹಿಂಸಾಚಾರ, ದೌರ್ಜನ್ಯಗಳನ್ನು ನೆನಪಿಗೆ ತರುವುದಲ್ಲದೆ, ಅದನ್ನು ಮೀರಿಸಿರುವ ಅಮಾನುಷ ಕ್ರೌರ್ಯ ಇರಾಕಿನಲ್ಲಿ ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ನಾಯಕತ್ವದಲ್ಲಿ ಜರುಗಿದೆ, ಜರುಗುತ್ತಿದೆ. ಯುದ್ಧ ಪಿಪಾಸಿಗಳಾದ ಈ ಇಬ್ಬರಿಗೂ ವ್ಯತ್ಯಾಸ ಹೆಚ್ಚೇನಿಲ್ಲ. ಹಿಟ್ಲರನ ಫಾಸಿಸ್ಟ್ ಸೈನಿಕರು ತಮ್ಮ ದುಷ್ಕೃತ್ಯಗಳನ್ನು ಬಹಿರಂಗವಾಗಿ, ರಾಜಾರೋಷವಾಗಿ ನಡೆಸುತ್ತಿದ್ದರು. ಆದರೆ ಈ ಆಧುನಿಕ ಫಾಸಿಸ್ಟ್ ಜಾರ್ಜ್ ಬುಷ್‌ನ ಸೈನಿಕರು ಎಲ್ಲ ಅನಾಚಾರಗಳನ್ನು, ಬರ್ಬರ ಕೃತ್ಯಗಳನ್ನು ರಹಸ್ಯವಾಗಿ ನಡೆಸುತ್ತಿದ್ದಾರೆ. ಎಷ್ಟಾದರೂ ಅಮೆರಿಕದ ಎಲ್ಲ ದುಶ್ಚರ್ಯೆಗಳೂ ಜರುಗುವುದು ನಾಗರಿಕತೆ, ಪ್ರಜಾಪ್ರಭುತ್ವ, ಮಾನವ ಹಕ್ಕುಗಳು, ವಗೈರೆ ಮೌಲ್ಯಗಳನ್ನು ಎತ್ತಿ ಹಿಡಿಯುವ ಹೆಸರಿನಲ್ಲೇ. ಇರಾಕಿನ ಅಬುಘ್ರಾಯಿಬ್ ಕಾರಾಗೃಹದಲ್ಲಿ ಅಮೆರಿಕದ ಸೈನಿಕರು ಬಂಧಿತ ಕೈದಿಗಳ ಮೇಲೆ ನಡೆಸಿರುವ ಹಿಂಸೆ, ಅತ್ಯಾಚಾರಗಳ ಚಿತ್ರಗಳು, ವಿಡಿಯೋ ದೃಶ್ಯಗಳು, ನಾಗರಿಕ ಜಗತ್ತಿನ ಎಲ್ಲರನ್ನೂ ತಲ್ಲಣಗೊಳಿಸಿವೆ, ಆಕ್ರೋಶಗೊಳಿಸಿವೆ. ಅಮೆರಿಕದ ಈ ಹೇಯ ಕೃತ್ಯವನ್ನು ಪ್ರಪಂಚದ ಎಲ್ಲ ಜನರೂ ಖಂಡಿಸಿದ್ದಾರೆ. ಕನಿಷ್ಠಮಟ್ಟದ ಸೌಕರ್ಯಗಳನ್ನು ಒದಗಿಸದೆ ಪ್ರಾಣಿಗಳನ್ನು ಕೂಡಿಹಾಕುವಂತೆ ದೂಡಲ್ಪಟ್ಟಿರುವ ಇರಾಕಿ ಕೈದಿಗಳ ದುಸ್ಥಿತಿ, ಅವರ ಮೇಲೆ ಅಮೆರಿಕದ ಸೈನಿಕರು ನಡೆಸಿರುವ ದೌರ್ಜನ್ಯಗಳು ಎಲ್ಲ ಅಂತರರಾಷ್ಟ್ರೀಯ ನಿಯಮಗಳ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಕಳೆದ ಒಂದು ವರ್ಷದಲ್ಲಿ ಆಕ್ರಮಿತ ಇರಾಕಿನಲ್ಲಿ ಅಮೆರಿಕ ನಡೆಸಿರುವ ದುಷ್ಕೃತ್ಯಗಳು ಈಗ ಒಂದೊಂದಾಗಿ ಬಯಲಾಗುತ್ತಿವೆ.

ಪ್ರಾರಂಭದಲ್ಲಿ ಈ ಪ್ರಕರಣ ಅಧಿಕಾರಿಗಳ ಗಮನಕ್ಕೆ ಬಾರದೆ ಎಲ್ಲೋ ಒಂದೆಡೆ ಕೆಲವು ಸೈನಿಕರಿಂದ ನಡೆದಿದೆ ಎಂದು ಮುಚ್ಚಿ ಹಾಕಲು ನೋಡಿದ ಜಾರ್ಜ್ ಬುಷ್ ಮತ್ತು ಅವನ ಭಂಟರು ಅಂತರರಾಷ್ಟ್ರೀಯ ಒತ್ತಾಯಕ್ಕೆ, ಆಕ್ರೋಶಕ್ಕೆ ಮಣಿದು ಕ್ಷಮಾಪಣೆ ಕೇಳಬೇಕಾಯಿತು. ವಿಚಾರಣೆಯೊಂದು ಪ್ರಾರಂಭವಾಗಿದೆ. ಕೆಳದರ್ಜೆಯ ಒಂದೆರಡು ಸೇನಾಧಿಕಾರಿಗಳ ತಲೆ ಮೇಲೆ ಗೂಬೆ ಕೂರಿಸಿ ಬುಷ್, ಶೆನಿ, ರಮ್ಸ್‌ಫೆಲ್ಡ್, ಪೊವೆಲ್ ಎಲ್ಲ ಕೈತೊಳೆಯುತ್ತಾರೆ ಸ್ವಲ್ಪ ದಿನಗಳಲ್ಲಿ. ಇನ್ನೊಂದು ಪ್ರಕರಣ ಬಯಲಾಗುವ ಹೊತ್ತಿಗೆ ಇದು ಹಳೆಯದಾಗಿರುತ್ತದೆ, ಜನ ಮರೆಯುತ್ತಾರೆ ಎಂಬುದೇ ಅವರ ಲೆಕ್ಕಾಚಾರ. ಮತ್ತೆಲ್ಲ ಮಾಮೂಲಿನಂತೆ ನಡೆದುಕೊಂಡು ಹೋಗುತ್ತದೆ. ಈ ಇಡೀ ಪ್ರಕರಣದಲ್ಲಿ ವಿಶ್ವಸಂಸ್ಥೆಯ ನಿಷ್ಕ್ರಿಯತೆ ಎದ್ದು ಕಾಣುತ್ತದೆ. ಅದನ್ನು ಸ್ಥಗಿತ ಗೊಳಿಸುವುದರಲ್ಲಿ ಅಮೆರಿಕ ಸಫಲಗೊಂಡಿದೆ. ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನಾನ್ ಎಂಬಾತ ಅಮೆರಿಕ ಸರಕಾರದ ಕೈಕೂಲಿಯಂತಾಗಿದ್ದಾನೆ. ಅತ್ಯಾಚಾರಗಳನ್ನು ಖಂಡಿಸುವುದಕ್ಕೂ ಆತನಿಗೆ ಸ್ವರ ಹೊರಡದು. ಹಾಗೆಯೇ ಅಧಿಕಾರದಲ್ಲಿರುವವರೆಗೂ ಅಮೆರಿಕದ ಮರ್ಜಿಗನುಸಾರ ತಾಳ ಹಾಕುತ್ತಿದ್ದ ವಾಜಪೇಯಿ, ಅದ್ವಾನಿ ಕಂಪೆನಿಯವರೂ ಕೂಡ ಸೊಲ್ಲೆತ್ತಲಿಲ್ಲ. ಅವರಿಗೆ ನಮ್ಮ ಮತದಾರರು ಸರಿಯಾದ ಪಾಠ ಕಲಿಸಿದ್ದಾರೆ. ವರ್ಷದ ಕೊನೆ ಹೊತ್ತಿಗೆ ಅಮೆರಿಕದ ಚುನಾವಣೆಗಳಲ್ಲಿ ಅಮೆರಿಕದ ಜನತೆ ಜಾರ್ಜ್ ಬುಷ್‌ಗೂ ಅದೇ ಗತಿ ಕಾಣಿಸಬಹುದು. ಆದರೆ ಅಮೆರಿಕದ ಆಡಳಿತೆಯಲ್ಲಿ ಮೂಲಭೂತ ಬದಲಾವಣೆ ತರಲು ಜನತೆ ಎಚ್ಚರಗೊಳ್ಳಲು ಸಾಕಷ್ಟು ಕಾಲ ಹಿಡಿದೀತು.

ಅಮೆರಿಕದ ಆಡಳಿತೆ ಇಂಥ ಹೇಯ ಕೃತ್ಯಗಳನ್ನು ನಡೆಸಿರುವುದು ಇದೇ ಮೊದಲ ಸಲವೇನಲ್ಲ. ಇತರ ದೇಶಗಳ ಅದರಲ್ಲೂ ಐರೋಪ್ಯೇತರ ದೇಶಗಳ ಜನರ ಜೀವಕ್ಕೆ ಬೆಲೆಯೇ ಇಲ್ಲ ಅಮೆರಿಕದ ದೃಷ್ಟಿಯಲ್ಲಿ. ಜಪಾನು ಶರಣಾಗತವಾಗುತ್ತಿದ್ದಾಗ ಪ್ರಯೋಗಕ್ಕಾಗಿ ಹಿರೋಷಿಮಾ, ನಾಗಾಸಾಕಿಗಳ ಮೇಲೆ ಪರಮಾಣು ಬಾಂಬು ಸುರಿದು ಅಮಾಯಕ ಜನರನ್ನು ಸುಟ್ಟು ಬೂದಿ ಮಾಡಿದವರು ಏನು ಮಾಡಲೂ ಹೇಸುವುದಿಲ್ಲ. ಸ್ವಾತಂತ್ರ್ಯಯೋಧರು ದುರಾಕ್ರಮಣಕಾರರ ವಿರುದ್ಧ ಸಿಡಿದೆದ್ದು ಅಲ್ಲೊಬ್ಬ ಇಲ್ಲೊಬ್ಬ ಅಮೆರಿಕ ನಾಗರಿಕನನ್ನೋ, ಸೈನಿಕನನ್ನೋ ಕೊಂದು ಹಾಕಿದಾಗ ಕಣ್ಣೀರು ಸುರಿಸುವ ಅಮೆರಿಕಾಗೆ ತಮ್ಮ ಸೈನಿಕರ ಬಾಂಬುದಾಳಿಗೆ ನೂರಾರು, ಸಾವಿರಾರು ಮಂದಿ ಬಲಿಯಾದಾಗ ಏನೂ ಅನ್ನಿಸದು. ಎರಡು ದಶಕಗಳ ಕಾಲ ಏಶಿಯಾದ ಪುಟ್ಟ ದೇಶ ವಿಯೆಟ್ನಾಮ್ ಜನತೆಯ ಸ್ವಾತಂತ್ರ್ಯ ಹರಣ ಮಾಡಲು ಅಮೆರಿಕ ನಡೆಸಿದ ದೌರ್ಜನ್ಯಗಳು ಒಂದೇ ಎರಡೇ. ನಾಪಾಮ್ ಬಾಂಬುಗಳು, ಪೆಲೆಟ್ ಬಾಂಬುಗಳು, ಎಲೆ ಉದುರಿಸುವ, ಬೆಳೆ ನಾಶಮಾಡುವ ರಾಸಾಯನಿಕ ಸಿಂಪರಣೆ, ಇನ್ನೂ ಹಲವು ಅಸ್ತ್ರಗಳ ಪ್ರಯೋಗ ನಡೆಸಿದರೂ ಕೊನೆಗೂ ಜಯ ಲಭಿಸಿದ್ದು ವಿಯೆಟ್ನಾಮ್ ಜನತೆಗೇ. ಹೀನಾಯ ಸೋಲು ಅನುಭವಿಸಿದ ಅಮೆರಿಕ ಅಲ್ಲಿಂದ ಕಾಲ್ತೆಗೆದದ್ದೂ ಪ್ರಪಂಚದ ಹಾಗೂ ಅಮೆರಿಕದ ಜನತೆಯ ಒತ್ತಾಯದ ಮೇರೆಗೆ. ಈಗ ಇರಾಕ್ ಅಮೆರಿಕಾಗೆ ಎರಡನೇ ವಿಯೆಟ್ನಾಮ್ ಆಗುತ್ತಿದೆ. ಜೀವದ ಮೇಲೆ ಆಶೆ ತೊರೆದ ಇರಾಕಿನ ಜನ ದುರಾಕ್ರಮಣಕಾರರ ವಿರುದ್ಧ ಹೋರಾಟವನ್ನು ದಿನೇ ದಿನೇ ತೀವ್ರಗೊಳಿಸುತ್ತಿದ್ದಾರೆ. ಇರಾಕಿನ ದುರಾಕ್ರಮಣದ ಯುದ್ಧದಲ್ಲಿ ಮಡಿದ ಅಮೆರಿಕನ್ ಸೈನಿಕರ ಸಂಖ್ಯೆಗಿಂತ ಎರಡು ಪಟ್ಟು ಹೆಚ್ಚು ಅಮೆರಿಕನ್ ಯೋಧರು ಈ ಒಂದು ವರ್ಷದ ಅವಧಿಯಲ್ಲಿ ಸತ್ತಿದ್ದಾರೆ. ಸುನ್ನಿ, ಷಿಯಾ ಪಂಗಡಗಳ ಭೇದವಿಲ್ಲದೆ ಅಮೆರಿಕನ್ ದುರಾಕ್ರಮಣಕಾರರ ವಿರುದ್ಧ ಇರಾಕಿನ ಜನ ಬಂಡೆದ್ದಿದ್ದಾರೆ. ಅಮೆರಿಕದ ಸೈನ್ಯ ಕೂಡ ಪ್ರತಿಭಟನಾಕಾರರ ಮೇಲೆ ದಬ್ಬಾಳಿಕೆಯನ್ನು ತೀವ್ರಗೊಳಿಸಿದೆ. ವಿಯೆಟ್ನಾಮ್‌ನಿಂದ ಪಾಠ ಕಲಿಯದ ಅಮೆರಿಕ

೬೨ ನೇ ಪುಟಕ್ಕೆ

---

**ಇರಾಕಿನ ಕಾರಾಗೃಹಗಳಲ್ಲಿ ನಡೆದಿರುವ ಅಸಹ್ಯ ಹಿಂಸೆಯನ್ನು ಅಮೆರಿಕಾದ ರಮ್ಸ್‌ಫೆಲ್ಡ್ ಹೆಚ್ಚುಕಡಿಮೆ ಅಲ್ಲಗಳೆದಿದ್ದಾನಲ್ಲದೆ ಈ ಬಗ್ಗೆ ಅರಬ್ ರಾಷ್ಟ್ರಗಳ ಪತ್ರಿಕೆಗಳಲ್ಲಿ ಪ್ರಕಟವಾದ ವರದಿಗಳನ್ನು "ತೊಟ್ಟೆಕಸ"(ಗಾರ್ಬೇಜ್) ಎಂದು ಕರೆದಿದ್ದಾನೆ. ಮಾಡುವುದು ಹೊಲಸು ಕೆಲಸ, ಆದರೆ ಅದನ್ನು ಎತ್ತಿ ತೋರಿಸಿದರೆ ಅದು 'ಹೊಲಸು' ಎನ್ನುವ ಈತನ ಮನಸ್ಸು ಎಷ್ಟು ಹೊಲಸಿರಬೇಕು! ಅವನಿಗಿಂತಲೂ ಬುದ್ಧಿವಂತ ಟೋನಿ ಬ್ಲೇರ್. ತನ್ನ ಅಧಿಕಾರವನ್ನು ಪರದೆಯ ಹಿಂದೆ ಚಲಾಯಿಸಿ ಚಿತ್ರಗಳನ್ನು ಪ್ರಕಟಿಸಿದ ಪತ್ರಿಕೆಯ ಸಂಪಾದಕನಿಂದ ಕ್ಷಮೆ ಹಾಗೂ ರಾಜೀನಾಮೆ ಪಡೆದುಕೊಂಡು ಬಿಟ್ಟಿದ್ದಾನೆ. ಈ ಕೃತ್ರಿಮಗಳೆಲ್ಲಾ ವಸ್ತು ಸ್ಥಿತಿಯನ್ನು ಇಲ್ಲವಾಗಿಸುವುದಿಲ್ಲ.**



ಅಮೆರಿಕದ ದುಷ್ಕೃತ್ಯ - ಇಂದು

# ಮರಳಿ ಕಣಿವೆಗೆ

ಸೆಪ್ಟೆಂಬರ್ ೧೧, ೨೦೦೧ರಂದು ಭಯೋತ್ಪಾದಕರು ನ್ಯೂಯಾರ್ಕಿನ ವಿಶ್ವವಾಣಿಜ್ಯ ಕೇಂದ್ರದ ಯುಗಳ ಗೋಪುರಗಳನ್ನು ಉರುಳಿಸಿದಾಗ ಇಡೀ ವಿಶ್ವವೇ ಬೆಚ್ಚಿಬಿದ್ದಿತು. ತತ್ತರಿಸಿದ ಅಮೆರಿಕ ಭಯೋತ್ಪಾದನೆ ವಿರುದ್ಧ ಸಮರ ಸಾರಿ ಭಯೋತ್ಪಾದಕರ ಬೇಟೆಗೆ ತೊಡಗಿ ಆಫ್ಘಾನಿಸ್ತಾನದ ಮೇಲೆ ಆಕ್ರಮಣ ನಡೆಸಿತಷ್ಟೆ. ಆಗ ಅಮೆರಿಕ ಸರ್ಕಾರ ಅಮೆರಿಕದಲ್ಲಿರುವ ಮುಸ್ಲಿಮರನ್ನೆಲ್ಲಾ ಭಯೋತ್ಪಾದಕರು ಅಥವಾ ಅವರ ಬೆಂಬಲಿಗರೆಂದೇ ಶಂಕಿಸಿ ನಾನಾ ರೀತಿಯ ದೈಹಿಕ, ಮಾನಸಿಕ ಕಿರುಕುಳ ಕೊಡಲಾರಂಭಿಸಿತು. ಕೆಲವರನ್ನು ಕೊಂದಿದ್ದೂ ಆಯಿತು. ಅದು ಅಲ್ಲಿಗೇ ನಿಲ್ಲಲಿಲ್ಲ. ಅಮೆರಿಕದಲ್ಲಿರುವ ಅನಿವಾಸಿ ಭಾರತೀಯರಾದ ಸಿಖ್ಖರನ್ನೂ ಮುಸ್ಲಿಮರೆಂದೇ ಶಂಕಿಸಿ ಅವರಿಗೂ ಚಿತ್ರಹಿಂಸೆ ಕೊಡಲಾಯಿತು. ಒಂದಿಬ್ಬರ ಕೊಲೆಯೂ ಆಯಿತು. ಈ ಸಂಶಯ ಪಿಶಾಚಿ ಅಮೆರಿಕವನ್ನು ಇನ್ನೂ ಕಾಡುತ್ತಿದೆ. ಇತಿಹಾಸ ಪುನರಾವರ್ತಿಸುತ್ತದೆ ಎಂಬುದಕ್ಕೆ ಇದೊಂದು ಇತ್ತೀಚಿನ ನಿದರ್ಶನ.

ಕಳೆದ ಶತಮಾನದ ನಲವತ್ತರ ದಶಕದಲ್ಲಿ ಎರಡನೆ ಜಾಗತಿಕ ಯುದ್ಧದಲ್ಲಿ ಪಾಲ್ಗೊಂಡಿದ್ದ ಜಪಾನ್ ಡಿಸೆಂಬರ್ ೭, ೧೯೪೧ರಂದು ಅಮೆರಿಕದ ಪರ್ಲ್ ಹಾರ್ಬರ್ ಮೇಲೆ ಹಠಾತ್ ದಾಳಿ ಮಾಡಿ ಬಾಂಬ್ ಹಾಕಿದ ನಂತರ ಅಮೆರಿಕ ಸರ್ಕಾರ ತನ್ನ ದೇಶದಲ್ಲಿದ್ದ ಎಲ್ಲ ಜಪಾನೀಯರನ್ನೂ ಶತ್ರು ಪಕ್ಷದವರೆಂದೂ ದೇಶದ್ರೋಹಿಗಳೆಂದೂ ಪರಿಗಣಿಸಿ ಸುಮಾರು ೧೨೦,೦೦೦ ಜನರನ್ನು ಬಂಧಿಸಿತು. ಅವರೆಲ್ಲ ಜಪಾನ್‌ನಿಂದ ವಲಸೆ ಹೋಗಿ ಅಮೆರಿಕದಲ್ಲಿ ನೆಲೆಸಿದ್ದ 'ಇಸ್ಸೆ'ಗಳು ಹಾಗೂ ಅಮೆರಿಕದಲ್ಲೆ ಹುಟ್ಟಿದ ಜಪಾನ್ ಸಂಜಾತ 'ನಿಸ್ಸೆ'ಗಳು ಆಗಿದ್ದರು. ಪಶ್ಚಿಮ ಕರಾವಳಿಯ ಕ್ಯಾಲಿಫೋರ್ನಿಯ ರಾಜ್ಯದಲ್ಲಿ ನೆಲಸಿದ್ದು ಮುಖ್ಯವಾಗಿ ವ್ಯವಸಾಯ ಮತ್ತು ಮೀನುಗಾರಿಕೆಯಲ್ಲಿ ತೊಡಗಿದವರಾಗಿದ್ದರು. ಬಂಧಿತರಾಗಿದ್ದವರ ಪೈಕಿ ಸೇನೆಯಲ್ಲಿ ಸೇವೆ ಸಲ್ಲಿಸಲು ಒಪ್ಪಿದ ದೃಢಕಾಯರನ್ನು ಹೊರತು ಉಳಿದವರನ್ನೆಲ್ಲಾ ದೂರದ ನಿರ್ಜನ ಪ್ರದೇಶಗಳಲ್ಲಿ ಕ್ಯಾಂಪ್‌ಗಳಲ್ಲಿಡಲಾಯಿತು. ಅಮೆರಿಕ ೧೯೪೫ರ ಆಗಸ್ಟ್ ೬ ಮತ್ತು ೯ರಂದು ಹಿರೋಷಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಪರಮಾಣು ಬಾಂಬ್ ಹಾಕಿ ಯುದ್ಧ ಅಂತ್ಯಗೊಂಡ ನಂತರ ಬಂಧಿತ ಜಪಾನೀಯರನ್ನೆಲ್ಲಾ ಬಿಡುಗಡೆ ಮಾಡಲಾಯಿತು.

ಬಂಧನ ಮುಕ್ತ ಜಪಾನೀಯರಿಗೆ ಬಂಧನದ ದಿನಗಳು ಎಷ್ಟು ಕ್ರೂರವಾಗಿದ್ದವೋ ನಂತರದ ದಿನಗಳೂ ಅಷ್ಟೇ ಕ್ರೂರವಾಗಿದ್ದವು. ತಮ್ಮ ತಮ್ಮ ನೆಲೆಗಳಿಗೆ ಮರಳಿದಾಗ ಅವರು ಕಂಡಿದ್ದೇನು ? ಸ್ಥಳೀಕರು ಅವರ ಮನೆಗಳನ್ನು ಲೂಟಿ ಮಾಡಿದ್ದರು. ಅನೇಕರ ಜಮೀನುಗಳನ್ನು ಕಬಳಿಸಿದ್ದರು. ಅಲ್ಲಿಗೇ ಮುಗಿಯಲಿಲ್ಲ ಅವರ ಬವಣೆ. ಜನಾಂಗೀಯ ದ್ವೇಷ ಮತ್ತು ಪಕ್ಷಪಾತಕ್ಕೊಳಗಾದರು. ನಾಗರಿಕ ಸ್ವಾತಂತ್ರ್ಯ ಕಳೆದುಕೊಂಡಿದ್ದರು. ಉದ್ಯೋಗ ದೊರೆಯುವುದು ದುರ್ಲಭವಾಯಿತು. ಗಂಭೀರ ಸಾಮಾಜಿಕ ಸಮಸ್ಯೆಗಳು ಎದುರಾದವು. ಅವರು ಕಳೆದುಕೊಳ್ಳದೇ ಇದ್ದದ್ದು ಅವರ ಸ್ವಾಭಿಮಾನ. ಕಿರುಕುಳ ಕೊಟ್ಟ ಸರ್ಕಾರವನ್ನಾಗಲೀ ವಂಚಿಸಿದ ಸಮಾಜವನ್ನಾಗಲೀ ದ್ವೇಷಿಸಲಿಲ್ಲ. ವಿಷ ಕಾರಲಿಲ್ಲ. ಬದಲಿಗೆ ಕಳೆದುಕೊಂಡಿದ್ದ ನಾಗರಿಕ ಸ್ವಾತಂತ್ರ್ಯ ಮತ್ತು ಹಕ್ಕುಗಳಿಗಾಗಿ ಶಾಂತಿಯುತವಾಗಿ ಹೋರಾಡಿ ಸಫಲರಾದರು. ಇಂದು ಕಂಪ್ಯೂಟರ್ ಕ್ಷೇತ್ರದ ಕೇಂದ್ರವಾದ ಸಿಲಿಕಾನ್ ವ್ಯಾಲಿಯಲ್ಲಿ ನೆಲೆಸಿದರು. "ಕತ್ತಲನ್ನು ಶಪಿಸುವುದಕ್ಕಿಂತ ಬತ್ತಿ ಹೊತ್ತಿಸುವುದು ಲೇಸು" ಎಂಬುದು ಅವರ ತತ್ತ್ವವಾಗಿತ್ತು. ಕಳೆದುಹೋದ ಕಹಿ ದಿನಗಳನ್ನು ಮರೆತು ಹುರುಪಿನಿಂದ ಹೊಸ ಜೀವನ ಪ್ರಾರಂಭಿಸಿದರು. ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡು ಅಲ್ಲಿಯ ಸಮಗ್ರ ಪ್ರಗತಿಗೆ ಶ್ರಮಿಸಿ ತಾವು ಏನೆಂಬುದನ್ನು ಸಾಬೀತು ಪಡಿಸಿದರು. ಎರಡನೆಯ ಜಾಗತಿಕ ಯುದ್ಧ ಮುಕ್ತಾಯವಾದ ೪೫ ವರ್ಷಗಳ ನಂತರ ೧೯೯೦ರಲ್ಲಿ ಅಮೆರಿಕ ಸರ್ಕಾರ ಹಿರೋಷಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಪರಮಾಣು ಬಾಂಬ್ ಪ್ರಯೋಗಿಸಿದ್ದನ್ನು ಘೋರ ಅಪರಾಧವೆಂದು ಒಪ್ಪಿಕೊಂಡಿದ್ದಲ್ಲದೆ ಯುದ್ಧ ಕಾಲದಲ್ಲಿ ಮುಗ್ಧ ಜಪಾನೀಯರನ್ನು ಬಂಧಿಸಿದ್ದಕ್ಕಾಗಿ ಕ್ಷಮೆ ಬೇಡಿತು.

ಆ ಘಟನೆಗಳು ಕುರಿತಂತೆ ಕ್ರಿಸ್ಟಿನಾ ಲಿಮ್ ಎಂಬಾಕೆ ತಯಾರಿಸಿದ 'ರಿಟರ್ನ್ ಟು ದಿ ವ್ಯಾಲಿ' ಎಂಬ ಸಾಕ್ಷ್ಯ ಚಿತ್ರ ಕಳೆದ ವರ್ಷ ಜೂನ್ ೩೦ರಂದು ಅಮೆರಿಕದ ದೂರದರ್ಶನದಲ್ಲಿ ಪ್ರಸಾರವಾಯಿತು. ಒಂದು ಗಂಟೆಯ ಆ ಚಿತ್ರಕ್ಕೆ ಪತ್ರಿಕೋದ್ಯಮಿ ಕೆನ್ ಕಷವಾಹರ ನಿರೂಪಕ. ಸಿಲಿಕಾನ್ ವ್ಯಾಲಿಯ ಸ್ಯಾನ್ ಓಸೆ ನಗರದಲ್ಲಿ ಬಹುತೇಕ ಜಪಾನೀಯರೇ ನೆಲೆಸಿರುವ 'ಜಪಾನ್ ಟೌನ್' ಎಂಬ ಬಡಾವಣೆಯಿದೆ. ಅಂದು ಬಂಧಿತರಾಗಿ ಕಹಿಯುಂಡ ಅನೇಕರು ಈಗಲೂ ಅಲ್ಲಿದ್ದಾರೆ. ಅವರ ಪೈಕಿ ಕೆಲವರು ಶತಾಯುಷಿಗಳು. "ರಿಟರ್ನ್ ಟು ದಿ ವ್ಯಾಲಿ" ಸಾಕ್ಷ್ಯಚಿತ್ರಕ್ಕೆ ಸಂದರ್ಶನದಲ್ಲಿ ಭಾಗವಹಿಸಿದ್ದ ಮೈಕ್ ಹೊಂಡ ಹಾಗೂ ಆತನ ಮಾತೆ ಫೂಸಕೊ ಹೊಂಡ (ಚಿತ್ರ - ೧) ಮತ್ತು ೧೧೧ ವರ್ಷದ ಸೂನಿಯೊ ಇನಾಡ ಹಿಂದಿನ ಘಟನೆಗಳನ್ನೂ ತಮ್ಮ ಕಹಿ ಅನುಭವಗಳನ್ನೂ ಸ್ಮರಿಸಿಕೊಳ್ಳುವಾಗ ಸ್ವಾಭಾವಿಕವಾಗಿಯೇ ಸ್ವಲ್ಪ ಆವೇಶಗೊಂಡರೂ ಯಾರ ಬಗ್ಗೆಯೂ ಕಹಿ ಮಾತುಗಳನ್ನಾಡಲಿಲ್ಲ.

ಎಲ್ಮೆರ್ ಮೋರಿಷ್

ಬಂಧನದಲ್ಲಿದ್ದ ಅನೇಕರಿಗೆ ಸಂಕಷ್ಟ ದಿನಗಳಲ್ಲಿ ಸಹಾಯ ಹಸ್ತ ನೀಡಿದ್ದು ರೆಡ್‌ವುಡ್ ನಗರದಲ್ಲಿ ಬ್ಯಾಂಕರ್ ಆಗಿದ್ದ ಜೆ. ಎಲ್ಮೆರ್ ಮೋರಿಷ್ ಎಂಬಾತ. ಸೌಮ್ಯ ಸ್ವಭಾವದ ಮೋರಿಷ್ ಬಹಳ ವಿಶ್ವಾಸಾರ್ಹ ಮನುಷ್ಯ. ತನಗೆ ಪರಿಚಯವಿದ್ದ ತನ್ನೊಡನೆ ವ್ಯವಹಾರವಿಟ್ಟುಕೊಂಡಿದ್ದವರನ್ನು ಸಂಪರ್ಕಿಸಿ ಅವರ ಪರವಾಗಿ ತೆರಿಗೆಗಳನ್ನು ಬಿಲ್ಲುಗಳನ್ನು ಪಾವತಿ ಮಾಡಿದ. ಕೆಲವರ ಕಾರುಗಳ ಮಾರಾಟಕ್ಕೂ ವ್ಯವಸ್ಥೆ ಮಾಡಿದ. ಬಂಧನದಿಂದ ಮುಕ್ತರಾದವರು ಹೊಸ ಉದ್ದಿಮೆಗಳನ್ನು ಪ್ರಾರಂಭಿಸಲು ನೆರವಾದ. ಕೃತಜ್ಞ ಜಪಾನೀಯರು ಮೋರಿಷ್‌ನ ಸಹಾಯ ಸ್ಮರಿಸಿ ೧೯೫೭ರಲ್ಲಿ ಅವನನ್ನು ಸನ್ಮಾನಿಸಿದರು. ಅದೇ ವರ್ಷ ಆತ ನಿಧನನಾದ.

ಆ ಕಾಲದಲ್ಲಿ ಮೋರಿಷ್ ಬರೆದಿದ್ದ ಹಾಗೂ ಅವನಿಗೆ ಬಂದಿದ್ದ ಸುಮಾರು ೨,೦೦೦ ಪತ್ರಗಳನ್ನು ಅನಾಮಧೇಯನೊಬ್ಬ ೧೯೯೦ರಲ್ಲಿ ರೆಡ್‌ವುಡ್ ನಗರದ ಸಾರ್ವಜನಿಕ ಗ್ರಂಥಾಲಯಕ್ಕೆ ದಾನ ಮಾಡಿದ. ವರ್ಷ ೨೦೦೨ರಲ್ಲಿ ಸ್ಥಳೀಯ ಪತ್ರಿಕೆಯೊಂದು ಈ ವಿಷಯ ಪ್ರಕಟಸಿತು. ಮಿಯೊ ನಕನಿಷಿ ಎಂಬಾಕೆ ಪತ್ರಿಕಾ ವರದಿ ಓದಿದಾಗ ಚಕಿತಗೊಂಡಳು. ಯುದ್ಧದ ಸಮಯದಲ್ಲಿ ಬಂಧಿತಳಾದಾಗ ಆಕೆ ಕೇವಲ ಮೂರು ವರ್ಷದ ಬಾಲಕಿ. ಹಿಡ್‌ಕಷಿಮ ಎಂಬಾತನಿಗೆ ಆಗ ೧೩ ವರ್ಷ. ಆಗ ನಡೆದ ಘಟನೆಗಳೆಲ್ಲಾ ಚೆನ್ನಾಗಿ ನೆನಪಿದೆ. ಕಳೆದ ವರ್ಷ ಸೆಪ್ಟಂಬರ್ ೨೭ರಂದು ಪೋಲೊ ಆಲ್ಟೋ ನಗರದಲ್ಲಿ ನಡೆದ ಸಮಾರಂಭ ಒಂದರಲ್ಲಿ ಕೃತಜ್ಞ ಜಪಾನೀಯರು ಮೋರಿಷಾ ಸಲ್ಲಿಸಿದ್ದ ನಿಸ್ವಾರ್ಥ ಸೇವೆಯನ್ನು ಸ್ಮರಿಸಿಕೊಂಡರು. ಸಮಾರಂಭದಲ್ಲಿ ಮೋರಿಷ್ ಬರೆದಿದ್ದ ಕೆಲವು ಪತ್ರಗಳನ್ನು ಪ್ರದರ್ಶನಕ್ಕಿಡಲಾಗಿತ್ತು. ಜೂನ್ ೧೯೪೨ರಲ್ಲಿ ಫ್ಯೂಮಿಕೊ ತಕಾಗಿ ಎಂಬಾತ ಮೋರಿಷ್‌ಗೆ ಬರೆದ ಪತ್ರದಲ್ಲಿ "ಸೆರೆಮನೆ ವಾಸ ನರಕವಾಗಿದೆ" ಎಂದಿದ್ದಾನೆ.

ಯುದ್ಧ ಸಮಯದಲ್ಲಿ ಅಮೆರಿಕನ್ ನಾಗರಿಕ ಜಪಾನೀಯರ ಬಂಧನ ಅಮೆರಿಕದ ಇತಿಹಾಸದ ಅತ್ಯಂತ ಕರಾಳ ಅಧ್ಯಾಯಗಳಲ್ಲೊಂದು. 'ರಿಟರ್ನ್ ಟು ದಿ ವ್ಯಾಲಿ' ಸಾಕ್ಷ್ಯ ಚಿತ್ರವು ಒಂದು ಚಾರಿತ್ರಿಕ ದಾಖಲೆಯಾಗುವುದಲ್ಲದೆ ಯುದ್ಧದಂಥ ರಾಷ್ಟ್ರೀಯ ಪ್ರಕ್ಷುಬ್ಧ ಸ್ಥಿತಿ ಉಂಟಾದಾಗ ನಾಗರಿಕ ಸ್ವಾತಂತ್ರ್ಯಕ್ಕೆ ಏನಾಗಬಹುದೆಂಬುದನ್ನು ಸ್ಪಷ್ಟಪಡಿಸುತ್ತದೆ.

*ಆಧಾರ : 'ಸ್ಯಾನ್ ಓಸೆ ಮರ್ಕ್ಯುರಿ ನ್ಯೂಸ್' ೨-೬-೦೩ ಮತ್ತು ೨೮.೯.೦೩ ಸಂಚಿಕೆಗಳು.*

**ಎಂ. ಕೆ. ರಾಜಗೋಪಾಲ್**
೧೫೭, 'ದ್ವಿಜಾವಂತಿ', ೪ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೭೦



ಮೈಕ್ ಹೊಂಡ ಮತ್ತು ಆತನ ಮಾತೆ ಫ್ಯೂಸಕೊ ಹೊಂಡ



# ಗೋವಿನ ಹಾಡು
## ಭಾಗ - ೨

ಧರಣಿ ಮಂಡಲ ಮಧ್ಯದೊಳಗೆ
ಭರತ ವರ್ಷದ ಕರ್ನಾಟ ದೇಶದಿ
ಗೊಲ್ಲ ಕಾಳಿಂಗನ ಗೋವ್ಗಳ
ಉತ್ತರ ಕಥೆ ನಾ ಪೇಳ್ವೆನು

ಕವಿಯ ಸೃಷ್ಟಿಗೆ ಬೆರಗುಗೊಂಡು
ನಮಿಸಿ ಅಜ್ಞಾತ ವ್ಯಾಸ ರೂಪಿಗೆ
ಅಟ್ಟ ಬೆಟ್ಟದ ಕಾಡಿನೊಡಲಲಿ
ಕೊಳ್ಳಿ ದೀಪವ ಉರಿಸುವೆ

ಅರ್ಬುತಾನೆಂತೆಂಬ ವ್ಯಾಘ್ರನು
ಮೂರು ಮೂರ್ತಿಗೆ ಕೈಯ ಮುಗಿದು
ಬಿರಿದ ಬಂಡೆಯ ಮೇರು ಗಗನಕೆ
ನೆಗೆದು ಪ್ರಾಣವ ಬಿಟ್ಟಿತು

ಸತ್ಯವೇ ನಮ್ಮ ತಾಯಿ ತಂದೆ
ಸತ್ಯವೇ ನಮ್ಮ ಮೋಹ ಮಾಯವು
ಸತ್ಯವಾಕ್ಯವೆ ಮೃತ್ಯುವಾಯಿತೇ ?
ಎನುತ ಗೋವು ತೆರಳಿತು

ಸೂತಕದೊಳು ಗೋವು ಕಂಡು
ಸಾವ ಸತ್ಯದ ಪವಾಡ ಕೇಳಿ
ಕಂದ ಚೆಂದವು ಬಂಧು ಬಳಗವು
ಎಲ್ಲ ಪಾವನವಾದರು

ಅತ್ತ ಒಡಲಿಗೇಳು ದಿವಸದಿ
ತಡೆದಾಹಾರವ ಬಳಲಿ ವ್ಯಾಘ್ರನು
ಸಿಕ್ಕಿದೊಡವೆಯ ತಾರದಿರಲು
ಗವಿಯು ವ್ಯಾಕುಲಗೊಂಡಿತು

ಹಬ್ಬಿದಾ ಮಲೆ ಮಧ್ಯದೊಳಗೆ
ಬೆಟ್ಟದ [illegible] ಕಿಬ್ಬಿಯೊಳಗೆ
ಬಾಣಂತಿಯೋರ್ವಳು ಹಾಲನುಣಿಸುತ
ದಾರಿಗಾಯುತಲಿದ್ದಳು

ಎಲುಬಿಗಂಟಿದ ಮೊಲೆಯ ಮರಿಗಳು
ಹಿಂಡುತಿರಲು ಹೀರಿ ಹೀರಿ
ಹಾಲು ಬಾರದೆ ರಕ್ತ ಒಸರುತ
ನಿಸರ್ಗ ನರಳುತಲಿದ್ದಳು

ದಿನಗಳುರುಳೆ ಹಸಿವು ಏರಿ
ತ್ರಾಣವಿಲ್ಲದೆ ದುಃಖಗೊಂಡು

ಅಳುವ ಕಂದರ ಕರೆದುಕೊಂಡು
ಅಲೆಯುತಲೆಯುತಲಿದ್ದಳು

ಸತ್ತ ಪ್ರಾಣಿಯ ಕೆಟ್ಟ ವಾಸನೆ
ನೀರನೂರಿಸಿ ಸುತ್ತ ಪರಿಮಳ
ಅದನೆ ತಿಂದು ಹಾಲನೂಡಿಸಿ
ಜೀವ ಉಳಿಸುವೆನೆಂದಳು

ಅಳುವ ಮರಿಗಳ ಸಂತವಿಸಿ
ಇಲ್ಲೆ ಇರಿ ಬಂದೆ ಬರುವೆನು
ಮಾಂಸ ಹಿಂಡಿ ರಸವ ಸುರಿಸುವೆ
ಎನುತ ತಾಯಿಯು ಹೊರಟಳು

ಗಬ್ಬಿನ್ಹಬ್ಬವು ಎಳೆದು ತರಲು
ಬಿರಿದ ಬಂಡೆಯ ಮೇಲ ಮೇಲಕೆ
ಆಸೆತನದೊಳು ಕೆಳಗೆ ನೋಡಲು
ಎದೆಯ ಬಿರಿಯುವ ನೋಟವು

ಸಿಡಿಲ ಬಡಿದು ಕಣ್ಣು ಕವಿದು
ಎದೆಯು ಕುಸಿದು ಗಂಟಲೊಣಗಿತೆ ?
ಪತಿರಾಯನ ಶವವ ಕಂಡು
ಭೂಮಿ ಆಗಸ ಬಿರಿಯಿತೆ !

ಆಹಾರ ತರುವೆ ಎಂದು ಬಂದವ
ತಾನೆ ಹಾರವಾಗಿ ಹೋದನೆ !
ಪತಿಯ ಮಾಂಸಕೆ ಆಸೆ ಪಟ್ಟೆನೆ
ಎನುತ ಗೋಳಿಡುತಿದ್ದಳು

ಬಿರಿದ ಬಂಡೆಯ ಮೇಲಿನಿಂದ
ಮುಳ್ಳು ಪೊದೆಯ ಹೊಂಡದೊಳಗೆ
ನೂಕಿ ಪ್ರಾಣವ ಕಿತ್ತ ವಿಧಿಯೆ
ಮಕ್ಕಳ ತಬ್ಬಲಿಗೈದಿತು

ಎಂದು ರೋದಿಸಿ ತಣಿಯೆ ನೋಡಿ
ಕರುಳ ಕುಡಿಗಳ ಕನವರಿಸಿ ಕೂಗಿ
ತುಸು ನೀರು ಕುಡಿದು ಬದುಕಲೆಂದು
ಭಾರ ಹೊತ್ತು ನಡೆದಳು

ಸನಿಹದಲ್ಲಿ ತೊರೆಯು ತೋರೆ
ನೀರ ಕುಡಿಯುತಲಿರಲು ತಾನು
ಮರೆಯಲಿದ್ದ ಬೇಟೆಗಾರನು
ಹುಲಿಗೆ ಹುರುಪುಗೊಂಡನು

ಅವನ ಗುರಿಯೋ ವಿಷ್ಣು ಚಕ್ರವು
ಎದೆಯ ಹೊಕ್ಕು ಛಿದ್ರ ಮಾಡಲು
ಮಾರವ್ವನೊಡಲಿಗೆ ಮರಿಗಳಿಟ್ಟು
ಇತ್ತ ಕೊನೆಯುಸಿರೆಳೆದಳು

ಹಸಿವಿನಲ್ಲಿ ಕಸುವು ಇಲ್ಲದೆ
ಹೆತ್ತಮ್ಮನಾಸರೆ ಒಡನಾಟವಿಲ್ಲದೆ
ಸೂರ್ಯನೊರಳಲು ಬೆಚ್ಚಿ ಬೆದರಿ
ಅತ್ತು ಕರೆದವೊ ಮರಿಗಳು

ಗೋಧೂಳಿ ಹಾದಿಯ ಗೋವ್ಗಳೆಲ್ಲವು
ಕ್ಷಣದಿ ಕಂಪಿಸಿ ತೆರಳುತಿರಲು
ಬಯಲ ಮರಿಗಳ ಸ್ಥಿತಿಯ ಕಂಡು
ಮನದಿ ಹರುಷಗೊಂಡವು

ದಾರಿ ತಪ್ಪಿತೊ ? ಅನಾಥವಾದವೊ ?
ಅಂತೂ ಹುಲಿಯ ಮರಿಗಳು
ಸರ್ಪದುದರದಿ ಸರ್ಪ ತಾನೆ
ವಿಷವ ಬಿಟ್ಟು ಕೊಡುವುದೆ ?

ಅಯ್ಯೋ ಎಂದರೆ ನಮಗೇ ದುರ್ಗತಿ
ಬಲಿಯ ಬಿಟ್ಟರೆ ಅದಕ್ಕೆ ನಾವ್ ಬಲಿ !
ಹಾಲುಗಲ್ಲದ ಹೊಟ್ಟೆಯಾ ಸುಳಿ !
ಇದುವೆ ಶಾಸ್ತ್ರದ ಬೋಧೆಯೆ ?

ಸುತ್ತುವರಿದ ಗೋವಿನ್ಹಿಂಡಲಿ
ಹೋರಿಯೊಂದು ಹರಿಹಾಯ್ದು ಮುಂದೆ
ನುಗ್ಗಿ ಕೊಡವಿತೆ ಕೊಂಬಿನಲ್ಲಿ
ಚುಚ್ಚಿ ಚುಚ್ಚಿ ಮರಿಗಳ

ಕೊಂಬಲೊತ್ತಿ ಎತ್ತಿ ಬಿಸುಟಲು
ನಾಲ್ಕು ದಿಕ್ಕಿಗೆ ನಾಲ್ಕು ಮರಿಗಳು
ರಕ್ತ ಧಾರೆಗೆ ವಿಲವಿಲನೆ ಹಾರಿತೆ
ಮುದ್ದು ಮರಿಗಳ ಪ್ರಾಣವು

ಜನ್ಮದಾ ಹಗೆ ಕೂಸ ಹರಿದು
ಶವವ ತುಳಿದೇ ಮುಂದೆ ಸಾಗುತ
ಹರಿಯ ನದಿಯಲಿ ಹರಿಯ ನೆನೆದು
ಜಳಕ ಮಾಡಲು ಪೋದವು

ಮ. ಸಕಲೇಶ್
'ಚಂದ್ರ ನಿವಾಸ', ಜೆ. ಕೆ. ಸ್ಕೂಲ್ ಹಿಂಭಾಗ, ಅಶೋಕನಗರ
ಶಿವಮೊಗ್ಗ - ೫೭೭ ೨೦೧





**ವಾಙ್ಮಯ ಆರಾಧಕ ಕಡೆಂಗೋಡ್ಲು** (ಅಧ್ಯಯನ)

ಡಾ|| ಸುನೀತಿ ಉದ್ಯಾವರ

**ಪುಟ :** ೪೦೨ **ಬೆಲೆ :** ರೂ. ೨೦೦

**ಕನ್ನಡ ವಿಭಾಗ,** ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಸಾಂತಾಕ್ರೂಜ್ ಪೂರ್ವ, ಮುಂಬಯಿ - ೪೦೦ ೦೯೮

ಮುಂಬಯಿ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪಡೆದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆ ಡಾ|| ಸುನೀತಿ ಉದ್ಯಾವರ ಅವರದ್ದು. ಕಡೆಂಗೋಡ್ಲು ಶಂಕರ ಭಟ್ಟರ ಜೀವನ-ಕೃತಿಗಳನ್ನು ತಮ್ಮ ಸಂಶೋಧನಾ ಪ್ರಬಂಧಕ್ಕೆ ಆಯ್ದುಕೊಂಡು ವಿಶೇಷ ಪರಿಶ್ರಮದಿಂದ ಅದನ್ನು ಪೂರ್ಣಗೊಳಿಸಿದ್ದಾರೆ. ಶಂಕರ ಭಟ್ಟರ ಜನ್ಮ ಶತಮಾನೋತ್ಸವ ವರ್ಷದಲ್ಲಿ ಪುಸ್ತಕ ರೂಪದಲ್ಲಿ ಹೊರಬಂದಿರುವ ಈ ಕೃತಿ ಸಾಹಿತ್ಯದ ವಿದ್ಯಾರ್ಥಿಗಳಿಗೆ ಮತ್ತು ಕಡೆಂಗೋಡ್ಲು ಅವರ ಬಗ್ಗೆ ಹೆಚ್ಚಿಗೆ ತಿಳಿಯ ಬಯಸುವವರಿಗೆ ಕೈದೀವಿಗೆಯಂತಿದೆ. ವ್ಯಕ್ತಿ ಚಿತ್ರ-ಸಾಹಿತ್ಯ ಚಿತ್ರಣ ಎರಡೂ ಇಲ್ಲಿವೆ.





**ದೇಸಿ ಸಂಸ್ಕೃತಿ** (ಲೇಖನ ಸಂಕಲನ)

ಡಾ|| ಡಿ. ಬಿ. ನಾಯಕ

**ಪುಟ :** ೨೧೨ **ಬೆಲೆ :** ರೂ. ೧೫೦

**ಬಂಜಾರ ಪ್ರಕಾಶನ,** ನಂ. ೪೪, ಶಂಕರ ಕೃಪ, ಸದಾಶಿವನಗರ, ಗುಲ್ಬರ್ಗಾ - ೫೮೫ ೧೦೨

ನಮ್ಮ ನೆಲದ ಸಂಸ್ಕೃತಿಯನ್ನು ಪರಿಚಯಿಸುವ, ಜಾನಪದ ಬುಡಕಟ್ಟು ಆಚರಣೆಗಳನ್ನು ತಿಳಿಸುವ ಸಂಶೋಧನಾತ್ಮಕ ಲೇಖನಗಳ ಸಂಗ್ರಹ. ಜನಪದರ ನಂಬಿಕೆ, ಹಬ್ಬ ಉತ್ಸವ, ಆಚಾರ ವಿಚಾರಗಳನ್ನು ಸಂಗ್ರಹಿಸಿ ನಿರೂಪಿಸಿದ್ದಾರೆ. ಹೆಚ್ಚಾಗಿ ನಿರ್ಲಕ್ಷಿತ ಸಮುದಾಯದ ಉಪೇಕ್ಷೆಗೊಳಗಾದ ದೇಸಿ ಸಂಸ್ಕೃತಿಯೊಂದರ ಪರಿಚಯ ಇಲ್ಲಿ ಧಾರಾಳವಾಗಿ ಸಿಗುತ್ತದೆ. ಸಾಕಷ್ಟು ಕ್ಷೇತ್ರ ಕಾರ್ಯದಿಂದ ಸಂಪಾದಿಸಿದ ಮಾಹಿತಿಯಾದ್ದರಿಂದ ಬಗೆ ಬಗೆಯ ಜನಾಂಗಗಳ ನೈಜ ಬದುಕಿನ ಬಗ್ಗೆ ಬೆಳಕು ಬೀರಿದೆ.



**ಈ ಮಣ್ಣು ಅಪ್ಪಿಕೊಳ್ಳುವ ಮುನ್ನ** (ಕವನಗಳು)

ಗವಿಸಿದ್ಧ ಎನ್. ಬಳ್ಳಾರಿ

**ಪುಟ :** ೧೮೮ **ಬೆಲೆ :** ರೂ. ೭೫

**ಲೋಹಿಯಾ ಪ್ರಕಾಶನ,** ''ಕ್ಷಿತಿಜ'', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೧

ಇದೊಂದು ಬಂಡಾಯ ಕವಿತೆಗಳ ಸಂಕಲನ. ಜಗತ್ತಿಗೇ ಮಾರಕವಾಗಿ ನಿಂತಿರುವ ಮನುಷ್ಯನ ದುಷ್ಟತನಗಳ ವಿರುದ್ಧ ಧ್ವನಿ ಯೆಬ್ಬಿಸಿರುವ, ನೋವಿನ ಅಲೆಗಳಂತಿರುವ ನಿಜ ವಿಚಾರಗಳು. ನಿರ್ಗತಿಕರ ನೂರೊಂದು ಬವಣೆಗಳನ್ನು ಜಾಗತಿಕ ಮಟ್ಟದಲ್ಲಿ ಗುರುತಿಸಿ ಬಣ್ಣಿಸುವ ಇವು ಬಾಳಿನಲ್ಲಿ ನೋವುಗಳನ್ನೇ ಉಡುಗೊರೆಯಾಗಿ ಪಡೆದ ಹತಾಶ ವ್ಯಕ್ತಿತ್ವದ ಮನದಾಳದ ಸೂಕ್ಷ್ಮ ಅನಿಸಿಕೆಗಳು. ಹಾಗೆಂದು ತೀವ್ರ ನಿರಾಶೆಯೇನೂ ಇಲ್ಲ; ಕೈ ಚೆಲ್ಲಿ ಕೂರದೆ ಪ್ರತಿಯೊಬ್ಬನೂ ಅನ್ಯಾಯದ ವಿರುದ್ಧ ಬಂಡೇಳುವ ಅಗತ್ಯವನ್ನು ನೆನಪಿಸಿ ಭ್ರಷ್ಟ ವಿಚಾರಗಳನ್ನು ಖಂಡಿಸಲಾಗಿದೆ.



**ಪೆರುವಿನ ಪವಿತ್ರ ಕಣಿವೆಯಲ್ಲಿ** (ಪ್ರವಾಸ ಕಥನ)

ನೇಮಿಚಂದ್ರ

**ಪುಟ :** ೨೧೬ **ಬೆಲೆ :** ರೂ. ೧೧೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ತಮ್ಮ ಯೂರೋಪ್ ಪ್ರವಾಸದಲ್ಲಿ ಮೇರಿ ಕ್ಯೂರಿಯ ಪ್ರಯೋಗ ಶಾಲೆ, ಡಕಾವ್‌ನ ನಾಝೀ ಕ್ಯಾಂಪ್, ಆನ್ ಫ್ರಾಂಕ್ ಅವಿತಿದ್ದ ಗುಪ್ತ ಸ್ಥಳ ಇವನ್ನೆಲ್ಲ ನೋಡಿಬಂದ ನೇಮಿಚಂದ್ರರ ಈಸಲದ ಆಯ್ಕೆ ಪೆರು ಮತ್ತು ಬ್ರೆಜಿಲ್. ಆಂಡೀಸ್ ಪರ್ವತಗಳ ಮೇಲೆ ಬಸ್ಸಿನಲ್ಲಿ ಸಂಚರಿಸಿ, ಅತಿ ಪುರಾತನ ಇನ್ಕಾ ಸಾಮ್ರಾಜ್ಯದ ಪಳೆಯುಳಿಕೆ ಕಂಡು, ವಿಮಾನವೇರಿ ರಹಸ್ಯ ನಾಸ್ಕಾ ಗೆರೆಗಳನ್ನು ನೋಡಿ, ಅಮೇಜಾನ್ ನದಿಯಲ್ಲಿ ದೋಣಿಯಲ್ಲಿ ತೇಲಿ ಪಯಣಿಸಿದ ಅದ್ಭುತ ರಮ್ಯ ರೋಮಾಂಚಕ ಪ್ರವಾಸ ಕಥನ. ಅಬ್ಬಾ ! ಇವರು ಭಾರತದಿಂದ ಕೊಂಡೊಯ್ದದ್ದು ಏನನ್ನು ? ಧೈರ್ಯ-ಸಾಹಸಗಳನ್ನು ಮಾತ್ರ !



**ಎಂಬತ್ತರ ಕೊಯ್ಲಿನ ಕಾಳುಗಳು** (ಬದುಕು)

ಅಡ್ಡೂರು ಕೃಷ್ಣ ರಾವ್

**ಪುಟ :** ೧೧೨ **ಬೆಲೆ :** ರೂ. ೪೦

**ಮಿತ್ರ ಮಾಧ್ಯಮ,** ೨೧, ಸುನಿತ ನಿಲಯ, ಎಸ್.ಬಿ.ಐ. ಕಾಲನಿ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

ಮಾರ್ಕ್ಸ್‌ವಾದ, ಕಮ್ಯುನಿಸ್ಟ್ ತತ್ವಗಳಿಂದ ಆಕರ್ಷಿತರಾಗಿ ತಮ್ಮ ಎಳವೆಯಲ್ಲೇ ಸಕ್ರಿಯ ಹೋರಾಟ ಚಳವಳಿಗಳಲ್ಲಿ ಭಾಗವಹಿಸಿದ ಕಮ್ಯುನಿಸ್ಟ್ [illegible]ರು ಅಡ್ಡೂರು ಶಿವಶಂಕರ ರಾಯರು. ಆರಂಭದ ದಿನಗಳಲ್ಲಿ ಭೂಗತ ರಾಗಿದ್ದುಕೊಂಡೇ ಕಾರ್ಯ ಚಟುವಟಿಕೆಗಳನ್ನು ನಡೆಸಿದ ಅವರು ಸಂಗಾತಿಗಳೊಂದಿಗೆ ಪಕ್ಷವನ್ನು ಕಟ್ಟಿ ಬೆಳೆಸಲು ಶ್ರಮಿಸಿದ್ದಾರೆ. ಇಂದು ಎಂಬತ್ತೆರಡರ ಇಳಿ ವಯಸ್ಸಿನಲ್ಲಿ ಅವರು ಹೇಳಿಕೊಂಡಿರುವ ತಮ್ಮ ಬದುಕಿನ ಅನುಭವಗಳು ನಮಗೆಲ್ಲ ಸ್ಫೂರ್ತಿದಾಯಕ. ಪಕ್ಷ ಇಬ್ಭಾಗವಾದ ನಂತರ ರಾಜಕೀಯಕ್ಕೆ ವಿದಾಯ ಹೇಳಿ ಕೃಷಿಕರಾಗಿದ್ದಾರೆ.



**ಧರ್ಮ ಮತ್ತು ದಗಲ್ ಬಾಜಿಗಳು** (ವೈಚಾರಿಕ ಲೇಖನಗಳು)

ವಿಶ್ವಾರಾಧ್ಯ ಸತ್ಯಂಪೇಟೆ

**ಪುಟ :** ೧೦೫ **ಬೆಲೆ :** ರೂ. ೭೫

**ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ,** ಶಹಾಪುರ - ೫೮೫ ೨೨೩ ಕಲಬುರ್ಗಿ ಜಿಲ್ಲೆ

ಪ್ರಖರ ವೈಚಾರಿಕ ಬರಹಗಳ ಸಂಕಲನ. ನಮ್ಮ ದೇಶದಲ್ಲಿ ದೇವರು-ಧರ್ಮ ಇವುಗಳ ಹೆಸರಿನಲ್ಲಿ ಆಗುತ್ತಿರುವ ಅನಾಚಾರ ಗಳನ್ನು ಕೇಂದ್ರವಾಗಿರಿಸಿ ರೂಪಿಸಿದ ಲೇಖನಗಳು. ಜನಸಾಮಾನ್ಯರನ್ನು ಇನ್ನೂ ಅಜ್ಞಾನ-ಅಂಧಶ್ರದ್ಧೆಗಳಲ್ಲಿ ಮುಳುಗಿಸಿ ಮೆರೆದಾಡುವ ಎಲ್ಲ ಧಾರ್ಮಿಕ ಪುರೋಹಿತಶಾಹಿ ವ್ಯವಸ್ಥೆ ಯನ್ನು ಟೀಕಿಸುತ್ತ ಅವರ ದಗಲಬಾಜಿತನವನ್ನು ಹೊರಗೆಳೆದು ತೋರಿಸಲಾಗಿದೆ. ವಿಶ್ವದ ಎಲ್ಲೆಡೆ ಜಾತಿವಾದ-ವರ್ಣವ್ಯವಸ್ಥೆ ಅಳಿದು ಬಸವಣ್ಣ ಪ್ರತಿಪಾದಿಸಿದ ಮಾನವತಾವಾದ ನೆಲೆಗೊಳ್ಳಬೇಕೆಂಬ ಆಶಯ ಇಲ್ಲಿ ಬಲವಾಗಿದೆ.



**ಪರಿಶ್ರಮದ ಹಾದಿಯಲ್ಲಿ ಮುನ್ನಡೆದ ಹೆಜ್ಜೆಗಳು**

(ಕಾಮ್ರೆಡ್ ಸಿಂಪ್ಸನ್ ಸೋನ್ಸ್ ಜೀವನ ಕಥನ)

ಡಾ|| ಜಿ. ಶಿರಿ

**ಪುಟ :** ೧೫೨ **ಬೆಲೆ :** ರೂ. ೫೦

**ಜನಜಾಗೃತಿ ವೇದಿಕೆ,** ಮಂಗಳೂರು -೫೭೫ ೦೦೨

ಕಳೆದ ಶತಮಾನದ ಮಧ್ಯಭಾಗದಲ್ಲಿ ಬೂರ್ಷ್ವಾ ಬಂಡವಾಳಶಾಹಿ ಸಂಸ್ಕೃತಿಗೆದುರಾಗಿ ಸಮಾಜವಾದದ ಕನಸನ್ನು ಹೊತ್ತು ಬಡ ಕಾರ್ಮಿಕ ವರ್ಗದ ಹಿತರಕ್ಷಣೆಗಾಗಿ ಹೋರಾಟಗಳನ್ನು ನಡೆಸಿ ಮುನ್ನಡೆದ ಹಾದಿ ಸುಗಮವೇನೂ ಆಗಿರಲಿಲ್ಲ. ಕಮ್ಯುನಿಸಂ ತತ್ವಕ್ಕಾಗಿ ಜೀವನವನ್ನೇ ಮುಡುಪಾಗಿಟ್ಟು ಸಾಮಾನ್ಯ ಜನರಿಗಾಗಿ ಶ್ರಮಿಸಿದ ಅಸಾಮಾನ್ಯ ಕಮ್ಯುನಿಸ್ಟರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅಂಥ ಚಳವಳಿ ಹೋರಾಟಗಳಲ್ಲಿ ತಮ್ಮನ್ನು ತೊಡಗಿಸಿ ಹಗಲಿರುಳೂ ಶ್ರಮಿಸಿದ ಕಾ|| ಸಿಂಪ್ಸನ್ ಸೋನ್ಸ್ ಅವರ ಹೋರಾಟದ ಜೀವನ ಕಥನ.



**ನೋಟ ನಿಲುವು** (ಪ್ರವಾಸ ಕಥನ)

ಕೆ. ಮರುಳಸಿದ್ದಪ್ಪ

**ಪುಟ :** ೨೧೬ **ಬೆಲೆ :** ರೂ. ೯೫

**ಅಂಕಿತ ಪುಸ್ತಕ,** ಗಾಂಧಿಬಜಾರ್ ಮುಖ್ಯರಸ್ತೆ, ಬೆಂಗಳೂರು - ೫೬೦ ೦೦೪

ಯೂರೋಪ್ ಖಂಡದ ಹೆಚ್ಚಿನ ಎಲ್ಲ ರಾಷ್ಟ್ರಗಳನ್ನೂ ಸುಮಾರು ಮೂರು ತಿಂಗಳ ಅವಧಿಯಲ್ಲಿ ಸುತ್ತಾಡಿ ಅಲ್ಲಿನ ತಮ್ಮ ಅನುಭವ ಗಳನ್ನು ಅಚ್ಚುಕಟ್ಟಾಗಿ ನಿರೂಪಿಸಿದವರು ರಂಗಪ್ರೇಮಿ ಡಾ|| ಮರುಳಸಿದ್ದಪ್ಪನವರು. ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ಮಾಹಿತಿ ಮಾತ್ರವಲ್ಲದೆ ತಮ್ಮ ವಾಸ್ತವ್ಯದ ಅವಧಿಯಲ್ಲಿ ಸಾಂಸ್ಕೃತಿಕ-ರಾಜಕೀಯ-ಸಾಮಾಜಿಕ ವಿಷಯದ ಬಗ್ಗೆಯೂ ವಿವರಗಳನ್ನು ಕಲೆಹಾಕಿದ್ದಾರೆ. ವಿದೇಶಿ ಸಂಸ್ಕೃತಿಗಳ ಬಗ್ಗೆ ಬರೆಯುವಾಗ ಅವರದೇ ನಿಲುವುಗಳನ್ನು ದೃಢವಾಗಿ ಬಿಂಬಿಸಿದ್ದಾರೆ. ಇತ್ತೀಚಿನ ರಾಜಕೀಯ ನೋಟವೂ ಇಲ್ಲಿದೆ.

– ಇಂದಿರಾ ಕುಮಾರಿ

# ಬಿ. ವಿ. ವೀರಭದ್ರಪ್ಪನವರ ಭಗವದ್ಗೀತೆ ಒಂದು ವೈಚಾರಿಕ ಒಳನೋಟ

**ಅರವಿಂದ ಚೊಕ್ಕಾಡಿ**

ವ್ಯಕ್ತಿಗೆ ಒಂದು ಮುಖವಾದರೆ ವ್ಯಕ್ತಿತ್ವಕ್ಕೆ ಅಸಂಖ್ಯಾತ ಮುಖಗಳು. ಅಂಥಲ್ಲಿ ಭಾರತೀಯ ಸಾಹಿತ್ಯದ ಒಂದು ಪ್ರಮುಖ ಕೃತಿಯಾದ 'ಭಗವದ್ಗೀತೆ'ಯಲ್ಲೂ ಇಂಥದೇ ಗುಣ ಇದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ ಪ್ರೊ|| ಬಿ. ವಿ. ವೀರಭದ್ರಪ್ಪನವರು. ಅವರ 'ಭಗವದ್ಗೀತೆ: ಒಂದು ವೈಚಾರಿಕ ಒಳನೋಟ' ಕೃತಿಯಲ್ಲಿ (ನವಕರ್ನಾಟಕ ಪ್ರಕಾಶನ – ಎರಡನೇ ಮುದ್ರಣ ೨೦೦೦) 'ಗೀತೆ'ಯನ್ನು ಅವರು ಅಸಾಂಪ್ರದಾಯಿಕ ನೆಲೆಯಲ್ಲಿ ನಿಂತು ನೋಡಿದ್ದಾರೆ. ದುರ್ಬಲರ, ಶೋಷಿತರ, ಕೆಳವರ್ಗಗಳ, ಮಹಿಳೆಯರ ಸ್ಥಾನದಲ್ಲಿ ನಿಂತು ನೋಡಿದಾಗ ಏನೆಲ್ಲ ದಕ್ಕುತ್ತದೋ ಅದನ್ನೆಲ್ಲ ವಸ್ತುನಿಷ್ಠವಾಗಿ ಸೆರೆಹಿಡಿದಿದ್ದಾರೆ. ಇಲ್ಲಿ ವೀರಭದ್ರಪ್ಪನವರ ಪ್ರಖರ ವೈಚಾರಿಕ ದೃಷ್ಟಿ, ತರ್ಕ ಪ್ರಧಾನ, ಮಾತಿನ ಓಘ, ಪ್ರಮಾಣೀಕರಣ ಸೂತ್ರದ ಸೂಕ್ಷ್ಮ ದೃಷ್ಟಿ ಭಗವದ್ಗೀತೆಯ ಒಳಹೊರಗುಗಳ ಅಂತರಂಗವನ್ನು ಭೇದಿಸಿ ಮುನ್ನಡೆದಿದೆ. ಆದುದರಿಂದಲೇ ಈ ಕೃತಿ ತೌಲನಿಕ ಅಧ್ಯಯನಕ್ಕೆ ಮಹತ್ವದ ಕೊಡುಗೆ ಕೊಟ್ಟಿದೆ.

ಐತಿಹಾಸಿಕ ದೃಷ್ಟಿಯಿಂದ ಸಾಕಷ್ಟು ಚರ್ಚೆ ನಡೆಸಿ ಗೀತೆಯ ಕಾಲವನ್ನು ಸುಮಾರು ಕ್ರಿ.ಪೂ. ೫೦೦ರಿಂದ ೩೦೦ ಎಂಬ ಅಭಿಪ್ರಾಯವನ್ನು ಒಪ್ಪಿಕೊಳ್ಳುವ ವೀರಭದ್ರಪ್ಪನವರು ಗೀತಾಚಾರ್ಯನ ಉದ್ದೇಶವನ್ನು ಕಂಡರಿಸುವಲ್ಲಿ ಸ್ವಲ್ಪ ತೊಂದರೆಗೊಳಗಾಗಿದ್ದಾರೆ. ಅಲ್ಲಿ ಚಾರಿತ್ರಿಕ ಸಂದರ್ಭ ಮತ್ತು ಪೌರಾಣಿಕ ಸಂದರ್ಭಗಳೆರಡೂ ವಿಶ್ಲೇಷಣೆ ನಡೆಸುತ್ತಿರುವಂತೆ ಭಾಸವಾಗುತ್ತದೆ. ಬಹುಶಃ ಗೀತಾಚಾರ್ಯನ ಉದ್ದೇಶವನ್ನು ಸರಳವಾಗಿ ಓದುಗನ ಮುಂದಿಡುವುದಕ್ಕಾಗಿ ವೀರಭದ್ರಪ್ಪನವರು ಪೌರಾಣಿಕ ಸಂದರ್ಭದಲ್ಲಿ ವಿಶ್ಲೇಷಿಸಿದ್ದಾರೆ. ಆದರೆ ಅವರ ಮೂಲ ಚಾರಿತ್ರಿಕ ವೈಚಾರಿಕ ದೃಷ್ಟಿಯಿಂದ ಮುಕ್ತರಾಗಿ ಪೌರಾಣಿಕ ವಿಮರ್ಶೆಗೊಳಪಡಿಸುವಲ್ಲಿ ಅವರಿಗೆ ಸ್ವಲ್ಪ ತೊಂದರೆಯಾಗಿದೆ. ಹಾಗಾಗಿ ಕೆಲವೆಡೆ ವಿಮರ್ಶೆ ಧ್ವನಿಪೂರ್ಣವಾಗಿಬಿಟ್ಟು ವೈಚಾರಿಕ ಕೃತಿ ಸಾಹಿತ್ಯಕ ಸಂದರ್ಭದೆಡೆಗೆ ವಾಲುತ್ತದೆ. ಇದು ಸ್ಪಷ್ಟವಾಗಬೇಕಾದರೆ ಗೀತಾಚಾರ್ಯನ ವಾದ ಮಂಡನೆಯ ವೈರುಧ್ಯಗಳನ್ನು ಅವರು ಕಂಡರಿಸಿರುವ ರೀತಿಯನ್ನು ಗಮನಿಸಬೇಕು.




ಗೀತೆಯ ಮೊದಲ ಹಂತದಲ್ಲಿ ದಟ್ಟವಾಗಿ ಮೂಡಿಬಂದಿರುವ ಸಾಂಖ್ಯ ಚಿಂತನೆ, ಜೈನ - ಬೌದ್ಧ - ಚಾರ್ವಾಕ ಸಿದ್ಧಾಂತಗಳ ಪ್ರಭಾವ, ಎರಡನೇ ಹಂತದಲ್ಲಿ ವೇದಾಂತದೆಡೆಗೆ ಸಾಗುವ ಉದಾಹರಣೆಗಳು, ಮೂರನೆ ಹಂತದಲ್ಲಿ ಸಂಪೂರ್ಣ ಶರಣಾಗತಿಯ ವೇದಾಂತಗಳ ಉಲ್ಲೇಖವನ್ನು ವೈರುಧ್ಯಮಯವೆಂದು ಅರ್ಥೈಸುತ್ತಾರೆ ವೀರಭದ್ರಪ್ಪ ನವರು. ಪೌರಾಣಿಕ ಸಂದರ್ಭದಲ್ಲಿರಿಸಿಕೊಂಡು, ಗೀತೆ ಒಬ್ಬ ವ್ಯಕ್ತಿಯಿಂದ ಹೇಳಲ್ಪಟ್ಟಿತು ಎನ್ನುವುದನ್ನು ಒಪ್ಪಿಕೊಂಡರೆ ವೀರಭದ್ರಪ್ಪನವರ ಈ ಅಭಿಪ್ರಾಯ ಸರಿಯಾದುದೇ. ಆದರೆ ಸ್ವತಃ ವೀರಭದ್ರಪ್ಪನವರೇ ಬಹುಮಟ್ಟಿಗೆ ಸಮ್ಮತಿಸಿರುವಂತೆ ಗೀತೆ, ಬೇರೆ ಬೇರೆ ಬರಹಗಾರರಿಂದ ಬೇರೆ ಬೇರೆ ಕಾಲದಲ್ಲಿ ರಚನೆಯಾಯಿತು ಎಂದು ಒಪ್ಪಿಕೊಂಡು ಚಾರಿತ್ರಿಕ ಸಂದರ್ಭದಲ್ಲಿರಿಸಿ ನೋಡಿದಾಗ ಇವೆಲ್ಲ ವೈರುಧ್ಯಗಳಿಗೆ ಕಾರಣ ಸ್ಪಷ್ಟವಾಗುತ್ತದೆ. ಪ್ರಾಯಶಃ ಗೀತೆಯ ಮೊದಲ ಹಂತ ರಚನೆಯಾದುದು ಸಾಂಖ್ಯ, ಬೌದ್ಧ, ಚಾರ್ವಾಕ ದರ್ಶನಗಳು ಪ್ರಭಾವಶಾಲಿಯಾಗಿದ್ದಾಗ. ಸಮಾಜವನ್ನು ವೇದಾಂತದೆಡೆಗೆ ತಿರುಗಿಸುವ ಮೊದಲ ಯತ್ನ ಆದಾಗಿತ್ತು. ಎರಡನೆಯ ಹಂತದ ರಚನೆಯ ವೇಳೆಗೆ ಈ ದರ್ಶನಗಳ ಪ್ರಭಾವ ಕಡಿಮೆಯಾಗಿರಬೇಕು. ಮೂರನೆ ಹಂತಕ್ಕಾಗುವಾಗ ಅವು ಅವನತಿಯ ಹಾದಿ ಹಿಡಿದು ಸಂಪೂರ್ಣ ಶರಣಾಗತಿಯ ವೇದಾಂತಕ್ಕೆ ಮಹತ್ವವಿದ್ದಿರಬೇಕು. ಆದುದರಿಂದ ಆಯಾ ಕಾಲಮಾನಕ್ಕನುಗುಣವಾಗಿ ಸಹಜವಾಗಿಯೇ ಗೀತೆಯಲ್ಲಿ ವೈರುಧ್ಯಗಳು ಕಂಡುಬಂದಿವೆ. ಆದರೆ ಗೀತೆಯ ಮಧ್ಯಮ ಹಂತ ಮತ್ತು ಕೊನೆಯ ಹಂತದಲ್ಲೂ ಚಾರ್ವಾಕ, ಸಾಂಖ್ಯ ದರ್ಶನಗಳ ಪ್ರಭಾವ ದುರ್ಬಲವಾಗಿ ಮೂಡಿಬಂದಿರುವುದನ್ನು ಕಾಣಬಹುದು. ಅದಕ್ಕೂ ಕೂಡ ಕಾರಣವಿದೆ. ಒಬ್ಬ ಲೇಖಕನ ಕೃತಿಯನ್ನು ಮತ್ತೊಬ್ಬ ಮುಂದುವರಿಸುವಾಗ ಹಿಂದಿನ ಲೇಖಕನ ಅಭಿಪ್ರಾಯವನ್ನು ಅಲ್ಲಗಳೆಯಲು ಬರುವುದಿಲ್ಲ. ತನ್ನ ನಿಲುಮೆಗೆ ಪೂರಕವಾಗಿ ಹೊಂದಿಸಿಕೊಳ್ಳಬೇಕಾಗುತ್ತದೆ. ಅಂತಹ ಹೊಂದಾಣಿಕೆ ಸಾಧ್ಯವಾಗಿರುವುದರಿಂದಲೇ ಹಲವಾರು ವೈರುಧ್ಯಗಳಿದ್ದರೂ ಗೀತೆ ಒಂದು ಕೃತಿಯಾಗಿ ಮೂಡಿಬಂದಿದೆ.

ಈ ಒಂದು ವಿಚಾರವನ್ನು ಹೊರತುಪಡಿಸಿದರೆ ವೀರಭದ್ರಪ್ಪನವರು ಗೀತೆಯ ಇನ್ನೊಂದು ಮುಖವನ್ನು ಕಂಡರಿಸುವಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗುತ್ತಾರೆ. (ಈ ವಿಚಾರವೂ ಕೂಡ ಧ್ವನಿಪೂರ್ಣವಾಗಿ ವ್ಯಕ್ತವಾಗಿರುವುದು ಬೇರೆ ಮಾತು). ಶೋಷಿತ ವರ್ಗದ ಸ್ಥಾನದಲ್ಲಿ ನಿಂತು ನೋಡುವ ವೀರಭದ್ರಪ್ಪನವರು ಗೀತೆಯನ್ನು ಆಕ್ಷೇಪಿಸುತ್ತಾರೆ. ಆದರೆ ಇದು ಗೀತೆಯ ಕುರಿತು ಇರುವ ಆಕ್ಷೇಪವಾಗಿರದೆ ಗೀತೆ ಎತ್ತಿಹಿಡಿಯುವ ಶೋಷಕ ಮೌಲ್ಯಗಳು ಸಮಕಾಲೀನ ಬದುಕನ್ನು ದಾರುಣಗೊಳಿಸುತ್ತಿರುವುದಕ್ಕೆ ಇರುವ ಆಕ್ಷೇಪ ಎಂಬುದನ್ನು ವಾಚಕರು ಅರ್ಥಮಾಡಿಕೊಳ್ಳಬೇಕು. ಅಂದರೆ 'ಗೀತೆ' ಒಂದು ಮಾಧ್ಯಮವಷ್ಟೇ. ನಿಜವಾದ ಆಕ್ಷೇಪವಿರುವುದು 'ಗೀತೆ'ಯ ಹೆಸರಿನಲ್ಲಿ ಶೋಷಣೆ ನಡೆಸುತ್ತಿರುವ ಶೋಷಕರ ಬಗ್ಗೆ. ಬದಲಾಗುತ್ತಿರುವ ಕಾಲಮಾನದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ವೀರಭದ್ರಪ್ಪನವರ ಈ ಆಕ್ಷೇಪಕ್ಕೆ ಬಹಳ ಮಹತ್ವವಿದೆ.

ಗೀತೆ ರಚನೆಯಾಗಿರುವುದು ಬೌದ್ಧ, ಜೈನ, ಚಾರ್ವಾಕ ದರ್ಶನಗಳು ವೈಚಾರಿಕ ಕ್ರಾಂತಿಯನ್ನು ಹುಟ್ಟುಹಾಕಿದ ಕಾಲಮಾನದಲ್ಲಿ. ಅದರ ಉದ್ದೇಶ ಪುರೋಹಿತಶಾಹಿ ವ್ಯವಸ್ಥೆಯ ಪುನರುತ್ಥಾನ. ಅದು 'ಗುಪ್ತ' ಚಕ್ರಾಧಿಪತ್ಯದ ಕಾಲದಲ್ಲಿ ಸಂಪೂರ್ಣ ಯಶಸ್ವಿಯಾಯಿತು. ಅಂದರೆ ಗುಪ್ತ ಚಕ್ರಾಧಿಪತ್ಯದ ಸ್ಥಾಪನೆಗೆ ರಾಜಕೀಯ ಕಾರಣಗಳಲ್ಲದೆ ಬೌದ್ಧಿಕ ಕಾರಣ ಮತ್ತು ಬೌದ್ಧಿಕ ಸಮರ್ಥನೆಯೂ ಇದೆ. ಅಂಥಲ್ಲಿ ಕೃಷ್ಣಾರ್ಜುನರು ಒಟ್ಟು ವ್ಯವಸ್ಥೆಯ ಸಾಂಕೇತಿಕ ಪ್ರತಿನಿಧಿಗಳಾಗಿ ನಿಲ್ಲುತ್ತಾರೆ. ಕೃಷ್ಣ, ಮೂಲತಃ ಕ್ಷತ್ರಿಯ ಮತ್ತು ಶೂದ್ರ ಹಿನ್ನೆಲೆಗಳನ್ನು ಒಳಗೊಂಡಿರುವ ವ್ಯಕ್ತಿ. ಆದರೆ ಅವನ ಒಲವು ಪುರೋಹಿತಶಾಹಿ ಸಿದ್ಧಾಂತದೆಡೆಗೆ. ಬೌದ್ಧ, ಜೈನ ದರ್ಶನಗಳು ಮೂಲತಃ ಕ್ಷತ್ರಿಯರಿಂದ ಬೆಳೆದುಬಂದಿರಲಾಗಿ ಅರ್ಜುನ, ಪುರೋಹಿತಶಾಹಿ ವ್ಯವಸ್ಥೆಯನ್ನು ಪ್ರತಿಭಟಿಸುವ ಕ್ಷತ್ರಿಯ ಶಕ್ತಿಯ ಸಂಕೇತವಾಗಿ ಕಂಡುಬರುತ್ತಾನೆ. ಪುರೋಹಿತಶಾಹಿಯ ಬೌದ್ಧಿಕ ಪಾರಮ್ಯ ಯಾವ ರೀತಿ ಕ್ಷತ್ರಿಯ ಪ್ರತಿಭಟನೆಯನ್ನು ತನ್ನೆಡೆಗೆ ತಿರುಗಿಸಿಕೊಂಡು ಪ್ರತಿಭಟನೆಯನ್ನು ವಿಫಲವಾಗಿಸಿತು ಎನ್ನುವುದಕ್ಕೆ ಗೀತೆ ಸಾಕ್ಷಿಯಾಗಿ ನಿಲ್ಲುತ್ತದೆ. ಅದನ್ನದು ಸಾಧಿಸಿದ್ದು ಹೇಗೆ? ಆ ಕಾಲಮಾನದ ಎಲ್ಲ ದರ್ಶನಗಳ ಬೌದ್ಧಿಕ ಶಕ್ತಿಯನ್ನು ಮೈಗೂಡಿಸಿಕೊಂಡು ಮತ್ತು ಎಲ್ಲ ವರ್ಗಗಳನ್ನು ಪ್ರತಿನಿಧಿಸುವ ಮೂಲಕ (ಕೃಷ್ಣ, ಬಹುಮಟ್ಟಿಗೆ ಎಲ್ಲ ವರ್ಗಗಳನ್ನು ಪ್ರತಿನಿಧಿ

ಸುತ್ತಾನೆ). ಹಿಂದೂ ಧರ್ಮದ ಸ್ವಭಾವವೇ ಹೀಗೆ. ಅದು ಅತ್ಯಂತ ಸ್ಥಿತಿ ಸ್ಥಾಪಕ ಗುಣ ಹೊಂದಿದ್ದು ಎಲ್ಲೆಂದರಲ್ಲಿ ವ್ಯಾಪಿಸಿಬಿಡುತ್ತದೆ.

ಈಗ ಸಮಕಾಲೀನ ಸ್ಥಿತಿಯನ್ನು ನೋಡೋಣ. ಗುಪ್ತ ಚಕ್ರಾಧಿಪತ್ಯದ ನಂತರ ಬಸವಣ್ಣನವರ ಕಲ್ಯಾಣದ ಕ್ರಾಂತಿಯಂಥ ಕೆಲವೇ ಕೆಲವು ಸೀಮಿತ ವ್ಯಾಪ್ತಿಯ ವೈಚಾರಿಕ ಕ್ರಾಂತಿಗಳನ್ನು ಬಿಟ್ಟರೆ ವಿಶಾಲ ಭಾರತ ಬ್ರಿಟಿಷರ ಆಗಮನದ ತನಕ ಹೇಳಿಕೊಳ್ಳುವಂತಹ ವೈಚಾರಿಕ ಕ್ರಾಂತಿಗೆ ಒಳಗಾದುದಿಲ್ಲ. ಕೇವಲ ವೈಚಾರಿಕ ಕ್ರಾಂತಿಯ ಮಟ್ಟಿಗೆ ಹೇಳುವುದಾದರೆ ಬ್ರಿಟಿಷ್ ಆಳ್ವಿಕೆಯ ಉತ್ತರಾರ್ಧ ಮತ್ತು ಸ್ವತಂತ್ರ ಭಾರತದ ಪೂರ್ವಾರ್ಧ ಬಹಳ ಮಹತ್ವದ್ದು. ಬೌದ್ಧ ಕಾಲದ ವೈಚಾರಿಕ ಕ್ರಾಂತಿಗೂ ಇದಕ್ಕೂ ಒಂದು ರೀತಿಯ ಹೋಲಿಕೆ ಇದೆ. ಹಾಗೆಯೇ ವೈಚಾರಿಕ ಕ್ರಾಂತಿಯನ್ನು ಬಡಿದು ಹಾಕಲು ಸಜ್ಜಾದ ಗೀತೆಯ ಕಾಲಕ್ಕೂ ಈಗಿನ ಹಿಂದುತ್ವವಾದಿ ನೆಲೆಗಟ್ಟಿಗೂ ಒಂದು ರೀತಿಯ ಹೋಲಿಕೆ ಕಂಡುಬರುತ್ತದೆ. ವೀರಭದ್ರಪ್ಪನವರ ಕೃತಿ ಮುಖ್ಯವಾಗುವುದೇ ಇಲ್ಲಿ. ಅರ್ಜುನನ ಪ್ರತಿಭಟನೆ ಮತ್ತದು ಪುರೋಹಿತಶಾಹಿಯೆಡೆಗೆ ಬಾಗುವ ರೀತಿ, ನಮ್ಮ ಇಂದಿನ ಘನತೆವೆತ್ತ ವಿದ್ವಾಂಸರು ಹಿಂದುತ್ವವಾದದೆಡೆಗೆ ಬಾಗುತ್ತಿರುವುದಕ್ಕೆ ಸಾಂಕೇತಿಕವಾಗುತ್ತದೆ. ''ಗೀತಾಚಾರ್ಯ, ಅಂತಿಮ ತೀರ್ಮಾನ ಕೊಡುವಲ್ಲಿ ವಿರೋಧಿಗಳು ಅದನ್ನು ಒಪ್ಪಿಕೊಳ್ಳದಿದ್ದರೆ ಘೋರ ಪರಿಣಾಮ ಎದುರಿಸಬೇಕಾಗುತ್ತದೆ ಎಂದು ಎಚ್ಚರಿಸುತ್ತಾನೆ. ಬೆದರಿಕೆ ಒಡ್ಡುತ್ತಾನೆ. ಶಪಿಸುವ ಮಟ್ಟಕ್ಕೆ ಇಳಿಯುತ್ತಾನೆ. ದೃಢಸಂಕಲ್ಪದ ಆತ್ಮವಿಶ್ವಾಸದ ಬುದ್ಧಿಜೀವಿಗಳನ್ನು ಧೃತಿಗೆಡಿಸುವುದೇ ಇದರ ಉದ್ದೇಶ'' (ಪು.೯೯-೧೦೦) ಎನ್ನುತ್ತಾರೆ ವೀರಭದ್ರಪ್ಪನವರು. ಪ್ರಾಯಶಃ ಈ ವಿಚಾರ, 'ಬುದ್ಧಿಜೀವಿಗಳೆಲ್ಲ ಭಯೋತ್ಪಾದಕರು' ಎನ್ನುವ ಹಿಂದುತ್ವವಾದಿ ನಿಲುಮೆ ಮತ್ತು ಅದನ್ನು ಒಪ್ಪಿಕೊಳ್ಳದವರ ಮೇಲೆ ನಡೆಯುವ ದೈಹಿಕ ಹಲ್ಲೆಗೆ ಸರಿಸಮನಾಗಿದೆ. ಆದರೆ ಈ ಉದ್ದೇಶ ಯಶಸ್ವಿಯಾಗುವುದು ಅರ್ಜುನನಂಥ ಬುದ್ಧಿಜೀವಿಗಳಮಟ್ಟಿಗೆ ಹೊರತು ದೃಢಮನಸ್ಕ ಬುದ್ಧಿಜೀವಿಗಳಿಗಲ್ಲ. ಅದಕ್ಕೆ ವೀರಭದ್ರಪ್ಪನವರೇ ಸಾಕ್ಷಿ. ಅವರ ಇದು ತನಕದ ಬಹುತೇಕ ಕೃತಿಗಳನ್ನು ಓದಿರುವ ನನಗೆ ಎಲ್ಲಿಯೂ ಅವರ ಸೈದ್ಧಾಂತಿಕ ನಿಷ್ಠೆ ಬದಲಾಗಿರುವುದು ಕಾಣಿಸುತ್ತಿಲ್ಲ. ದೃಢಮನಸ್ಕ ಬುದ್ಧಿಜೀವಿಗಳನ್ನು ಅಲುಗಾಡಿಸಲಾಗದ ಅಸಹಾಯಕತೆ ಗೀತಾಚಾರ್ಯ ಕ್ರೋಧೋನ್ಮತ್ತನಾಗುವಂತೆ ಮಾಡಿದರೆ ಇಂದಿನ ಹಿಂದುತ್ವವಾದಿಗಳು ಕ್ರೋಧೋನ್ಮತ್ತರಾಗಿ ಮಾತನಾಡುವುದೂ ತಮ್ಮ ದೌರ್ಬಲ್ಯದಿಂದಾಗಿಯೇ. ಇಂಥಲ್ಲಿ ಪ್ರಸ್ತುತ ಕೃತಿ ದೃಢಮನಸ್ಕ ವಿಚಾರಶೀಲನ ನಿಷ್ಠೆಗೆ ಸಾಕ್ಷಿಯಾಗಿ ನಿಲ್ಲುತ್ತದೆ ಎನ್ನುವಲ್ಲಿ ಸಂಶಯವಿಲ್ಲ.

ಗೀತಾಚಾರ್ಯನ ಉಪದೇಶಕ್ಕೆ ಬಾಗಿದ ಅರ್ಜುನ ತನ್ನ ವಂಶವನ್ನೇ ನಾಶಪಡಿಸುತ್ತಾನೆ. ಅಂದರೆ ಪ್ರತಿಭಟನಾಕಾರರಾದ ಕ್ಷತ್ರಿಯರನ್ನು ಸಂಹರಿಸಲು ಕ್ಷತ್ರಿಯನೊಬ್ಬನಿಗೆ ಕೊಟ್ಟ ಕರೆ 'ಗೀತೆ'. ಅಂಥದೇ ಸಂದರ್ಭ ಈಗ ಇದೆ. ಹಿಂದುತ್ವವಾದಿ ಸಿದ್ಧಾಂತ ಬೌದ್ಧಿಕ ಅರ್ಜುನರನ್ನು ದುರ್ಬಲ ವಿಚಾರಶೀಲರಲ್ಲಿ ಹುಡುಕಿದರೆ, ಕ್ಷತ್ರಿಯ ಅರ್ಜುನರನ್ನು ದಲಿತರಲ್ಲಿ, ಹಿಂದುಳಿದ ವರ್ಗದವರಲ್ಲಿ ಕಂಡುಕೊಳ್ಳುತ್ತಿದೆ. ಅದರ ಪರಿಣಾಮ ಸ್ವನಾಶವೇ ಹೊರತು ಬೇರೇನಲ್ಲ. ಗೀತೆಯಲ್ಲಿ ಪುರೋಹಿತಶಾಹಿ ಸಿದ್ಧಾಂತದ ಸರ್ವಾಧಿಕಾರಿ ಧೋರಣೆಯನ್ನು ಅರ್ಥೈಸಿದ್ದಾರೆ ಲೇಖಕರು. ಇಂದಿನ ಹಿಂದುತ್ವವಾದದ್ದೂ ಅದೇ ರೀತಿಯ ಸರ್ವಾಧಿಕಾರಿ ಧೋರಣೆಯೇ. ಗೀತಾಚಾರ್ಯ, ದಿವ್ಯ ಚಕ್ಷುವಿನ ಮೂಲಕ ಭ್ರಮಾತ್ಮಕ ವಿಶ್ವರೂಪದ ಪ್ರಲೋಭನೆಯನ್ನು ಅರ್ಜುನನಿಗೊಡ್ಡಿದಂತೆ ಇಂದಿನ ಹಿಂದುತ್ವವಾದಿಗಳು ಸಂಪೂರ್ಣ ಹಿಂದೂ ದೇಶ ಸೃಷ್ಟಿಯಾಗಿ ಹಿಂದೂಗಳೆಲ್ಲ ಸುಖವಾಗಿರುವಂಥ ಪ್ರಲೋಭನೆ ಒಡ್ಡುತ್ತಿದ್ದಾರೆ. ಆದರಿದು ಭ್ರಮೆ. ಪರಿಪೂರ್ಣ ಸುಖಮಯ ವ್ಯವಸ್ಥೆಯೊಂದು ಎಂದಿಗೂ ಸೃಷ್ಟಿಯಾಗಲಾರದು. ಹಿಂದೂ ರಾಜ್ಯವೆಂಬುದು ಧರ್ಮಶಾಸ್ತ್ರಗಳ ತಳಹದಿಯಲ್ಲಿ ನಿರ್ಮಾಣವಾಯಿತೆಂದರೆ ಅಲ್ಲಿ ಸ್ತ್ರೀಯರು, ದುರ್ಬಲರು, ಕೆಳವರ್ಗದವರು, ದಲಿತರು ಈಗ ಇದ್ದುದಕ್ಕಿಂತ ಹೆಚ್ಚು ಶೋಷಣೆಗೆ ಒಳಗಾಗಬೇಕಾಗುತ್ತದೆ. ಇಂಥಲ್ಲಿ ನಮಗೆ ಬೇಕಾಗಿರುವುದು ವೀರಭದ್ರಪ್ಪನವರಂಥವರ ಚಿಕಿತ್ಸಕ ಚಕ್ಷುಗಳೇ ವಿನಾ ಗೀತಾಚಾರ್ಯನ ಭ್ರಮಾತ್ಮಕ ಚಕ್ಷುಗಳಲ್ಲ.

ಗೀತಾಚಾರ್ಯ ಹೇಳಿರುವ ನಿಷ್ಕಾಮ ಕರ್ಮ, ವೇತನ ಕೇಳುವಿಕೆಗೆ ನಿಷೇಧಗಳ ಉದ್ದೇಶ ಕೆಳವರ್ಗಗಳ ಸೇವೆಯನ್ನು ಅನುಭವಿಸುತ್ತಾ ಸುಖವಾಗಿ ಬಾಳುವ ಮೇಲು ವರ್ಗದ ಹಿತರಕ್ಷಣೆ ಎಂದು ಅರ್ಥೈಸಿದ್ದಾರೆ ವೀರಭದ್ರಪ್ಪನವರು. ಬ್ರಾಹ್ಮಣರಿಗೆ ದಾನ, ದಕ್ಷಿಣೆ ಕೊಟ್ಟು ಸತ್ಕರಿಸಬೇಕೆಂಬ ಹೇಳಿಕೆಯ ದುರುದ್ದೇಶವನ್ನು ಗುರುತಿಸಿದ್ದಾರೆ. ಇಲ್ಲಿ ವೀರಭದ್ರಪ್ಪನವರ ಖಂಡನೆ ಅರ್ಥಪೂರ್ಣವೆನ್ನುವಲ್ಲಿ ಸಂಶಯವಿಲ್ಲ. ಆದರೆ ಇದನ್ನು ವೀರಭದ್ರಪ್ಪನವರು ಅರ್ಥೈಸಿರುವ ಸಾಂಸ್ಕೃತಿಕ ದೃಷ್ಟಿಕೋನದ (ಜಾತಿ ಆಧಾರ) ಮೂಲಕ ಆರ್ಥಿಕ ನೆಲೆಗೆ ಹೊರಳುವ ಕ್ರಮಕ್ಕಿಂತ ಆರ್ಥಿಕ ದೃಷ್ಟಿಕೋನದ ಮೂಲಕ ಸಾಂಸ್ಕೃತಿಕ ನೆಲೆಗೆ ಹೊರಳುವ ಕ್ರಮ ಸೂಕ್ತವೆನಿಸುತ್ತದೆ.

'ಗೀತೆ' ಗಿಂತಲೂ ಹಿಂದಿನ ಕಾಲಕ್ಕೆ ಹೊರಳಿದರೆ ಬ್ರಾಹ್ಮಣರ ದಾನ, ದಕ್ಷಿಣೆಗಳ ಬದ್ಧತೆಯ ಬಗ್ಗೆ ಸಾಕಷ್ಟು ಧಾರ್ಮಿಕ ಸಾಹಿತ್ಯಗಳು ಉಲ್ಲೇಖಿಸಿವೆ. ಗೀತೆಯಲ್ಲೂ ಅದೇ ವಿಚಾರ ಹೇಳಲ್ಪಟ್ಟಿದೆ. ಅಷ್ಟೊಂದು ಬಾರಿ ಇಂತಹ ಉಲ್ಲೇಖ ಬರಲು ಏನೋ ಒಂದು ಕಾರಣವಿದೆ. ಪ್ರಾಯಶಃ ಬ್ರಾಹ್ಮಣರಿಂದ ಧಾರ್ಮಿಕ ಕ್ರಿಯೆಗಳನ್ನು ಮಾಡಿಸಿಕೊಂಡೂ, ಅವರ ಅನುಕೂಲತೆಗೆ ತಕ್ಕಷ್ಟು ಸೌಲಭ್ಯ ಮಾಡಿಕೊಡದಿರುವ ಒಂದು ಸ್ಥಿತಿಯಲ್ಲಿನ ಭೀತಿ ಇಂಥ ಒಂದು ಅಭಿಪ್ರಾಯದ ಉಗಮಕ್ಕೆ ಕಾರಣವಿರಬೇಕು. ಬಹುಶಃ ಗಣರಾಜ್ಯ ವ್ಯವಸ್ಥೆಯಲ್ಲಿ ಅಂಥ ಸಮರ್ಥನೆ ಸಿಗಬಹುದು. 'ಗಣಪತಿ' ಗಣಗಳ ಒಡೆಯನಾಗಿದ್ದಂಥ ವ್ಯವಸ್ಥೆ ಅದು. ಹೆಚ್ಚುಕಮ್ಮಿ ಪುರೋಹಿತ ರಾಜ ವ್ಯವಸ್ಥೆ. ಅಂಥಲ್ಲಿ ಪುರೋಹಿತ ರಾಜ, ಇತರರಿಗೆ ಅನುಕೂಲ ಮಾಡಿಕೊಡದೆ ತಾನೇ ಸುಖಭೋಗಗಳನ್ನು ಅನುಭವಿಸುವಲ್ಲಿ ಆತನಿಂದ ವಂಚಿತವಾದ ಆತನದೇ ಇನ್ನೊಂದು ವರ್ಗ ಸೃಷ್ಟಿಯಾಗಿರಬೇಕು. ಬಹುಶಃ ಇದು ಬ್ರಾಹ್ಮಣ ವರ್ಗವಿರಬಹುದು. ಸುಖಭೋಗವನ್ನು ಉಳಿಸಿಕೊಂಡ ಪುರೋಹಿತ ಕುಟುಂಬ ಕ್ಷತ್ರಿಯವೆನಿಸಿರಬೇಕು. ಈ ಎರಡು ವರ್ಗಗಳ ನಡುವೆ ನಿರಂತರ ಸಂಘರ್ಷ ನಡೆದು ಕ್ರಮೇಣ ಒಂದಕ್ಕೊಂದು ತಾಳಮೇಳವಾಗಿ ಇನ್ನೂ ದುರ್ಬಲವಾಗಿರುವ ವರ್ಗಗಳನ್ನು (ಪ್ರಾಯಶಃ ಬೌದ್ಧಿಕ ಸಾಮರ್ಥ್ಯದಲ್ಲಿ ಹಿಂದುಳಿದವರು) ಕೆಳಜಾತಿಗಳೆಂದು ವರ್ಗೀಕರಿಸಿರಬೇಕು. ಇದೆಲ್ಲ ಆರ್ಯರಲ್ಲಿ ಮಾತ್ರ ನಡೆದ ಪ್ರಕ್ರಿಯೆಯಾಗಿರಲಾರದು. ಆರ್ಯರು ಭಾರತಕ್ಕೆ ಬಂದು ಇಲ್ಲಿನ ಮೂಲನಿವಾಸಿಗಳನ್ನೆಲ್ಲ ಪ್ರತ್ಯೇಕವಾಗಿ ಶೂದ್ರರೆಂದು ವಿಭಜಿಸಿದರು ಎನ್ನುವುದು ಅಷ್ಟೇನೂ ಸಮಂಜಸ ತರ್ಕವಾಗಲಾರದು. ಮೂಲನಿವಾಸಿಗಳಲ್ಲೂ ಸಮರ್ಥರು ಇದ್ದಿರಲು ಸಾಧ್ಯವಿದೆ. ಅವರೂ ದುರ್ಬಲ ಆರ್ಯರನ್ನು ಗುಲಾಮರನ್ನಾಗಿಸಿರಲು ಸಾಧ್ಯವಿದೆ. ಆದರೆ ಅಲ್ಲಿಯೂ ಆಳ್ವಿಕೆಯ ಮುಖ್ಯಸ್ಥನಿರುತ್ತಾನೆ. ಆತನ ನಿಕಟ ವರ್ಗ ಸೌಲಭ್ಯವಂಚಿತವಾಗಿ ಅಲ್ಲಿಯೂ ಬ್ರಾಹ್ಮಣ ವರ್ಗ ಸೃಷ್ಟಿಯಾಗಿರಬಹುದು. ಕ್ರಮೇಣ ವಿಶಾಲ ತಳಹದಿಯಲ್ಲಿ ಇವರೆಲ್ಲ ಒಂದು ಜಾತಿಗೆ ಸೇರ್ಪಡೆಗೊಂಡಿರಬಹುದು. ಆರ್ಥಿಕ ಚಟುವಟಿಕೆಗಳ ಬಿರುಸು ಹೆಚ್ಚಾದಂತೆ ಸ್ವಾರ್ಥಪರ ದೃಷ್ಟಿ ಅತಿಯಾಗಿ ಇತರ ವರ್ಗಗಳು ಶೋಷಿತವಾಗಿ ಉಳಿಯುವಂತಾಗಿರಬೇಕು. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ವರ್ಣಪರಿಶುದ್ಧತೆ ಎನ್ನುವಂಥದ್ದು ಒಂದು ಮಿಥ್ಯೆ. ಇವತ್ತು ಬ್ರಾಹ್ಮಣರೆನ್ನುವ ಅನೇಕರ ಪೂರ್ವಜರು ಆದಿವಾಸಿಗಳಾಗಿ ಇದ್ದಿರಬಹುದು. ದಲಿತರೆನ್ನುವ ಅನೇಕರ ಪೂರ್ವಜರು ದುರ್ಬಲ ಆರ್ಯರಾಗಿಯೂ ಇದ್ದಿರಬಹುದು. ಇದು ಚಾರಿತ್ರಿಕ ಸಂದರ್ಭವನ್ನು ಗಮನಿಸಿ ನಾನು ಮುಂದಿಡುತ್ತಿರುವ ಊಹಾತ್ಮಕ ವಾದವೇ ಹೊರತು ಚಾರಿತ್ರಿಕ ಅಂಶಗಳಿಂದ ಇದನ್ನು ದೃಢಪಡಿಸಲಾರೆ. ಈ ವಾದದ ಸತ್ಯಾಸತ್ಯತೆಯನ್ನು ಇತಿಹಾಸಜ್ಞರು ದೃಢಪಡಿಸಿದಾಗ ಮಾತ್ರ ಇದು ಸ್ವೀಕಾರಾರ್ಹವಾಗುತ್ತದೆ.

ಅದೇನೇ ಇದ್ದರೂ ವೀರಭದ್ರಪ್ಪನವರ ಆಕ್ಷೇಪ ನಿಜಕ್ಕೂ ಸಮರ್ಥನೀಯ. ಅವರು ಗಮನಿಸಿದ್ದು ಗೀತೆಯನ್ನು ಮಾತ್ರ. ಅದನ್ನು ನೋಡುವಾಗ ಇದೆಲ್ಲ ನೆನಪಾಯಿತಷ್ಟೆ.

ಈ ಕೃತಿಯ ಮುಖೇನ ವ್ಯಕ್ತವಾಗಿರುವ ಬಿ. ವಿ. ವೀರಭದ್ರಪ್ಪನವರ ಸಾಮಾಜಿಕ ಕಾಳಜಿ, ದುರ್ಬಲ ವರ್ಗದ ಬಗೆಗಿನ ತೀವ್ರ ಕಳಕಳಿ ಅನುಪಮವಾದುದು. ಅದಕ್ಕಾಗಿ ಈ ಕೃತಿಯನ್ನು ಓದಬೇಕು. ಇದಕ್ಕಿರುವ ಅನ್ವಯಿಕ ಮಹತ್ವವನ್ನು ಅರ್ಥಮಾಡಿಕೊಳ್ಳಬೇಕು. ಇಲ್ಲಿ ವೀರಭದ್ರಪ್ಪನವರು ಇಂದಿನ ಕಾಲಮಾನದಲ್ಲಿ ನಿಂತು ಅಂದಿನ ಕೃತಿಯನ್ನು ಪ್ರಖರವಾಗಿ ವಿಶ್ಲೇಷಿಸಿದ್ದಾರೆ. ಇದೇ ಅದಕ್ಕಿರುವ ಅನ್ವಯಿಕ ಮಹತ್ವಕ್ಕೆ ಸಾಕ್ಷಿ. ಅಂಥಲ್ಲಿ ವೀರಭದ್ರಪ್ಪನವರ ಈ ಕೃತಿ ಭವಿಷ್ಯದ ಕುರಿತು ಏನೋ ಒಂದು ಮಹತ್ವವಾದುದನ್ನು ಸೂಚಿಸುತ್ತಿದೆಯೇ ?

**ಅರವಿಂದ ಚೊಕ್ಕಾಡಿ**

ಫ್ರಾಂಕೋ ವಿಲ್ಲಾ, ಚರ್ಚ್ ರಸ್ತೆ, ಬೆಳ್ತಂಗಡಿ - ೫೭೪ ೨೧೪, ದಕ್ಷಿಣ ಕನ್ನಡ

### ಆಲಯ

ಉಳ್ಳವರು
ಸುಖಾಲಯವನ್ನು
ಮಾಡುವರು ;
ಶಿವಾಲಯವನ್ನು ಕೂಡ!
ಇಲ್ಲದವರಿಗೆ
ಶವಾಲಯವೇ ಗತಿ ?

ಸಿ.ಪಿ.ಕೆ.
ಮೈಸೂರು - ೧೨



# ಕುವೆಂಪು ಮತ್ತು ವಿಚಾರವಾದ

''**ಕ**ಡೆಯ ಪುರೋಹಿತನ ಕರುಳು
ಕಡೆಯ ದೊರೆಯ ಕೊರಳಿನುರುಳು
ಬಿಗಿದ ಹೊರತು ಬರಿಯ ನೆರಳು
ಸ್ವಾತಂತ್ರ್ಯದ ಸ್ವರ್ಗವು''
(ಕ್ರಾಂತಿ ಮಂತ್ರ – ಪು. ೨೫೬.
ಕುವೆಂಪು ಸಮಗ್ರ ಕಾವ್ಯ. ಸಂ. ೨)

ನಮ್ಮ ಚಾರಿತ್ರಿಕ ಸಾಂಸ್ಕೃತಿಕ ಸಂದರ್ಭದಲ್ಲಿ ''ವೈಚಾರಿಕತೆ'' ಎಂಬ ಪದವು ಎರಡು ಭಿನ್ನ ಅರ್ಥದಲ್ಲಿ ಚಲಾವಣೆಯಲ್ಲಿರುವುದನ್ನು ಗ್ರಹಿಸಬಹುದು. ಅವು ಇಂತಿವೆ. ಮೊದಲನೆಯದಾಗಿ ಅದು ಒಬ್ಬ ವ್ಯಕ್ತಿಯ ಅಥವಾ ಸಮುದಾಯದ ಆಲೋಚನೆಗಳು, ರೂಢಿ, ಆಚಾರ ಸಂಹಿತೆಗಳು, ವಿಚಾರಗಳ ಗುಚ್ಛ ಎಂದು. ಎರಡನೆಯದಾಗಿ ಇದಕ್ಕಿರುವ ಮತ್ತೊಂದು ಅರ್ಥಮುಖ – ಬಹುಶಃ ಇಂದು ಹೆಚ್ಚು ಜನಪ್ರಿಯವಾಗಿರುವ ಅರ್ಥ ಇದೇ ಆಗಿದೆ – ಅದನ್ನೊಂದು ಪರಿಭಾಷೆಯಾಗಿ ಕಾಣುತ್ತಿರುವುದು. ಅಂದರೆ ''ವೈಚಾರಿಕತೆ'' ಎಂದರೇನೇ ಪ್ರಗತಿಪರ ಚಿಂತನೆಗಳು/ವಿಚಾರಗಳು ಎಂಬ ಅರ್ಥ ನಿಷ್ಪನ್ನಗೊಂಡಿರುವುದು. ವೈಚಾರಿಕ ಪ್ರಜ್ಞೆ, ವೈಚಾರಿಕ ಜಾಗೃತಿ, ವೈಚಾರಿಕ ಕ್ರಾಂತಿ, ವೈಚಾರಿಕ ಎಚ್ಚರ ಅಥವಾ ಸ್ವಲ್ಪ ಹೆಚ್ಚು ಕಡಿಮೆ ವೈಜ್ಞಾನಿಕ ಚಿಂತನೆ ಎಂಬ ಪದಗುಚ್ಛಗಳನ್ನು ನಾವು ಈ ಪರಿಭಾಷಾತ್ಮಕ ಅರ್ಥದಲ್ಲೇ ಬಳಸುತ್ತಿದ್ದೇವೆ.

ಕನ್ನಡದ ಸಾಂಸ್ಕೃತಿಕ ಸಂದರ್ಭದಲ್ಲಿ ೧೨ನೇ ಶತಮಾನದಲ್ಲೇ ವಚನಕಾರರಿಂದ ನಮಗೆ ಈ 'ವೈಚಾರಿಕತೆ' ಬಹುಶಃ ಬಹುಮಟ್ಟಿಗೆ ದೊರೆತಿದ್ದಿತು. ಆದರೆ ವಚನಕಾರರ ಕೃತ ವೈಚಾರಿಕತೆಯು ಮೂಲತಃ ಧಾರ್ಮಿಕ ನೆಲೆಯನ್ನು ಆಧರಿಸಿದ್ದುದಾಗಿತ್ತು. ಮತ್ತು ಅದು ಈ ಧಾರ್ಮಿಕ ಚಳುವಳಿಯ ವೇಗೋತ್ಕರ್ಷಕ್ಕೆ ಪೂರಕವಾದ ಉಪಉತ್ಪನ್ನ ಮಾತ್ರವಾಗಿದ್ದಿತು. ಇದನ್ನು ವಚನಕಾರರ ಚಳುವಳಿಯ ಮಿತಿಯೆಂದು ಭಾವಿಸುವ ಅಗತ್ಯವಿಲ್ಲ. ಬದಲಾಗಿ ಅದು ಅಂದಿನ ಚಾರಿತ್ರಿಕ, ಸಾಮಾಜಿಕ ಸಂದರ್ಭಗಳ ಮಿತಿಯೇ ಆಗಿದ್ದಿತು. ಆದರೆ 'ವೈಚಾರಿಕತೆ/ವಿಚಾರವಾದ' ಎಂಬ ಪ್ರಜ್ಞೆ ಯೂರೋಪ್‌ನಲ್ಲಿ ಕೈಗಾರಿಕಾ ಕ್ರಾಂತಿಯ ನಂತರ ಸಂಭವಿಸಿದ – 'ರ್‍ಯಾಷನಲಿಸ್ಟಿಕ್' ಚಳುವಳಿಯ ಅಂಗವಾಗಿ ರೂಪುಗೊಂಡದ್ದಾಗಿದೆ. ನ್ಯೂಟನ್ನನ ವಿಶ್ವದ ರಚನೆಯ ಸಿದ್ಧಾಂತ, ಹದಿನೆಂಟನೆ ಶತಮಾನದ ನಂತರ ಆವಿಷ್ಕರಣಗೊಂಡ ಚಾರ್ಲ್ಸ್ ಡಾರ್ವಿನ್ನನ 'ವಿಕಾಸವಾದ', ಸಿಗ್ಮಂಡ್ ಫ್ರಾಯ್ಡನ ಮನೋವಿಶ್ಲೇಷಣಾತ್ಮಕ ವಿಜ್ಞಾನ ಹಾಗೂ ಮಾರ್ಕ್ಸ್, ಎಂಗೆಲ್ಸ್ ಪ್ರಣೀತ ದ್ವಂದ್ವಾತ್ಮಕ ಚಾರಿತ್ರಿಕ ಭೌತವಾದ ಮುಂತಾದ ಆಧುನಿಕ ತತ್ವ ಪ್ರಣಾಳಿಗಳು ವೈಚಾರಿಕತೆಯ ಬೆಳವಣಿಗೆಗೆ ಆಲಂಬನವಾದವು.

ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ/ವಿಚಾರವಾದದ ಸ್ವರೂಪ ಏನು, ಎಂಬ ಹಿನ್ನೆಲೆಯಲ್ಲಿ ಅವರ ಸಾಹಿತ್ಯವನ್ನು ಅವಲೋಕಿಸಿದರೆ ನಾವು 'ವೈಚಾರಿಕತೆ' ಎಂಬುದನ್ನು ಆಲೋಚನೆಗಳು, ರೂಢಿ-ಆಚಾರಗಳು, ವಿಚಾರಗಳ ಸಂಹಿತೆಗಳು ಎಂದೂ, ಪರಿಭಾಷಾತ್ಮಕ ಅರ್ಥವ್ಯಾಪ್ತಿಯ ನೆಲೆಯಲ್ಲಿ ಪ್ರಗತಿಪರ ವೈಚಾರಿಕ ಚಿಂತನೆಗಳು ಮತ್ತು ಪ್ರತಿಗಾಮಿ ನಿಲುವುಗಳಿಗೆ ವಿರುದ್ಧವಾದದ್ದು ಎಂದು ಎರಡೂ ನೆಲೆಯಲ್ಲಿ ಅರ್ಥೈಸಬೇಕಾಗುತ್ತದೆ.

ವಸಾಹತು ಕಾಲದಲ್ಲಿ ಬ್ರಿಟಿಷರು ಇಲ್ಲಿ ಅಳವಡಿಸಿದ ಶೈಕ್ಷಣಿಕ ಸಾಧನೆಗಾಗಿ – ಇದರಲ್ಲಿ ಅವರ ಒಳ ರಾಜಕೀಯ ಹುನ್ನಾರಗಳೇನೇ ಇರಲಿ – ಅವರನ್ನು ಶ್ಲಾಘಿಸಲೇಬೇಕು. ಇಂಗ್ಲಿಷರು ಇಲ್ಲಿ ಅಳವಡಿಸಿದ ಇಂಗ್ಲಿಷ್ ಶಿಕ್ಷಣ ಪದ್ಧತಿ ಎರಡು ಗುಣಾತ್ಮಕ ಪರಿಣಾಮಗಳಿಗೆ ಕಾರಣವಾದವು. ಮೊದಲನೆಯದಾಗಿ ಇಂಗ್ಲಿಷ್ ಮೂಲಕ ಯೂರೋಪಿನ ಹಾಗೂ ಇಡೀ ಸಮಕಾಲೀನ ಜಗತ್ತಿನ ವಿದ್ಯಮಾನಗಳು ನಮಗೆ ದೊರೆಯುವಂತಾದವು. ಇದರಿಂದ ಜನರಲ್ಲಿ ವಸಾಹತುಶಾಹಿತ್ವದ ವಿರುದ್ಧ ಜಾಗೃತಿ ಮೂಡತೊಡಗಿತು. ಎರಡನೆಯ ಪರಿಣಾಮವೆಂದರೆ – ಬಹುಶಃ ಇದು ಬಹಳ ಮುಖ್ಯವಾದದ್ದು – ಇಂಗ್ಲಿಷ್ ಶಿಕ್ಷಣ ಪದ್ಧತಿಯಿಂದಾಗಿ ಬ್ರಾಹ್ಮಣೇತರ ಶೂದ್ರಾದಿ ಜಾತಿಗಳಿಗೂ ಅಕ್ಷರ ಕಲಿಯಲು ಅನುಕೂಲವಾಯಿತು. ಇಂಗ್ಲಿಷ್ ಶಿಕ್ಷಣ ಪಡೆದ ಶೂದ್ರಾದಿ ಜಾತಿಗಳ ಜನರು (ಹೊಸ ಜ್ಞಾನದ ಬೆಳಕನ್ನು ಪಡೆದು ಅದರ ಅರಿವಿನಲ್ಲಿ) ಬಹುಕಾಲದಿಂದ ದಮನಿತವಾಗಿದ್ದ ತಮ್ಮ ಮತ್ತು ತಮ್ಮವರ ಬಿಡುಗಡೆಗೆ ಹೋರಾಡಲು ಅನುವಾದರು. ಚಾರಿತ್ರಿಕವಾಗಿ ಅವಲೋಕಿಸಿದರೆ ಶೂದ್ರ/ದಲಿತ ಸಮಾಜ ಪಡೆದ ಈ ಆಂಗ್ಲ ಶಿಕ್ಷಣದ ದೆಸೆಯಿಂದಲೇ ಸುಧಾರಣಾವಾದಿ ಚಳುವಳಿಗಳು, ಬ್ರಾಹ್ಮಣೇತರ ಶೂದ್ರ ಚಳುವಳಿಗಳು, ಅಂಬೇಡ್ಕರರ ಸಂಘರ್ಷಣಾತ್ಮಕ ಹೋರಾಟಗಳು ಜರುಗಿದುದು. ಬ್ರಾಹ್ಮಣ ಸುಧಾರಣಾವಾದಿಗಳು ಇದಕ್ಕೆ ನೀಡಿದ ಬೆಂಬಲವನ್ನು ಸಹ ಇಲ್ಲಿ ಮರೆಯುವಂತಿಲ್ಲ.

ಶೂದ್ರ ಸಮುದಾಯದಿಂದ ಬಂದು ಅಕ್ಷರ ಜ್ಞಾನ ಪಡೆದು ಆ ಮೂಲಕ ಪರಂಪರಾಗತವಾಗಿ ದೇಶೀಯರ ಮೇಲಾಗುತ್ತಿರುವ ಶೋಷಣೆಯ ಬೇರೆ ಬೇರೆ ಸ್ತರಗಳನ್ನು ಅರ್ಥೈಸಿಕೊಂಡು ಅದರ ಪ್ರತಿರೋಧಾತ್ಮಕ ನೆಲೆಯಲ್ಲಿ ತಮ್ಮ ಪ್ರತಿಭಟನೆ ಮತ್ತು ಸಂಘರ್ಷಗಳನ್ನು ದಾಖಲಿಸಿದ ಕುವೆಂಪು ಸಾಹಿತ್ಯ ಮತ್ತು ಅದು ಪ್ರತಿಪಾದಿಸುವ ವಿಚಾರ ಅಥವಾ ವೈಚಾರಿಕತೆಯನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಬೇಕು.

ಇಂತಹ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದ್ದ ಕುವೆಂಪುವಿಗೆ ಮುಖ್ಯವಾಗಿ ಎರಡು ಬಗೆಯ ಶೋಷಣೆ/ಸವಾಲುಗಳನ್ನು ಎದುರಿಸುವುದು ಮುಖ್ಯವಾದುದಾಗಿದ್ದಿತು. ಅವುಗಳಲ್ಲಿ ಮೊದಲನೆಯದು ''ವಿದೇಶೀ ಯಾಜಮಾನ್ಯ''ವನ್ನು ಅಂದರೆ ಬ್ರಿಟಿಷರನ್ನು ಧಿಕ್ಕರಿಸುವ, ಅವರ ವಿರುದ್ಧ ಬಂಡೇಳುವ ಮುಖೇನ ಪ್ರತಿಭಟನೆಯನ್ನು ದಾಖಲಿಸುವುದು. ಎರಡನೆಯದಾಗಿ, ''ದೇಶೀ ಯಾಜಮಾನ್ಯ''ದ ವಿರುದ್ಧ ಸಂಘರ್ಷಕ್ಕಿಳಿಯುವುದು. ಕುವೆಂಪುವಿಗೆ ಇದು

ಬಹುಮುಖ್ಯ ಕಾಳಜಿಯಾಗಿದ್ದಿತು. ತಲೆತಲಾಂತರ ದಿಂದ ವೈದಿಕ ಪುರೋಹಿತಶಾಹಿಗಳು ಧಾರ್ಮಿಕತೆ, ಕರ್ಮ, ಮೂಢನಂಬಿಕೆಗಳಿಗೆ ಪ್ರೋತ್ಸಾಹ ನೀಡುವುದರ ಮುಖೇನ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ದೇಸಿ ಯಾಜಮಾನ್ಯದ ಮೂಲಕ ಶೂದ್ರಾದಿ ಜಾತಿಗಳನ್ನು ಶೋಷಿಸುವ ಕರ್ಮಠ ವ್ಯವಸ್ಥೆಯನ್ನು ಕುವೆಂಪು ಧಿಕ್ಕರಿಸುತ್ತಿದ್ದರು. ಯಾವುದೇ ಬಗೆಯ ಯಾಜಮಾನ್ಯ ತನ್ನ ಅಧಿಕಾರವನ್ನು ಸ್ಥಿರವಾಗಿ ಸ್ಥಾಪಿಸಲು ಎರಡು ಮಾರ್ಗಗಳನ್ನು ಅನುಸರಿಸುತ್ತದೆ. ಒಂದನೆಯದು, ಅದು ನೇರವಾಗಿ ಪೊಲೀಸ್ ವ್ಯವಸ್ಥೆ, ಸೇನೆ, ನ್ಯಾಯಾಲಯಗಳು... ಅಂದರೆ ನೇರ ಬಲಪ್ರದರ್ಶನದ ಮೂಲಕ ತನ್ನ ನಿರಂತರತೆಯನ್ನು ಸ್ಥಾಪಿಸಿಕೊಳ್ಳುತ್ತದೆ. ಎರಡನೆಯ ಮಾರ್ಗವೆಂದರೆ ಧಾರ್ಮಿಕ ವ್ಯವಸ್ಥೆ ನೈತಿಕ ನಿಯಮಗಳು, ಕಟ್ಟುಪಾಡುಗಳು, ಸಂಪ್ರದಾಯಗಳು, ಇವುಗಳ ಮುಖೇನ ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುತ್ತದೆ. ಅಂದರೆ ಅದು ತನ್ನ ಈ ಅಮೂರ್ತ ನಿಯಮಗಳ ಮುಖೇನ ಕೆಲವು 'ಸಾಮಾನ್ಯ ಗ್ರಹಿಕೆ'ಗಳನ್ನು ಸಮಾಜ ದಲ್ಲಿ ಹುಟ್ಟುಹಾಕುವುದರೊಂದಿಗೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳುತ್ತದೆ. ಅಂತಹ ಸಾಮಾನ್ಯ ಗ್ರಹಿಕೆಗಳ ಕೆಲವು ಉದಾಹರಣೆಗಳು ಇಂತಿವೆ: ೧. ಕಪ್ಪು ಬಣ್ಣಕ್ಕಿಂತ ಬಿಳಿ ಶ್ರೇಷ್ಠ, ೨. ಗೋವು ಮತ್ತು ಬ್ರಾಹ್ಮಣ ಪವಿತ್ರವಾದವು, ೩. ನಮ್ಮ ಕರ್ಮಗಳಿಗೆ ತಕ್ಕಂತೆ ನಮ್ಮ ಜನ್ಮಗಳಿರುತ್ತವೆ, ೪. ಕಾಜಾಣಕ್ಕಿಂತ ಹಂಸ ಶ್ರೇಷ್ಠ ವಾದದ್ದು, ೫. ರಾಜಾ ಪ್ರತ್ಯಕ್ಷ ದೇವತಾ...

ಕುವೆಂಪು ವೈಚಾರಿಕತೆಯ ನೆಲೆಯಿರುವುದೇ ಇಂತಹ ಪ್ರಭುತ್ವ ಪ್ರಣೀತ ಯಾಜಮಾನ್ಯದ ವಿರುದ್ಧ ಪ್ರತಿಭಟನೆ, ಸಂಘರ್ಷವನ್ನು ರೂಪಿಸುವಲ್ಲಿ. ತಮ್ಮ ಬರಹಗಳ ಮುಖೇನ ಅವರು ಈ ಎರಡೂ ಬಗೆಯ ಯಜಮಾನಿಕೆಯ ವಿರುದ್ಧ 'ಪ್ರತಿಯಜಮಾನಿಕೆ' ವೈಚಾರಿಕತೆಯನ್ನು ಮುಂದೊಡ್ಡುತ್ತಾರೆ.

ಮೊದಲಿಗೆ 'ವಿದೇಶಿ ಯಾಜಮಾನ್ಯ'ಕ್ಕೆ ಪ್ರತಿ ರೋಧವಾಗಿ ಕುವೆಂಪುರವರ ವೈಚಾರಿಕ ನಿಲುವುಗಳ ಕುರಿತು ಕೆಲ ಉದ್ಧೃತಗಳನ್ನು ಇಲ್ಲಿ ಕೊಟ್ಟಿದೆ.

''ನಡೆ ಮುಂದೆ ನಡೆ ಮುಂದೆ
ನುಗ್ಗಿ ನಡೆ ಮುಂದೆ,
ಜಗ್ಗದೆಯೆ ಕುಗ್ಗದೆಯೆ
ಹಿಗ್ಗಿ ನಡೆ ಮುಂದೆ
ಬೆಚ್ಚಬಿಡು, ನೆಚ್ಚನೆಡು
ಕೆಚ್ಚೆದೆಯ ಗುಡಿಯಲ್ಲಿ
ಸೆರೆಯ ಹರಿ, ಅರಿಯನಿರಿ
ಹುಟ್ಟಳಿಸು ಹುಡಿಯಲ್ಲಿ
ನಾನಳಿವೆ, ನೀನಳಿವೆ
ನಮ್ಮೆಲುವುಗಳ ಮೇಲೆ ಮೂಡುವುದು
ನವ ಭಾರತ ಲೀಲೆ''

(ಪಾಂಚಜನ್ಯ – ೧೧೧-೧, ೧೯೨೯)

ಪಾಂಚಜನ್ಯ ಸಂಕಲನದ ಒಂದು ಉದ್ಧೃತ :

''ಬರುತಲಿದೆ ಬರುತಲಿದೆ
ವಿಪ್ಲವದ ರಕ್ತದ ರಣಧುನಿ,
ನೋಡಿ ಹರಿದು ಬರುತಿದೆ



ಹಿರಿಯ ಕಮ್ಯುನಿಸ್ಟ್ ನಾಯಕ, ಕೇರಳದ ಹಿಂದಿನ ಮುಖ್ಯಮಂತ್ರಿ ಇ. ಕೆ. ನಾಯನಾರ್ ನಿಧನರಾಗಿದ್ದಾರೆ. ಅವರಿಗೆ 'ಹೊಸತು' ಶ್ರದ್ಧಾಂಜಲಿ ಅರ್ಪಿಸುತ್ತದೆ.

ಬೇನೆವಸಿರಿನಿಂದ ಚಿಮ್ಮಿ
ದಾಸ್ಯಶಿಲೆಯನೊಡೆದು ಹೊಮ್ಮಿ''

(ರಕ್ತದುನಿ – ೧೩೮-೧, ೧೯೨೯)

ತತ್ಕಾಲೀನ ಚಾರಿತ್ರಿಕ ಸಂದರ್ಭವಾದ ಬ್ರಿಟಿಷ್ ವಸಾಹತುಶಾಹಿ ವಿರುದ್ಧ ಕುವೆಂಪು ತಮ್ಮ ಪ್ರತಿಭಟನೆ ಯನ್ನು ದಾಖಲಿಸಿರುವುದನ್ನು ಗಮನಿಸಬಹುದು. ಈ ಕವನಗಳಲ್ಲಿನ ರೂಪಕಗಳನ್ನು ಈ ಹಿನ್ನೆಲೆಯಲ್ಲಿ ಅವಧರಿಸಬೇಕು. ಕುವೆಂಪು ಕೇವಲ ಪ್ರಸ್ಥಾಪಿತ ಅಧಿಕಾರ ಭಂಜನದ ಕ್ರಿಯೆಯಲ್ಲಿ ಮಾತ್ರ ಮಗ್ನರಾಗದೆ, ವ್ಯವಸ್ಥೆಯ ಪುನಾರಚನೆಯ ಬಗೆಗೆ ತಮ್ಮದೇ ಆದ ವೈಚಾರಿಕ ದರ್ಶನವನ್ನು ಹೊಂದಿದ್ದರು. ಸ್ವಾತಂತ್ರ್ಯಾ ನಂತರ ಭಾರತ ರಾಷ್ಟ್ರದಡಿಯಲ್ಲಿ ಭಾಷಾ ಆಧಾರಿತ ಪ್ರಾದೇಶಿಕ ಪ್ರಾಂತ್ಯಗಳು ಒಕ್ಕೂಟ ವ್ಯವಸ್ಥೆಯಲ್ಲಿ ಒಟ್ಟು ಗೂಡಿ ಭಾರತದ ಸಾರ್ವಭೌಮತ್ವದಲ್ಲಿ ಪಾಲ್ಗೊಳ್ಳುವ ಮುಖೇನ ಅವು ಸ್ವಯಮಾಡಳಿತ ಹೊಂದುವ ಕುರಿತಾದ ಕನಸನ್ನು ಅವರು ಹೊಂದಿದ್ದರು. ಅಂದರೆ ಸ್ಥಳೀಯತೆ ಮತ್ತು ರಾಷ್ಟ್ರೀಯತೆಯು ಪರಸ್ಪರ ಅನುಸಂಧಾನದ ಮೂಲಕ ಒಟ್ಟು ವ್ಯವಸ್ಥೆಯನ್ನು ಅಭಿವೃದ್ಧಿಯಡೆಗೆ ಚಲಿಸುವ ಕನಸು ಅವರದಾಗಿದ್ದಿತು. ಕುವೆಂಪು ಭಾರತದ ಮೇಲಿನ ಬ್ರಿಟನ್ ರಾಜಸತ್ತೆಯ ಪರಮಾಧಿಕಾರವನ್ನು ವಿರೋಧಿಸುತ್ತಿದ್ದರೆ ಹೊರತು ಅವರ ಭಾಷೆಯ ಮೂಲಕ ನಮಗೆ ದಕ್ಕುತ್ತಿದ್ದ ಹೊಸ ವೈಚಾರಿಕ ಪ್ರಣಾಳಿಗಳು, ಪ್ರಗತಿಪರ ಚಿಂತನೆಗಳು, ಪ್ರಾಪಂಚಿಕ ಜ್ಞಾನಗಳನ್ನು ಸ್ವಾಗತಿಸುತ್ತಿದ್ದರು. ಅವುಗಳಿಂದಲೇ ನಮ್ಮ ಬಿಡುಗಡೆ ಸಾಧ್ಯವೆಂದು ಅವರು ನಂಬಿದ್ದರು. ''ಬ್ರಿಟಿಷ್ ಇಂಗ್ಲಿಷ್ ಶಿಕ್ಷಣ ನನಗೆ ಸಿಗುತ್ತಿರದಿದ್ದರೆ ನಾನು ಯಾವುದೊ ಒಂದು ಕೊಂಪೆಯಲ್ಲಿ ಸಗಣಿ ಬಾಚುತ್ತಿದ್ದೆ'' ಎಂದು ಅವರೇ ಹೇಳಿಕೊಂಡಿದ್ದಾರೆ. ಈ ಅರ್ಥದ ಒಂದು ಕವನದ ಉದ್ಧೃತ ಇಂತಿದೆ.

''ಬೀಸುತಿದೆ ಪಶ್ಚಿಮದ ರಸಪೂರ್ಣ ಹೊಸಗಾಳಿ
ಭಾರತದ ಬಣಗು ಬಾಳ್ಮರವನಲುಗಾಡಿ
ಉದುರುತಿದೆ ಮುದಿಕಡ್ಡಿ ತರಗು ಹಣ್ಣೆಲೆಗಳೆಲ್ಲ
ನಲಿಯುತಿದೆ ನಳನಳಿಸಿ ಹೊಸ ಚಿಗುರು ಮೂಡಿ''

(೨೭೦-೧)

ಭಾಷೆಯ ಬಗೆಗಿನ ಕುವೆಂಪು ಅವರ ವಿಚಾರ ಗಳನ್ನು ಇಲ್ಲೇ ಸ್ಪಷ್ಟಪಡಿಸಿಕೊಳ್ಳುವುದು ಉಚಿತ ವಾದುದು. ಕುವೆಂಪು ಕಾಲಕ್ಕಾಗಲೇ ವಿಜೃಂಭಿಸು ತ್ತಿದ್ದದ್ದು ಇಂಗ್ಲಿಷ್. ಇದರ ಎದುರಿನಲ್ಲಿ ಕನ್ನಡ ಕಳಾಹೀನವಾಗಿದ್ದಿತು. ಇಂಗ್ಲಿಷಿನ ಜೊತೆಯಲ್ಲಿ 'ತ್ರಿಭಾಷಾ ಸೂತ್ರ'ದ ನೆಪದಲ್ಲಿ ಕನ್ನಡಿಗರ ಮೇಲೆ ಹಿಂದಿಯ ಸವಾರಿಯೂ ಸಾಗಿತ್ತು. ಕುವೆಂಪು ಈ ತ್ರಿಭಾಷಾ ಸೂತ್ರವನ್ನು ಉಗ್ರವಾಗಿ ಪ್ರತಿಭಟಿಸುತ್ತಿದ್ದರು. ''ಬಲಾತ್ಕಾರದ ಭಾಷಾತ್ರಿಶೂಲ'' (ಸಂ. ೨, ಪು. ೪೪೧) ಎಂಬ ಕವನವನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ಕುವೆಂಪು ಐಚ್ಛಿಕ ವಿಷಯವಾಗಿ ಇಂಗ್ಲಿಷ್ ಭಾಷೆಯನ್ನು ಅಧ್ಯಯನ ವಿಷಯವಾಗಿ ತೆಗೆದುಕೊಳ್ಳುವುದನ್ನು ವಿರೋಧಿಸುತ್ತಿರಲಿಲ್ಲ. ಆದರೆ ಅದನ್ನು ವಿದ್ಯಾರ್ಥಿಗಳಿಗೆ ಕಡ್ಡಾಯ ಭಾಷೆಯನ್ನಾಗಿ ಕಲಿಸುವುದನ್ನು ವಿರೋಧಿಸುತ್ತಿದ್ದರು. ಈ ಹಿನ್ನೆಲೆಯ ಅವರ ''ಸಾಕು ಈ ಬಲಾತ್ಕಾರ'' (೪೪೯-ಸಂ. ೨) ''ಪಾರು ಮಾಡೆಮ್ಮನೀ ಇಂಗ್ಲಿಷಿನಿಂದ, ಪೂತನೀಯ ಅಸುವೀಂಟಿ ಕೊಂದ ಗೋವಿಂದ'' (೪೨೬, ಸಂ. ೨) ಎಂಬ ಆಗ್ರಹ ಮತ್ತು ಪ್ರಾರ್ಥನೆಯ ಕವನಗಳನ್ನು ಲಕ್ಷಿಸಬೇಕು.

ವಿವಿಧ ಭಾಷೆಗಳ ಹಾವಳಿಯಲ್ಲಿ ಕನ್ನಡದ ಸ್ಥಿತಿ ಎಷ್ಟು ಶೋಚನೀಯವಾಗಿದೆ ಎಂದು ತಿಳಿಸುವ ಅವರ ಕವನವೊಂದರ ಉದ್ಧೃತ ಇಲ್ಲಿದೆ :

''ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ
ರಾಜನುಡಿಯೆಂದೊಂದು
ರಾಷ್ಟ್ರನುಡಿಯೆಂದೊಂದು
ದೇವನುಡಿಯೆಂದೊಂದು ಹತ್ತಿ ಜಗ್ಗಿ
ನಿರಿನಿಟಲು ನಿಟಲೆಂದು ಮುದಿಮೂಳೆ
ಮುರಿಯುತ್ತಿದೆ
ಕನ್ನಡಮ್ಮನ ಬೆನ್ನು ಬಳುಕು ಬಗ್ಗಿ''

(೩೮೫, ಸಂ. ೧)

ಹಾಗೆಂದು ಕುವೆಂಪು ಕನ್ನಡದ ದಯನೀಯವಾದ ವಿಹ್ವಲ ಸ್ಥಿತಿಯನ್ನು ನೋಡುತ್ತಾ ಸುಮ್ಮನೆ ಕೂರಲಿಲ್ಲ. ಬದಲಾಗಿ ಕನ್ನಡದ ಏಳಿಗೆಗಾಗಿ ಕಂಕಣಬದ್ಧರಾಗಿ ದುಡಿದರು. ಪ್ರಾಥಮಿಕ ಮಟ್ಟದಿಂದ ಸ್ನಾತಕೋತ್ತರ ಹಂತದವರೆಗೆ ಕನ್ನಡದಲ್ಲಿ ಶಿಕ್ಷಣ ಮಾಧ್ಯಮ ಜಾರಿಗೆ ತರಲು ಸತತ ಪ್ರಯತ್ನ ಪಡುತ್ತಿದ್ದರು. ಮಾತೃಭಾಷೆಯೇ ಶಿಕ್ಷಣ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಸಂವಹನ ಮಾಧ್ಯಮವಾಗಬೇಕೆಂಬುದು ಅವರ ಅಭಿಲಾಷೆ. ಕನ್ನಡದ ಏಳಿಗೆಗಾಗಿ ಅವರು ಕನ್ನಡಿಗರಿಗೆ ಕೊಟ್ಟ ಕರೆ ಇಂತಿದೆ :

''ಕನ್ನಡಕೆ ಹೋರಾಡು
ಕನ್ನಡದಾ ಕಂದಾ
ಕನ್ನಡವ ಕಾಪಾಡು
ನನ್ನ ಆನಂದ''. (೩೯೧-೧)

ಕುವೆಂಪು ವಿಚಾರವಾದದ ಮತ್ತೊಂದು ಬಹು ಮುಖ್ಯ ನೆಲೆ ''ದೇಶೀ ಯಾಜಮಾನ್ಯ''ದ ಅಂದರೆ ವೈದಿಕ ಪ್ರಣೀತ ಪುರೋಹಿತಶಾಹಿತ್ವದ ಬಗೆಗಿನ

ಪ್ರತಿರೋಧದ ಹಿನ್ನೆಲೆಯಲ್ಲಿ ರೂಪುಗೊಂಡದ್ದು. ಶೂದ್ರ ಹಿನ್ನೆಲೆಯನ್ನು ಹೊಂದಿರುವ ಕುವೆಂಪು, ಚಾರಿತ್ರಿಕವಾಗಿ ಪುರೋಹಿತಶಾಹಿ ವರ್ಗ ತನ್ನ ಹಿತಾಸಕ್ತಿಗಳ ಈಡೇರಿಕೆಗಾಗಿ ಶೂದ್ರರನ್ನು ಶೋಷಿಸುವುದನ್ನು ಕಂಡವರು ಮಾತ್ರವಲ್ಲದೇ ಅನುಭವಿಸಿದವರೂ ಹೌದು. ಜೊತೆಗೆ ತಮ್ಮ ಸುತ್ತಿನ ಶೂದ್ರ/ದಲಿತ ಜನಾಂಗಗಳು ತಮ್ಮ ಅಜ್ಞಾನ, ಮೌಢ್ಯಗಳಿಂದ ದೇವರು, ದೆವ್ವ, ಭೂತಗಳಿಗೆ ಅಂಜುವ ಮೂಲಕ ಅವುಗಳ ವಕ್ರದೃಷ್ಟಿಗಳಿಂದ ಪಾರಾಗಲು ಪುರೋಹಿತರಿಗೆ ಶರಣಾಗಿ, ಅವರ ತಂತ್ರಗಳಿಗೆ ಮಣಿದು ಶೋಷಿತರಾಗುವುದನ್ನು ಕಂಡವರು. ಕುವೆಂಪು ವೈದಿಕತೆಯ ಪಟ್ಟಭದ್ರ ವೈಚಾರಿಕತೆಯನ್ನು ಟೀಕೆ, ಲೇವಡಿ, ವಿಡಂಬನೆ ಮಾಡುವ ಮೂಲಕ ಅದನ್ನು ಭಂಜಿಸಿದರು. ''ಕಾನೂರು ಹೆಗ್ಗಡತಿ''ಯ ಹೂವಯ್ಯನು ಜೋಯಿಸ ವೆಂಕಪ್ಪಯ್ಯನಿಗೆ ಹೇಳುವ ಮಾತು, ''ನೀವು ತಿಳಿದವರೆಂದುಕೊಂಡು ಹಳ್ಳಿಗಳಿಗೆ ಮೌಢ್ಯವನ್ನೇ ಉಪದೇಶ ಮಾಡಿ, ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣ ವ್ರತ ಮಾಡಿಸುವುದು, ದೆವ್ವ, ಪಿಶಾಚಿಗಳಿಗೆ ಬಲಿ ಕೊಡಿಸುವುದು... ಟ್ರಂಕು ತಗುಲಿ (ಹೂವಯ್ಯನಿಗೆ ಕಬ್ಬಿಣದ ಟ್ರಂಕು ತಗುಲಿ ಬೆನ್ನಿನಲ್ಲಿ ಊತ ಏರ್ಪಟ್ಟಿರುತ್ತದೆ) ಬೆನ್ನು ನೋವಾಗಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ, ಕುಂಕುಮ ಹಚ್ಚಿ ಮಂತ್ರ ಹಾಕಿ ಎಂದು ಹೇಳುತ್ತಿದ್ದೀರಲ್ಲಾ ಇದು ಯಾವ ತತ್ವಶಾಸ್ತ್ರದಲ್ಲಿ ಹೇಳಿದೆ? ಹಾಗೆ ಹೇಳುವ ಗ್ರಂಥಗಳಿದ್ದರೆ ಅವು ಮನ್ನಣೆಗೆ ಯೋಗ್ಯವಾದುವೆ? ನಿಮ್ಮ ಬೋಧನೆ ಯಿಂದ ಎಷ್ಟು ಜನರು ರೋಗಕ್ಕೆ ಮದ್ದು ಮಾಡದೆ ಬರಿಯ ಬೂದಿ-ವಿಭೂತಿಗಳನ್ನೇ ಹಚ್ಚಿಕೊಂಡು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ!'' (೧೦೪ ಪು.)

ಕುವೆಂಪುವಿನ ಎದುರಿಗಿದ್ದದ್ದು ಅಜ್ಞಾನ, ಮೂಢ ನಂಬಿಕೆಗಳನ್ನು ತಲೆತಲಾಂತರಗಳಿಂದ ಸಹಜ ಪರಿಸ್ಥಿತಿ ಎಂಬಂತೆ ಸ್ವೀಕರಿಸಿರುವ ಶೂದ್ರ/ದಲಿತ ಜನಾಂಗ ವರ್ಗವೊಂದು; ಮತ್ತೊಂದು ವರ್ಗ ಈ ಅಜ್ಞಾನಿ, ಮೂಢನಂಬಿಕೆಗಳಿಗೆ ದಾಸರಾಗಿರುವ ಶೂದ್ರ/ದಲಿತರನ್ನು ಅವರ ಅಜ್ಞಾನದಲ್ಲೇ ಉಳಿಸುವ ಮೂಲಕ ಹಾಗೂ ಅವುಗಳನ್ನು ಮುಂದುವರಿಸಲು ಸಹಾಯಕವಾಗುವ ಮೂಲಕ ತಮ್ಮ ಹಿತಾಸಕ್ತಿಗಳನ್ನು ಸ್ಥಿರೀಕರಿಸಿಕೊಳ್ಳುವ ವೈದಿಕ ಪುರೋಹಿತ ವರ್ಗ. ಈ ಹಿನ್ನೆಲೆಯ ಕುವೆಂಪು ಕವನದ ಉದ್ಧೃತ ಇಲ್ಲಿ ಪ್ರಸ್ತುತವಾಗಿದೆ.

> ''ಶೂದ್ರ ಕೋಳಿ ಮೇಯುತ್ತಿತ್ತು
> ಗಲ್ಲಿಯಲ್ಲಿ
> ಬ್ರಾಹ್ಮಣ ನಾಯಿ ಹೊಂಚುತ್ತಿತ್ತು
> ಅಲ್ಲಿ ಇಲ್ಲಿ'' (೪೦೦-೨)

ಕುವೆಂಪು 'ಭೇದವಾದ'ವನ್ನು ಪ್ರತಿಪಾದಿಸುವ ಶಾಸ್ತ್ರಗಳನ್ನೇ ಕುರಿತು ''ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?'' ಎಂದು ಪ್ರತಿರೋಧ ವ್ಯಕ್ತ ಪಡಿಸಿದರು. ಬಹು ಮುಖ್ಯ ಕವನವಾದ ಇದರ ಉದ್ಧೃತವನ್ನಿಲ್ಲಿ ಕೊಟ್ಟಿದೆ.

> ''ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
> ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?
> ಎಂದೋ ಮನು ಬರೆದಿಟ್ಟುದಿಂದೆಮಗೆ
> ಕಟ್ಟೇನು ?
>
> ನಿನ್ನೆದೆಯ ದನಿಯೆ ಋಷಿ, ಮನು ನಿನಗೆ ನೀನು !
> ಪಂಚಮರ ಶಿಶುವೊಂದು ಕೆರೆಯಲ್ಲಿ
> ಮುಳುಗಿತಿರೆ,
> ದಡದಲ್ಲಿ ಮೀಯುತ್ತಾ ನಿಂತಿರುವ ನಾನು,
> ಮುಟ್ಟಿದರೆ ಬ್ರಹ್ಮತ್ವ ಕೆಟ್ಟುಹೋಗುವುದೆಂದು,
> ಸುಮ್ಮನಿದ್ದರೆ ಶಾಸ್ತ್ರಸಮ್ಮತವದೇನು.
>
> ಹಿಂದಿನ ಋಷಿಗಳೂ ಮಾನವರೆ ನಮ್ಮಂತೆ,
> ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ.
> ಕಾಲಕ್ಕೆ ತಕ್ಕಂತೆ, ದೇಶಕ್ಕೆ ತಕ್ಕಂತೆ,
> ನಮ್ಮ ಹೃದಯವೇ ನಮಗೆ ಶ್ರೀಧರ್ಮಸೂತ್ರ''
> (೩೬೮-೧)

ವೈದಿಕ ಯಾಜಮಾನ್ಯದ ವಿರುದ್ಧ ಪ್ರತಿಕ್ರಿಯೆ, ಪ್ರತಿರೋಧ ವ್ಯಕ್ತಪಡಿಸಿ ಕುವೆಂಪು ಸುಮ್ಮನಾಗಲಿಲ್ಲ. ಬದಲಾಗಿ ವೈದಿಕ ಯಜಮಾನಿಕೆಗೆ ಅವರು ತಮ್ಮದೇ ಆದ 'ಪ್ರತಿ ಯಜಮಾನಿಕೆ'ಯ ವೈಚಾರಿಕತೆಯನ್ನು ರೂಪಿಸಿದರು. ಇಲ್ಲಿ ಒಂದು ಕುತೂಹಲಕರ ಅಂಶವನ್ನು ಗಮನಿಸಬೇಕು. ಯಾವ ವೈದಿಕಶಾಹಿ ಯಜಮಾನಿಕೆಯ ವಿರುದ್ಧ ಕುವೆಂಪು ಪ್ರತಿ ಯಜಮಾನಿಕೆಯ ಆಯುಧ ಗಳನ್ನು ರೂಪಿಸಿಕೊಂಡರೋ ಅವು ಹಿಂದೂ ವೈದಿಕ ಉಪನಿಷತ್ತುಗಳು, ಭಗವದ್ಗೀತೆಗಳಲ್ಲಿನ ವಿಶ್ವಾತ್ಮಕ ಮೌಲ್ಯಗಳನ್ನು ಆಧರಿಸಿದುದಾಗಿತ್ತು. ಶೂದ್ರ ಸಂಸ್ಕೃತಿಯ ದೆಯ್ಯ, ಪಂಜೊರ್ಳ್ಳಿ ಮತ್ತು ಭೂತರಾಯಗಳಿಗೆ ಬಲಿ ಕೊಡುವ ಮೂಢನಂಬಿಕೆಗಳ ಬದಲಾಗಿ ಕುವೆಂಪು ವೈದಿಕ ಸಂಸ್ಕೃತಿಯ ಅಧ್ಯಾತ್ಮವನ್ನು ಶೂದ್ರಶಾಹಿಯ ಪುನರುತ್ಥಾನಕ್ಕೆ, ಅವರ ಬಿಡುಗಡೆಗೆ ಪ್ರತಿ ಯಜಮಾನಿಕೆಯ ಹತ್ಯಾರವಾಗಿ ಬಳಸುತ್ತಾರೆ. ಕಾನೂರು ಹೆಗ್ಗಡತಿಯಲ್ಲಿ ಹೂವಯ್ಯ, ಸೀತೆಗೆ ಮಾಡುವ




ಉಪದೇಶ ಈ ಹಿನ್ನೆಲೆಯದ್ದೇ ಆಗಿದೆ : ''ದೇವರು ಈ ಜಗತ್ತನ್ನೆಲ್ಲಾ ಸೃಷ್ಟಿ ಮಾಡಿದ್ದಾನೆ. ಅವನು ಎಲ್ಲೆಲ್ಲಿಯೂ ಇದ್ದಾನೆ... ಅವನು ಏನು ಮಾಡಲೂ ಶಕ್ತನು. ನಾವು ಅವನನ್ನು ಪ್ರೀತಿಸಬೇಕು. ಅದನ್ನು ಭಕ್ತಿ ಎಂದು ಕರೆಯುತ್ತಾರೆ... ಅವನು ಈ ಜಗತ್ತನ್ನು ಮಾಡಿ ದೂರ ಹೋಗಿ ಕೂತುಕೊಂಡಿಲ್ಲ. ಅದರಲ್ಲಿ ಐಕ್ಯವಾಗಿದ್ದಾನೆ ಸೇರಿಕೊಂಡಿದ್ದಾನೆ. ನೀನು ಮುಡಿದುಕೊಂಡಿರುವ ಸೌಂದರ್ಯವೂ ಅವನೇ. ನಿನ್ನ ಸೌಂದರ್ಯವೂ ಅವನೇ. ನಾನು ಹೇಳಿದೆನಲ್ಲಾ ಸಂಧ್ಯಾ ಸೌಂದರ್ಯವೂ ಅವನೇ. ಆ ಸಂಧ್ಯಾ ಸೌಂದರ್ಯವನ್ನು ನೋಡಿದಾಗ ಅವನನ್ನೇ ನೋಡಿದಂತೆ ನನಗೆ ಅನುಭವವಾಗುತ್ತದೆ.'' (೧೬೧ ಪು.)

ಕುವೆಂಪು ಎದುರಿಸಿದ ಈ ಪರಿಸ್ಥಿತಿ ಮತ್ತು ಅದಕ್ಕೆ ಪ್ರತಿಕ್ರಿಯೆಯಾಗಿ ಅವರು ತಾಳಿದ ನಿಲುವು ಕೇವಲ ಅವರೊಬ್ಬರದೇ ಆಗಿರದೆ ಸಮಕಾಲೀನ ಭಾರತದ ಉದಾರವಾದಿ ಸುಧಾರಣಾವಾದಿ ಪ್ರಜ್ಞೆಯ ಭಾಗವೇ ಆಗಿತ್ತು. ಅಂದರೆ ದೇಶದ ವಿಭಿನ್ನ ಜಾತಿ, ಪಂಗಡಗಳ ಜನರನ್ನು ಒಂದು ಮೌಲ್ಯದ/ಆಸರೆಯ ಅಡಿಯಲ್ಲಿ ಒಟ್ಟುಗೂಡಿಸುವ ವೈಚಾರಿಕತೆ ಅಂದಿನ ಅವಶ್ಯಕತೆಯಾಗಿತ್ತು. ಜೊತೆಗೆ ಮತಧರ್ಮಗಳ ಮೂಲಕ ಏರ್ಪಡುವ ವೈರುಧ್ಯವನ್ನು ಇಲ್ಲಗೆಯ್ಯುವ ಅನಿವಾರ್ಯತೆಯೂ ಇತ್ತು. ಆದ್ದರಿಂದಲೇ,

> ''ಹಳೆ ಮತದ ಕೊಳೆಯೆಲ್ಲ ಹೊಸ ಮತದ
> ಹೊಳೆಯಲ್ಲಿ
> ಕೊಚ್ಚಿ ಹೋಗಲಿ;
> ಬರಲಿ ವಿಜ್ಞಾನ ಬುದ್ಧಿ
> ವೇದ ಪ್ರಮಾಣತೆಯ ಮರುಮರೀಚಿಕೆಯಲ್ಲಿ
> ನೀರಡಸಿ ಕೆಡದಿರಲಿ ಸ್ವಾತಂತ್ರ್ಯಸಿದ್ಧಿ''

ಎಂದು ಕರೆಕೊಟ್ಟರು. (೩೬೮-೧)

ವೈದಿಕ ಯಜಮಾನಿಕೆಯ ವಿರುದ್ಧ ಪ್ರತಿಪಾದಿಸುವ ಪ್ರತಿವೈಚಾರಿಕತೆಯ ಅಂಗವಾಗಿ ಇದುವರೆಗೆ ಕಾವ್ಯ ಕ್ಷೇತ್ರವು ಕೆಲವು ವಸ್ತುಗಳ ಬಗೆಗೆ ತೋರುತ್ತಿದ್ದ ಮಡಿವಂತಿಕೆಯನ್ನು ಮೀರುವ ಪ್ರಯತ್ನ ಕುವೆಂಪು ಮಾಡುತ್ತಾರೆ. ಅಂದರೆ 'ಅಲ್ಪ'ದಲ್ಲಿ 'ಭೂಮ'ವನ್ನು ಕಾಣಲೆಳಸುತ್ತಾರೆ. ಪ್ರಕೃತಿಯ ಕ್ಷುದ್ರವಸ್ತುಗಳನ್ನು, ಅನಾಮಿಕ ಮಾನವರನ್ನು, ಅತಿ ಸಾಮಾನ್ಯವೆನಿಸುವ, ನಿರ್ಲಕ್ಷಿಸಬಹುದಾದ, ಅಸಹ್ಯಪಡುವ ವಸ್ತುಗಳನ್ನು ಕೂಡ ಕುವೆಂಪು ಕಾವ್ಯವಸ್ತುವನ್ನಾಗಿಸಿ ಪ್ರತಿ ಯಜಮಾನಿಕೆಯ ವೈಚಾರಿಕತೆಯನ್ನು ಪ್ರತಿಪಾದಿಸುತ್ತಾರೆ. ಇಡೀ ಕನ್ನಡ ಸಾಹಿತ್ಯದಲ್ಲೆ ಮೊದಲ ಬಾರಿಗೆ ಈ ವಸ್ತುಗಳು ಕುವೆಂಪುರವರ ವೈಚಾರಿಕತೆಯ ಫಲವಾಗಿ ದಾಖಲುಗೊಂಡವು. ಅತಿ ಕ್ಷುದ್ರ, ಅಸಹ್ಯವೆನಿಸ ಬಹುದಾದ 'ಗೊಬ್ಬರ'ದ ಮೇಲೆ ಬರೆದ ಕಾವ್ಯವನ್ನು ಇಲ್ಲಿ ಗಮನಿಸಬಹುದು.

'ನೇಗಿಲಯೋಗಿ'ಯ ಬಗೆಗಿನ ಕಾವ್ಯ :

> ''ನೇಗಿಲ ಹಿಡಿದಾ ಹೊಲದೊಳು ಹಾಡುತ
> ಉಳುವಾ ಯೋಗಿಯ ನೋಡಲ್ಲಿ
> ಕಷ್ಟದೊಳನ್ನವ ದುಡಿವನೆ ತ್ಯಾಗಿ
> ಸೃಷ್ಟಿ ನಿಯಮದೊಳವನೇ ಭೋಗಿ'' (೨೮-೧)

ಇದಲ್ಲದೆ ಕರಿಸಿದ್ದ, ಡೂಲಿ (ಜೀನೀ ನಾಯಿ

ಬಗೆಗೆ), ನಾಗಿ (ಬಡ ಹೆಣ್ಣುಮಗಳು), ತೇನೆಹಕ್ಕಿ, ಹೀರೆ ಹೂ, ದನಗಾಹಿ ಕಿಟ್ಟಯ್ಯ, ಓಂ ಕಲ್ ಫುಲ್ ಮಣ್ ಓಂ ಮುಂತಾದ ಸಾಮಾನ್ಯಾತಿಸಾಮಾನ್ಯ ವಸ್ತು ವಿಷಯಗಳನ್ನು ತಮ್ಮ ಕಾವ್ಯವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳುವಲ್ಲಿಯೆ ಅವರ ವೈಚಾರಿಕತೆಯ ನಿಲುವುಗಳನ್ನು ಅರಿತುಕೊಳ್ಳಬಹುದು. ಏಕೆಂದರೆ ಅವರ ವೈಚಾರಿಕತೆ ಶ್ರೀಸಾಮಾನ್ಯರ ಹಿತವನ್ನು ಸರ್ವಸಮಾನತೆಯನ್ನು ಆಧರಿಸಿದ್ದುದು.

''ಮೇಲಿಲ್ಲವೋ ಕೀಳಿಲ್ಲವೊ
ಸರ್ವ ಸಮಾನದ ರಾಜ್ಯ
ಅಧ್ಯಕ್ಷನೊ ಸೇನಾನಿಯೋ ಕಮ್ಮಾರನೊ
ಚಮ್ಮಾರನೊ
ಕಾಯಕವೆಲ್ಲವೂ ಪೂಜ್ಯ...
ಆದಾಗಲಿ ಆರಡಿಯನ್ ಹಿಡಿಯುವುದಿನ್
ತ್ಯಾಜ್ಯ''

ಎಂಬುದು ಅವರ ನಿಲುವು. ಆದ್ದರಿಂದಲೇ ಕುವೆಂಪು ''ಶ್ರೀಸಾಮಾನ್ಯನೇ ಭಗವನ್ ಮಾನ್ಯಂ; ಶ್ರೀಸಾಮಾನ್ಯನೆ ಭಗವದ್ ಧನ್ಯ! ಸಾಮಾನ್ಯತೆ ಭಗವಂತನ ರೀತಿ'' ಯಾಗಿ ಕಾಣುವುದು. ಅವರ ಏಳಿಗೆಯಲ್ಲಿಯೇ ವ್ಯಷ್ಟಿ ಮತ್ತು ಸಮಷ್ಟಿಯ ಉತ್ಥಾನವನ್ನು ಕಾಣುವುದು.

''ಶೂದ್ರ ತಪಸ್ವಿ'' ನಾಟಕದಲ್ಲಿ ಖತಕ್ಕೆ ರೂಪನಾದ ರಾಮನು ಕರ್ಮಠ ಬ್ರಾಹ್ಮಣನ ವರ್ಣ ಸಂಕರದ ಹುಯಿಲಿನ ಬೊಬ್ಬೆಯನ್ನು ಕೇಳಿಯೂ ಕೂಡ ಅಂತಿಮವಾಗಿ ಶೂದ್ರನಾದ ತಪಸ್ವಿ ಶಂಬೂಕನ ಪರವಾಗಿ ನಿಲ್ಲುವುದು, 'ಬೆರಳ್‌ಗೆ ಕೊರಳ್'' ನಾಟಕದಲ್ಲಿ ದ್ರೋಣನು ಅರ್ಜುನನ ವಾತ್ಸಲ್ಯಕ್ಕೆ ಕಟ್ಟುಬಿದ್ದು ಏಕಲವ್ಯನ ಹೆಬ್ಬೆರಳನ್ನು ಪಡೆದುದರ ಸಲುವಾಗಿ ಕೊನೆಗೆ ತನ್ನ ತಲೆದಂಡ ನೀಡುವಂತಹ ಪರಿಸ್ಥಿತಿಗೆ ಒಳಗಾಗುವುದು, ''ಜಲಗಾರ'' ನಾಟಕದಲ್ಲಿ ಸ್ವತಃ ಶಿವನೇ ದೇವಾಲಯಕ್ಕೆ ಬಿಡಲು ನಿರಾಕರಿಸಿದ ಜಲಗಾರನ ಬಗೆಗೆ ಅನುಕಂಪಿಸಿ ಒಲಿದು ಸ್ವತಃ ತಾನೇ ''ಜಗದ ಜಲಗಾರ ನಾನು, ಶಿವನೆಂದು ಕರೆಯುವರು ಎನ್ನ'' (ಪ. ೨೭) ಎನ್ನುವುದು, ಇವೆಲ್ಲವೂ ಕುವೆಂಪು ರೂಪಿಸುವ ಪ್ರತಿ ಯಜಮಾನಿಕೆಯ ವೈಚಾರಿಕತೆಯ ಬೇರೆ ಬೇರೆ ರೂಪಗಳೇ ಆಗಿವೆ.

ಕುವೆಂಪು ವೈಚಾರಿಕ ಪ್ರಜ್ಞೆಯ ಶೃಂಗ ನೆಲೆ ಅಥವಾ ಸಿದ್ದಿ ಅವರ ಅನಿಕೇತನ ತತ್ವ. ಇದನ್ನೇ ವಿಶ್ವಮಾನವ ತತ್ವ ಎಂತಲೂ ಕರೆಯಲಾಗಿದೆ. ಕುವೆಂಪು ವೈಚಾರಿಕತೆ ಅಂತಿಮವಾಗಿ ತನ್ನೆಲ್ಲಾ ಕಾಲ, ದೇಶಗಳನ್ನು ಮೀರಿ ತನ್ನೆಲ್ಲಾ ಬಂಧುಗಳನ್ನು ಕಳೆದುಕೊಂಡು ಅನಂತತೆಯ ಕಡೆಗೆ ಚಲಿಸುವ ವಾಹಿನಿಯಾಗಿದೆ :

''ನೂರು ಮತದ ಹೊಟ್ಟ ತೂರಿ
ಎಲ್ಲ ತತ್ವದೆಲ್ಲೆ ಮೀರಿ
ನಿರ್ದಿಗಂತವಾಗಿ ಏರಿ
ಓ ನನ್ನ ಚೇತನ ಆಗು ನೀ ಅನಿಕೇತನ...''
(೨೮-೨)

ಕುವೆಂಪು ವೈಚಾರಿಕತೆಯ ಸ್ವರೂಪ ಸಮಷ್ಟಿಹಿತದ, ಮುಕ್ತ ಅವಕಾಶದ ಎಲ್ಲ ತತ್ವ, ಮತಗಳನ್ನೊಳಗೊಂಡು, ಅವುಗಳನ್ನು ಮೀರುವ ಅದಮ್ಯ ತುಡಿತವುಳ್ಳದಾಗಿತ್ತು. ಮನುಜ ಮತ; ವಿಶ್ವಪಥ; ಸರ್ವೋದಯ; ಸಮನ್ವಯ; ಪೂರ್ಣದೃಷ್ಟಿ: ಈ ಪಂಚ ವೈಚಾರಿಕ ಪ್ರಣಾಳಿಗಳು ಮೇಲೆ ಉಲ್ಲೇಖಿಸಿದ ಅನಿಕೇತನ/ವಿಶ್ವಮಾನವ ತತ್ವಕ್ಕೆ ಪೂರಕ ಮತ್ತು ಆಲಂಬನವಾದವುಗಳು. ಇಂದಿನ ಯಾಂತ್ರೀಕೃತ ರಭಸದ ಜೀವನದಲ್ಲಿ ಈ ತತ್ವಗಳು ದಂತಗೋಪುರದ ರಮ್ಯ ಕಲ್ಪನಾದರ್ಶಗಳಂತೆ ಕಂಡರೆ ಆಶ್ಚರ್ಯವಿಲ್ಲ. ಆದರೆ ಮನುಕುಲದ ಉಳಿವಿಗೆ ಇವನ್ನು ಬಿಟ್ಟರೆ ಅನ್ಯಗತಿಯಿಲ್ಲ ಎಂಬುದನ್ನು ಗಾಢ ಎಚ್ಚರಿಕೆಯೊಂದಿಗೆ ನಾವು ಅರ್ಥೈಸಿಕೊಳ್ಳಬೇಕಿದೆ.

ಇಟಲಿಯ ಮಾರ್ಕ್ಸ್‌ವಾದಿ ಚಿಂತಕ ಅಂಟೋನಿಯೋ ಗ್ರಾಮ್ಷಿ ಹೇಳುತ್ತಾನೆ: ''ಪಟ್ಟಭದ್ರ ಪ್ರಭುತ್ವದ ವೈಚಾರಿಕ ಪ್ರಣಾಳಿಗಳನ್ನು ಎದುರಿಸಲು ಕೆಳಸ್ತರದ ಜನಾಂಗ/ಶೂದ್ರರು, ಪ್ರಭುತ್ವದ ಹತ್ಯಾರಗಳಿಗೆ ಬದಲಾಗಿ, ಅಂದರೆ ಪ್ರಭುತ್ವ ಪ್ರಣೀತ ಧರ್ಮ ಸಂಪ್ರದಾಯ, ವ್ಯವಸ್ಥೆ ಕಾನೂನುಗಳನ್ನು ಅವಲಂಬಿಸುವುದರ ಬದಲು ತಮ್ಮದೇ ಆದ ಪರ್ಯಾಯ ಮಾರ್ಗಗಳನ್ನು ರೂಪಿಸಿಕೊಳ್ಳಬೇಕು.'' ಆದರೆ ಕುವೆಂಪು/ ಸಮಕಾಲೀನ ಭಾರತೀಯ ಚಿಂತಕರು ಏನು ಮಾಡುತ್ತಾರೆಂದರೆ, ವ್ಯವಸ್ಥೆಯಲ್ಲಿನ ಅಂದರೆ ಪ್ರಭುತ್ವದ ಧರ್ಮ, ಸಂಪ್ರದಾಯ, ಕಟ್ಟುಪಾಡುಗಳ ಆದರ್ಶೀಕೃತ ವಿಶ್ವಾತ್ಮಕ ಮೌಲ್ಯಗಳನ್ನು ಸುಧಾರಣಾವಾದಿ ಪ್ರಜ್ಞೆಯ ನೆಲೆಯಲ್ಲಿ ಸ್ವೀಕರಿಸುತ್ತಾರೆ. ಅಂದರೆ ಇವರು ವ್ಯವಸ್ಥೆಯನ್ನು ಬದಲಾಯಿಸುವ ಕಡೆಗೆ ಒಲವು ತೋರದೆ, ಅದನ್ನು ಸುಧಾರಿಸಿ, ಆ ಮುಖೇನ ತಳ ಸಮೂಹವನ್ನು ಸಂಸ್ಕೃತೀಕರಣಗೊಳಿಸುವ ಮೂಲಕ ಅವರನ್ನು ಮುಖ್ಯ ನೆಲೆಗೆ ತರುವ ಪ್ರಯತ್ನ ಮಾಡುತ್ತಾರೆ. ಕುವೆಂಪು ಸಹ ಇದಕ್ಕೆ ಹೊರತೇನಲ್ಲ. ಕುವೆಂಪುರವರ ಈ ಸಂಸ್ಥೆ ಮೇಲ್ಚಲನೆಯನ್ನು ಅಥವಾ ಸಂಸ್ಕೃತೀಕರಣವನ್ನು ದೇವಯ್ಯ ಹರವೆಯವರು ಕುವೆಂಪುರವರು ''ಶೂದ್ರಶಾಹಿಯಿಂದ ಪುರೋಹಿತ ಶಾಹಿಯೆಡೆಗೆ ಚಲಿಸುತ್ತಿದ್ದಾರೆ'' ಎಂದು ಟೀಕಿಸಿದ್ದಾರೆ (ದಲಿತ ಚಿಂತನೆ, ಮೊದಲ ಮುದ್ರಣ ೨೦೦೨, ಹಂಪಿ ವಿ. ವಿ. ಪು. ೧೧). ಇಂತಹ ಪರಿಸ್ಥಿತಿ ಅಂದರೆ ಮೇಲೆ ಮೇಲೆ ಮಾತ್ರ ಸುಧಾರಿಸುವ ವ್ಯವಸ್ಥೆ ಎಂಥದ್ದೆಂದರೆ ಒಳಗೇ ಕೀವು ಕಟ್ಟಿ, ಮೇಲೆ ಮಾತ್ರ ಗಾಯ ಮಾಯುವಂತಹ ರೀತಿಯದು. ಆದರೆ ಇದಕ್ಕಾಗಿ ನಾವು ಕುವೆಂಪುವನ್ನು ದೂರುವಂತಿಲ್ಲ. ಇದನ್ನು ಅವರ ವೈಚಾರಿಕಮಿತಿ ಎಂದು ಭಾವಿಸುವ ಅಗತ್ಯವೂ ಇಲ್ಲ. ಪ್ರತಿ ವ್ಯಕ್ತಿಯೂ ವರ್ತಮಾನದ ವೈಚಾರಿಕ ಪ್ರಜ್ಞಾಪರಿಸರವನ್ನು ಅತಿಕ್ರಮಿಸಿ ಬೆಳೆಯಲು ಸಾಧ್ಯವಿಲ್ಲ. ಅಂದಿನ ವಸಾಹತುಶಾಹಿ ವರ್ತಮಾನದ ಚಾರಿತ್ರಿಕ ಸಂದರ್ಭದಲ್ಲಿ ಕುವೆಂಪುರವರ ನಿಲುವು ಅನಿವಾರ್ಯವಾದದ್ದೇ ಆಗಿರಬಹುದು ಅಥವಾ ಇತರ ಪರ್ಯಾಯಗಳನ್ನು ರೂಪಿಸಿಕೊಳ್ಳಲು ಕಾಲ ಪಕ್ವವಾಗಿದ್ದಿರದೆಯೂ ಇರಬಹುದು. ಈ ಮಿತಿಗಳ ನಡುವೆಯೂ ಕೂಡ ಕುವೆಂಪುರವರು ಇಡೀ ಕನ್ನಡ ಸಾಹಿತ್ಯದಲ್ಲಿ ಮೊಟ್ಟ ಮೊದಲ ಬಾರಿಗೆ ''ಶ್ರೀಸಾಮಾನ್ಯ''ರನ್ನು ಮುನ್ನೆಲೆಗೆ ತಂದು ''ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು'' ಎಂಬ ವಿಚಾರವಾದವನ್ನು ಪ್ರಚುರಗೊಳಿಸಿದುದು, ಧರ್ಮದ, ಪುರೋಹಿತಶಾಹಿಯ ಹಿಡಿತದಿಂದ ಬಿಡಿಸಲು ಪ್ರಯತ್ನಿಸಿದುದು ಶ್ಲಾಘನೀಯವಾಗಿದೆ.

ರವಿ ಭದ್ರಾವತಿ
೫-೪೫, ನ್ಯೂ ಕಾಲನಿ, ಭದ್ರಾವತಿ - ೫೭೭ ೩೦೧

# ಸಂಸ್ಕೃತ ಭಾಷೆಯ ಅಧ್ಯಯನ ವ್ಯಾಪ್ತಿ



ವಿಶ್ವದಲ್ಲಿ ಲಭ್ಯವಿರುವ ಪ್ರಾಚೀನ ಸಾಹಿತ್ಯ ಗ್ರಂಥಗಳಲ್ಲಿ ಋಗ್ವೇದವೇ ಅತ್ಯಂತ ಪ್ರಾಚೀನವಾದುದು. ಅದಿರುವುದು ಸಂಸ್ಕೃತದಲ್ಲಿ. ''ವೈದಿಕ ಸಂಸ್ಕೃತದಲ್ಲಿ'' ಎಂದರೆ ಹೆಚ್ಚು ಸಮಂಜಸವಾದೀತು. ಏಕೆಂದರೆ, ನಂತರದಲ್ಲಿ ಈ ಭಾಷೆಯು ಬೇಕಾದಷ್ಟು ಬದಲಾಗಿದೆ. ಯಾವುದೇ ಭಾಷೆಯ ಚರಿತ್ರೆಯಲ್ಲಿ ಇದೊಂದು ಸಹಜವಾದ ಪ್ರಕ್ರಿಯೆ. ಒಂದೊಂದು ಘಟ್ಟದಲ್ಲೂ ಅದು ವಿಕಾಸವಾಗುತ್ತಾ ಹೋಗುತ್ತದೆ, ವಿಶಾಲವಾಗುತ್ತಾ ಹೋಗುತ್ತದೆ. ಭಾರತದ ಎಲ್ಲ ಭಾಷೆಗಳಿಗೂ ಅದು ಮಾತೃಸ್ಥಾನದಲ್ಲಿದೆಯೆಂಬುದು ಅನೇಕ ಮಿಥ್ಯಾಕಲ್ಪನೆಗಳಲ್ಲಿ ಒಂದು. ಭಾಷೆಗಳ ಕುಟುಂಬಗಳನ್ನು ನಿರ್ಧರಿಸುವುದು ಎರವಲು ಪಡೆದ ಪದಗಳ ಸಂಖ್ಯೆಗಳ ಆಧಾರದಿಂದಲ್ಲ. ಇದು ಎಲ್ಲ ಭಾಷಾ ಶಾಸ್ತ್ರಜ್ಞರೂ ಕಲಿತಿರುವ ಪ್ರಾಥಮಿಕ ಪಾಠ. ಸಂಖ್ಯೆಗಳನ್ನು ನಿರ್ದೇಶಿಸುವ ಪದಗಳು, ಶರೀರದ ಅಂಗಗಳನ್ನು ಹೆಸರಿಸುವ ಪದಗಳು, ಕುಟುಂಬ ಸಂಬಂಧಗಳನ್ನು ಸೂಚಿಸುವ ಪದಗಳು, ಇವುಗಳಲ್ಲಿ ಸಾಮ್ಯವಿದ್ದರೆ ಸಾಮಾನ್ಯವಾಗಿ ಭಾಷೆಗಳನ್ನು ಒಂದು ಕುಟುಂಬದವೆಂದು ಹೇಳುವುದು ಭಾಷಾಶಾಸ್ತ್ರದ ವಾಡಿಕೆ. ಶಿಷ್ಟರಲ್ಲದೆ ಸಮಾಜದ ಇತರ ವಿಭಾಗಗಳವರೂ ಸಂಸ್ಕೃತ ಭಾಷೆಯನ್ನು ದಿನನಿತ್ಯದ ವ್ಯವಹಾರಗಳಿಗಾಗಿ ಬಳಸುತ್ತಿದ್ದರೇ ಇಲ್ಲವೇ ಎಂಬುದು ಅಷ್ಟೇನೂ ವಿವಾದಾಸ್ಪದವಾದ ಸಂಗತಿಯಲ್ಲ. ನಮ್ಮಲ್ಲಿ ವಿವಿಧ ಭೌಗೋಳಿಕ ಪ್ರದೇಶಗಳಲ್ಲಿ ಬೆಳೆದುಬಂದ ಅನೇಕ ಪ್ರಾಕೃತ ಭಾಷೆಗಳಿವೆ. ಅವು ಜನಸಾಮಾನ್ಯರ ದಿನನಿತ್ಯದ ಬಳಕೆಗಿದ್ದವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಎಲ್ಲ ಪ್ರದೇಶಗಳ ಶಿಷ್ಟರೂ ಮಾಧ್ಯಮವಾಗಿ ಬಳಸಬಹುದಾಗಿದ್ದ ಭಾಷೆ ಸಂಸ್ಕೃತ. ಅದು ಸುರರ ಭಾಷೆಯಾಗಿತ್ತೆಂಬ ಐತಿಹ್ಯವನ್ನು ಗಂಭೀರವಾಗಿ ಪರಿಗಣಿಸಿದರೆ ಆಗ್ಗೆ ಅಸುರರ ಭಾಷೆ ಯಾವುದಾಗಿತ್ತೆಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬೇಕಾಗುತ್ತದೆ. ಸುರರು ಕೂಡ ಒಮ್ಮೆಲೇ ಪರಿಷ್ಕೃತವಾದ ಪಾಣಿನೀಯ ಸಂಸ್ಕೃತವನ್ನು ಕಲಿಯಲಾರದೆ, ಅದರ ಮುಂಚಿನ ಹಂತಗಳ ಭಾಷೆಗಳಲ್ಲಿ ವ್ಯವಹರಿಸುತ್ತಾ ಕ್ರಮೇಣ ಪಾಣಿನೀಯ ಭಾಷೆಯತ್ತ ಸರಿದರೆಂದು ಹೇಳಬೇಕಾಗುತ್ತದೆ. ಅಂದರೆ, ಋಗ್ವೇದದ ಕಾಲದಲ್ಲಿ ಸುರರ ಭಾಷೆ ಯಾವುದಾಗಿದ್ದಿತೋ ಅದನ್ನೇ ಮುಂದುವರಿಸಿಕೊಳ್ಳಲು ಅವರು ಅಸಮರ್ಥರಾದರು!

''ಸಂಸ್ಕೃತ ಭಾಷೆಯಲ್ಲಿ ಏನಿದೆ?'' ಎಂದು ಮೂಗುಮುರಿಯುವವರು ಕೆಲವರಾದರೆ, ''ಸಂಸ್ಕೃತ ಭಾಷೆಯಲ್ಲಿ ಏನು ತಾನೆ ಇಲ್ಲ?'' ಎಂದು ಗರ್ವದಿಂದ ಬೀಗುವವರು ಅನೇಕರು. ಅವರಲ್ಲಿ ಸಂಸ್ಕೃತ ಭಾಷೆಯನ್ನರಿಯದವರೂ ಸೇರಿರುತ್ತಾರೆ. ಮತ್ತು, ಕಲಿತವರಲ್ಲೂ ಆ ಭಾಷೆಯಲ್ಲಿರುವ ಎಷ್ಟೋ ಪ್ರಮುಖ ಗ್ರಂಥಗಳನ್ನು ನೋಡದವರೂ ಇರುತ್ತಾರೆ. ಎಲ್ಲರೂ ಎಲ್ಲ ಗ್ರಂಥಗಳನ್ನೂ ನೋಡಲು ಎಲ್ಲಿ ಶಕ್ಯವಿದೆ? ಆದರೆ, ಸಂಸ್ಕೃತದ ಮಹತ್ವ ಎಂಥದೆಂದರೆ ಆ ಭಾಷೆಯ ಪರಿಚಯ ಮಾಡಿಕೊಳ್ಳಲಾಗದಿದ್ದವರು ಸಹ ಅದರ ಹಿರಿಮೆಯನ್ನು ಸಾರಬಹುದು ಮತ್ತು ನಮ್ಮ ಪ್ರಾಚೀನ ಗ್ರಂಥಗಳ ವಿಶಿಷ್ಟ ಕೊಡುಗೆಗಳನ್ನು ಶ್ಲಾಘಿಸಬಹುದು. ಅದು ವಸ್ತುನಿಷ್ಠವಾಗಿರಬೇಕೆಂಬ ಕಟ್ಟುನಿಟ್ಟು ನಿಯಮವನ್ನು ಪಾಲಿಸುವ ಅಗತ್ಯವಿರುವಂತೆ ಅವರಿಗೆ ತೋರುವುದಿಲ್ಲ. ಈಗ ಮೂರು - ನಾಲ್ಕು ವರುಷಗಳ ಹಿಂದೆ ಒಂದು 'ಕ್ಯಾಸೆಟ್' ಹೊರಬಂದಿತ್ತು. ವಿದ್ಯುನ್ಮಾನ ಮಾಧ್ಯಮಗಳ ಹಾವಳಿಗೆ ಹೊಂದಿಕೊಳ್ಳಬೇಕೆಂಬ ಉತ್ಸಾಹದಿಂದ ಬೆಂಗಳೂರಿನ ವಿದ್ವಾಂಸರೊಬ್ಬರು ಅದನ್ನು ಹೊರತಂದಿದ್ದರು. ಸಂಸ್ಕೃತ ಭಾಷೆಯಲ್ಲಿ ಜ್ಞಾನದ ಎಲ್ಲ ಪ್ರಕಾರಗಳ ಬಗೆಗೂ ಅತ್ಯುತ್ತಮವಾದ ಗ್ರಂಥಗಳಿವೆಯೆಂದು ಹೇಳುತ್ತಾ ಅಂತಹ ಕೆಲವು ಪ್ರಕಾರಗಳನ್ನು ಪರಿಚಯಿಸುವುದು ಅವರ ಉದ್ದೇಶವಾಗಿತ್ತು. ಯುದ್ಧ ಕೌಶಲ್ಯ ಮತ್ತು ತಂತ್ರಗಳಿಗೆ ಸಂಬಂಧಪಟ್ಟ ಉತ್ತಮ ಗ್ರಂಥಗಳಿವೆಯೆಂದು ಘೋಷಿಸಿದ್ದ ಈ ಪಂಡಿತರು ''ಸಮರಾಂಗಣ ಸೂತ್ರಧಾರ'' ಎಂಬುದನ್ನು ಒಂದು ಉದಾಹರಣೆಯಾಗಿ ಉಲ್ಲೇಖಿಸಿದ್ದರು. ಅವರು ಆ ಗ್ರಂಥವನ್ನು ನೋಡಿಲ್ಲವೆಂಬುದು ಶತಸ್ಸಿದ್ಧ. ಏಕೆಂದರೆ, 'ಸಮರ' ಎನ್ನುವ ಪದದಿಂದ ಅವರು ಮೋಹಿತರಾಗಿ ಆ ಗ್ರಂಥದ ವಿಷಯವೇನಿರಬೇಕೆಂಬುದನ್ನು ತಪ್ಪಾಗಿ ತರ್ಕಿಸಿದ್ದರು. ಅದು ಅರಮನೆ, ಪ್ರಾಸಾದ, ಮುಂತಾದುವನ್ನು ಕಟ್ಟುವ ವಿಧಾನವನ್ನು ತಿಳಿಸಿಕೊಡುವ ಗ್ರಂಥ. ಆ ವಿದ್ವಾಂಸರನ್ನು ಲೇವಡಿ ಮಾಡಲು ಇದನ್ನು ಪ್ರಸ್ತಾಪಿಸುತ್ತಿಲ್ಲ. ಅದನ್ನು ಪ್ರಸ್ತಾಪಿಸಿದ್ದು ಸಂಸ್ಕೃತದ ಬಗೆಗಿರುವ ಒಂದು ರೀತಿಯ ವ್ಯಾಮೋಹವನ್ನು ಗುರುತಿಸಬೇಕೆಂದು, ಅಷ್ಟೆ. ಇಂದು ನಮ್ಮ ಸನ್ನಿವೇಶ ಹೇಗಿದೆಯೆಂದರೆ ಸಂಸ್ಕೃತ ಭಾಷೆಯನ್ನು ತಿಳಿಯದೆಯೂ ಆ ಭಾಷೆಯಲ್ಲಿರುವ ಬಹುತೇಕ ಉದ್ಗ್ರಂಥಗಳ ಸಾರಸರ್ವಸ್ವವನ್ನೂ ಹೀರಿಕೊಳ್ಳಲು ಸಾಧ್ಯ. ಅದು ಸಾಹಿತ್ಯ, ವಿಜ್ಞಾನ, ವೈದ್ಯಕೀಯ, ತತ್ತ್ವಶಾಸ್ತ್ರ, ಹೀಗೆ ಎಲ್ಲ ಪ್ರಕಾರಗಳಿಗೂ ಅನ್ವಯಿಸುವ ಮಾತು. ಭಗವದ್ಗೀತೆ, ರಾಮಾಯಣ, ಶಂಕರ ಭಾಷ್ಯ, ಅರ್ಥಶಾಸ್ತ್ರ, ಧ್ವನ್ಯಾಲೋಕ, ಚರಕ ಸಂಹಿತೆ, ಆರ್ಯಭಟೀಯ, ಮುಂತಾದುವನ್ನೆಲ್ಲಾ ಸಂಸ್ಕೃತ ತಿಳಿಯದವರೂ ಓದಿಕೊಳ್ಳಲು ಸಾಧ್ಯವಿರುವಂತಹ ಸಂದರ್ಭ ಇಂದು ನಮ್ಮದಾಗಿದೆ. ಆದಾಗ್ಯೂ, ಸಂಸ್ಕೃತವಿಲ್ಲದಿದ್ದರೆ ಭಾರತೀಯ ಸಂಸ್ಕೃತಿ ನಶಿಸಿಹೋಗುತ್ತದೆಂಬ ಭಯವು ಕೆಲವರನ್ನಾವರಿಸುತ್ತದೆ. ನಿಜವಾಗಿ ನೋಡಿದರೆ, ಭಯಕ್ಕೇನೂ ಕಾರಣವಿಲ್ಲ.

ಅಪ್ರಕೃತವಾದ ಭಾವನೆಗಳನ್ನು ಕೆರಳಿಸಿಕೊಂಡು ಸಂಸ್ಕೃತದ ಪುನರುತ್ಥಾನಕ್ಕೆ ಟೊಂಕಕಟ್ಟಿ ನಿಲ್ಲಬೇಕಾದ ಪ್ರಮೇಯವಿಲ್ಲ. ಆ ಭಾಷೆಯನ್ನು ಕಲಿಯದಿದ್ದವರು ಸಂಸ್ಕೃತಿಯಿಂದ ವಿಮುಖರಾಗುತ್ತಾರೆಂಬ ಕೃತ್ರಿಮ ಆರೋಪದ ಅಗತ್ಯವಿಲ್ಲ; ಅಂತೆಯೇ ಸಂಸ್ಕೃತವನ್ನು ಕಲಿತವರೆಲ್ಲಾ ಭೂಷಣಪ್ರಾಯರೆಂಬ ಭ್ರಮೆಯೂ ಬೇಡ. ಒಂದು ಪೆಟ್ಟಿಗೆ ಅಂಗಡಿಗೆ ಹೋಗಿ ''ನನಗೊಂದು ಕಟ್ಟು ಬೀಡಿ ಮತ್ತು ಒಂದು ಬೆಂಕಿಪಟ್ಟಣ ಕೊಡು'' ಎಂದು ಸಂಸ್ಕೃತದಲ್ಲಿ ಕೇಳಬೇಕಾದ ಅನಿವಾರ್ಯತೆ ಇಲ್ಲ ಮತ್ತು ಅದು ನಾಳೆ ಬರುವುದೂ ಇಲ್ಲ. ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳನ್ನು ಇಷ್ಟೊಂದು ನಮ್ಮ ಮೇಲೆ ಹೇರಿಸಿಕೊಂಡಿದ್ದರೂ ನಾವಿನ್ನೂ ಪೆಟ್ಟಿಗೆ ಅಂಗಡಿಯವರ ಬಳಿ ನಮ್ಮದೇ ಭಾಷೆಯಲ್ಲಿ ವ್ಯವಹರಿಸಬಹುದಾದ ಸನ್ನಿವೇಶವಿದೆ. ಸಂಸ್ಕೃತವನ್ನು ಕಲಿಯಬೇಕಾದ್ದು ಆ ಭಾಷೆಯಲ್ಲಿರುವ ಗ್ರಂಥಗಳನ್ನು ನೇರವಾಗಿ ಅಧ್ಯಯನ ಮಾಡುವ ಸೌಲಭ್ಯ ಪಡೆದುಕೊಳ್ಳುವುದಕ್ಕಾಗಿ. ಅದು ಆಡುಭಾಷೆಯಾಗಬೇಕಾಗಿಲ್ಲ; ಏಕೆಂದರೆ, ಅದು ಗ್ರಂಥ ಭಂಡಾರದ ಭಾಷೆ, ಕೆಲವು ಐತಿಹಾಸಿಕ ದಾಖಲೆಗಳ ಭಾಷೆ, ಸಂಶೋಧನೆಗೆ ಅನುವಾಗುವ ಭಾಷೆ. ಅಂತರರಾಜ್ಯ ವಿದ್ವದ್ಗೋಷ್ಠಿಗಳಲ್ಲಿ ಸಂಸ್ಕೃತವನ್ನು ಬಳಸಬೇಕಾದವರು ಕಡ್ಡಾಯವಾಗಿ ಅದನ್ನು ಕಲಿಯಬೇಕಾಗುತ್ತದೆ; ಅದೂ ಬೇರೆ ಭಾಷೆಗಳನ್ನು ಸಂಪರ್ಕ ಮಾಧ್ಯಮವನ್ನಾಗಿ ಬಳಸಲಾಗದಿದ್ದ ಸಂದರ್ಭಗಳಲ್ಲಿ. ಸಂಸ್ಕೃತವು ಗಣಕಯಂತ್ರಕ್ಕೆ ಬಹಳ ಸೊಗಸಾಗಿ ಹೊಂದಿಕೊಳ್ಳುವ ಭಾಷೆಯೆಂಬುದು ಎಷ್ಟೇ ನಿಜವಾದರೂ, ಸದ್ಯದಲ್ಲೇ ನಾವು ಸಂಸ್ಕೃತವನ್ನು ಅಳವಡಿಸಿಕೊಂಡೇ ಗಣಕಯಂತ್ರವನ್ನು ಉಪಯೋಗಿಸುತ್ತೇವೆಂಬ ಭರವಸೆಯೇನೂ ಇಲ್ಲ. ಇತ್ತೀಚಿನ ದಶಕಗಳಲ್ಲಿ ಕೆಲವು ವಿದ್ವಾಂಸರು ''ವಿಸ್ಮೃತಿ'' ಎಂಬ ಪರಿಕಲ್ಪನೆಯನ್ನು ಮುಂದುಮಾಡಿ ನಮ್ಮ ಪರಂಪರಾಗತ ಜ್ಞಾನವನ್ನು ಕಳೆದುಕೊಳ್ಳುತ್ತಿದ್ದೇವೆಂಬ ಆತಂಕ ವ್ಯಕ್ತಪಡಿಸಿದ್ದಾರೆ. ಉದಾಹರಣೆಗೆ, ''ವಾಕ್ಯಪದೀಯ''ದ ಅನನ್ಯ ಚಿಂತನೆಗಳು ನಷ್ಟವಾಗಿಹೋಗಿವೆ ಅಥವಾ ನಷ್ಟವಾಗಿಹೋಗುತ್ತಿವೆ ಎಂಬ ಮಾತನ್ನವರು ಆಡುತ್ತಾರೆ. ಅಂದರೆ, ಅದು ವಿಸ್ಮೃತಿಯ ಕ್ಷೇತ್ರಕ್ಕೆ ಸೇರಿಹೋಗುತ್ತಿದೆ ಎಂಬುದು ಅವರ ಕಳವಳ. ಈ ವಿದ್ವಾಂಸರಿಗೆ ಈಗ ತಾನೆ ಆ ಗ್ರಂಥದ ಹೆಸರು ತಿಳಿದುಬಂದಿದೆಯೆಂಬುದು ಸ್ಪಷ್ಟವಾಗಿದೆ. ಏಕೆಂದರೆ, ಅನೂಚಾನವಾಗಿ ಆ ಗ್ರಂಥವನ್ನು ವ್ಯಾಸಂಗ ಮಾಡಿಕೊಂಡು ಬಂದಿರುವವರ ಒಂದು ಸಂಪ್ರದಾಯವೇ ನಮ್ಮಲ್ಲಿದೆ. ಆ ಸಂಪ್ರದಾಯವು ನಷ್ಟವಾಗುವಂತಹ ಪರಿಸ್ಥಿತಿ ಉದ್ಭವಿಸಿದ್ದರೆ ನಾವು ಕಾಳಜಿಯಿಂದ ಮಧ್ಯಪ್ರವೇಶ ಮಾಡಬೇಕೇ ಹೊರತು ಯಾರನ್ನೋ ಅನುಕರಿಸಿ ''ವಿಸ್ಮೃತಿ'' ಎಂಬ ಭೂತದ ಆವಾಹನೆ ಮಾಡಿಕೊಳ್ಳಬೇಕಾಗಿಲ್ಲ.

ಎಲ್ಲ ವಿಭಾಗಗಳಲ್ಲೂ ಜಾಗತೀಕರಣದ ಪರಿಣಾಮವನ್ನು ಅರಸುವುದು ಮತ್ತು ಅದು ಅಹಿತಕರ ಪರಿಣಾಮವಾಗಿದ್ದರೆ ಅದಕ್ಕೆ ಸಿದ್ಧೌಷಧವೊಂದನ್ನು ಹುಡುಕಿಕೊಳ್ಳುವುದು ಇಂದಿನ ಸಂಪ್ರದಾಯವಾಗುತ್ತಿದೆ. ಅದೊಂದು ತುರ್ತು ಅವಶ್ಯಕತೆಯೂ ಹೌದು. ಸಂಸ್ಕೃತಕ್ಕೆ ಜಾಗತೀಕರಣದಿಂದ ಅಪಾಯ ತಟ್ಟುವ ಮೊದಲೇ ಅದಕ್ಕೆ ಅನೇಕ ರೀತಿಗಳಲ್ಲಿ ಗರ ಬಡಿದಿರುವುದುಂಟು. ಒಂದು ದೊಡ್ಡ

ವಿಪರ್ಯಾಸವೆಂದರೆ ನಮ್ಮ ವಾಜಪೇಯಿ ಕಾಲದ ಕೇಂದ್ರ ಸರಕಾರದ ನೀತಿಯಲ್ಲಿ ಜಾಗತೀಕರಣವು ಸ್ವಾಗತಾರ್ಹವಾದ್ದು; ಆದರೆ ಅದರ ವಿಷ ಪರಿಣಾಮಗಳು ನಮ್ಮನ್ನು ತಟ್ಟಬಾರದು! ದೊಡ್ಡ ಮಾರಕಾಸ್ತ್ರವನ್ನು ಬೆಳೆಸಿ, ಬಳಸಿ, ಆಮೇಲೆ ಅದರ ಪರಿಣಾಮ ನಮ್ಮ ಮೇಲಾಗಬಾರದು ಎಂಬಂತೆ ಇದೆ ಈ ನೀತಿ. ಬೆಂಗಳೂರಿನಂತಹ ನಗರಗಳಲ್ಲಿ ದಿನಬೆಳಗಾದರೆ ಎಂತೆಂಥವೋ ಹಾಡುಗಳು, ಕುಣಿತಗಳು ನಡೆಯುತ್ತಿರುತ್ತವೆ. ಅವುಗಳಲ್ಲಿ ಸಹಸ್ರಾರು ಯುವಕರು ಪಾಲ್ಗೊಳ್ಳುತ್ತಾರೆ. ಅದಕ್ಕೆ ಅವರಲ್ಲಿ ಹಣವಿದೆ. ಅವರಿಗೆ ಸಂಸ್ಕೃತ ಯಾವ ಪುರುಷಾರ್ಥಕ್ಕೆ? ಇದೇ ಜನ ಹೊರಗಡೆ ಬಂದು ''ಜೈ ಶ್ರೀರಾಮ್'' ಪಂಥದವರಾಗಿಬಿಡುತ್ತಾರೆ. ವೈದಿಕ ಜ್ಯೋತಿಷ್ಯ, ಕರ್ಮಕಾಂಡ, ಮುಂತಾದ ವಿಷಯಗಳಲ್ಲಿ ಸ್ನಾತಕೋತ್ತರ ಶಿಕ್ಷಣ ನೀಡಲಾಗುತ್ತದೆಂಬ ಶಿಕ್ಷಣ ನೀತಿ ಅವರಿಗೆ ಅಪಥ್ಯವೆನಿಸುವುದಿಲ್ಲ. ದೇಶದ ಪರಂಪರೆಯನ್ನು ಉಳಿಸಲು ಇಂತಹ ಶೈಕ್ಷಣಿಕ ಪ್ರಯತ್ನಗಳು ಸಮರ್ಥವಾಗಿವೆಯೆಂಬ ಭಾವನೆ ಅವರಲ್ಲಿರಬಹುದು. ಸಂಸ್ಕೃತದ ಶ್ರೀಮಂತಿಕೆಯ ತುಚ್ಛೀಕರಣವಿದೆಂದು ಅವರ ಮನಸ್ಸಿಗೆ ಬಾಧೆಯಾಗದಿರುವುದೊಂದು ಸೋಜಿಗ.

ಸಂಸ್ಕೃತವೆಂದರೆ ಸಾಂಪ್ರದಾಯಕತೆಯ ರಕ್ಷಣೆಗಿರುವ ಅಸ್ತ್ರವೆಂಬ ಭಾವನೆ ಇದರಿಂದ ಬಲಗೊಳ್ಳುತ್ತದೆ. ನಮ್ಮ ದೇಶದಲ್ಲಿ ಕೆಲವು ಸಂಸ್ಕೃತ ಪತ್ರಿಕೆಗಳಿವೆ. ಅವುಗಳಲ್ಲಿ ಪ್ರಕಟವಾಗುವ ವ್ಯಂಗ್ಯಚಿತ್ರಗಳು ಹಾಗೂ ನಗೆಹನಿಗಳು ಕೂಡ ಮಾರ್ಮಿಕವಾಗಿ ಕಟ್ಟಾ ಸಾಂಪ್ರದಾಯಕತೆಯನ್ನು ಪುಷ್ಟೀಕರಿಸುತ್ತವೆ. ಬುದ್ಧಿವಂತಿಕೆಯ ತರ್ಕದಿಂದ ಸಂಸ್ಕೃತದ ಕೆಲವು ಅಭಿಮಾನಿಗಳು ಜಾತಿಪದ್ಧತಿಯನ್ನು ಸಹ ವೈಭವೀಕರಿಸಿಬಿಡುತ್ತಾರೆ. ಅದರಿಂದಾಗಿ ಸಂಸ್ಕೃತದ ಮಾನ್ಯತೆ ಎಷ್ಟು ಸಮಗ್ರವಾಗಿರಬೇಕಾಗಿದ್ದಿತೋ ಅಷ್ಟು ಸಮಗ್ರವಾಗಿರಲು ಸಾಧ್ಯವಾಗುತ್ತಿಲ್ಲ. ಅಂತೆಯೇ ಸಂಸ್ಕೃತದ ಅನೇಕ ಗ್ರಂಥಗಳಲ್ಲಿ ಜನಸಮುದಾಯದ ಪರವಾಗಿ ಬಿಂಬಿತವಾಗಿರುವ ಕಾಳಜಿಗಳು ಪ್ರಕಾಶಗೊಳ್ಳುವುದಿಲ್ಲ ಮತ್ತು ಮೌಢ್ಯದ ವಿರುದ್ಧದ ಆ ಗ್ರಂಥಗಳ ವಾದಗಳು ಸಾರ್ವಜನಿಕರನ್ನು ಮುಟ್ಟುವುದಿಲ್ಲ. ಅತಿ ಹೆಚ್ಚಾಗಿ ಜನರಿಗೆ ಮುಟ್ಟುವುದು ಸಂಸ್ಕೃತದಲ್ಲಿ ಬರೆಯಲಾದ ಧಾರ್ಮಿಕ ಗ್ರಂಥಗಳ ಸಾರ. ಅದೂ ವಸ್ತುನಿಷ್ಠವಾಗಿ ಪ್ರತಿಪಾದಿತವಾಗುವುದಿಲ್ಲ. ವಿಮರ್ಶಾತ್ಮಕವಾದ ಅಭಿವ್ಯಕ್ತಿಗಿಂತ ಸ್ವಯಂಪೋಷಣೆಗೆ ಪೂರಕವಾದ ಅಭಿವ್ಯಕ್ತಿಯು ಸಿಂಹಪಾಲನ್ನು ಪಡೆಯುತ್ತದೆ; ಹೀಗಾಗಿ ಸಂಸ್ಕೃತ ಗ್ರಂಥಗಳಲ್ಲಿರುವ ಎಷ್ಟೋ ವೈಜ್ಞಾನಿಕ ತತ್ತ್ವಗಳು ಜನರಿಂದ ದೂರವೇ ಉಳಿದುಬಿಡುತ್ತಿವೆ. ಸಂಸ್ಕೃತದ ಶ್ಲಾಘನೆ ಎಷ್ಟೇ ವಿಪುಲವಾಗಿ ನಡೆದರೂ ಅದನ್ನು ಸಂಪ್ರದಾಯದ ಬಂಧನದಿಂದ ಮುಕ್ತಗೊಳಿಸದೆ ಅದರ ವ್ಯಾಪ್ತಿಯನ್ನು ಹಿಗ್ಗಿಸಲು ಬರುವುದಿಲ್ಲ.

ಜಾಗತೀಕರಣವನ್ನು ಹಿಮ್ಮೆಟ್ಟಿಸಲು ನಾವು ಪ್ರಯೋಗಿಸಬೇಕಾದ ವಿಧಾನಗಳಲ್ಲಿ ನಮ್ಮ ಅನನ್ಯತೆಗಳನ್ನು ಪೋಷಿಸುವುದೂ ಒಂದು. ಆದರೆ ಆ ಅನನ್ಯತೆಯು ಸಾರ್ವತ್ರಿಕ ಲಕ್ಷಣವನ್ನು ಅಗತ್ಯವಾಗಿ ಮೈಗೂಡಿಸಿಕೊಳ್ಳಬೇಕು. ಸಂಸ್ಕೃತದ ಅಗಾಧವಾದ ಆಯಾಮಗಳನ್ನು ಕುಬ್ಜಗೊಳಿಸಿಕೊಳ್ಳುವುದು ನಮ್ಮ ಒಂದು ಅನನ್ಯತೆಯ ಪ್ರತೀಕವನ್ನು ಭಗ್ನಗೊಳಿಸಿಕೊಂಡಂತೆಯೇ ಸರಿ. ಹೀಗೆ ಮಾಡಿದಾಗ ಅದು ಜಾಗತೀಕರಣದ ವಿರುದ್ಧವಾಗಿ ಒಂದು ಸಾಧನವಾಗುವುದಿಲ್ಲ. ಸಂಸ್ಕೃತದಲ್ಲಿ ಬರೆಯಲಾಗಿರುವ ಸಹಸ್ರಾರು ಪ್ರಬುದ್ಧ ಗ್ರಂಥಗಳಲ್ಲಿ ಜನಪರವಾದ ಮೌಲ್ಯಗಳಿವೆ, ವಿಚ್ಛಿದ್ರತೆಯನ್ನು ವಿರೋಧಿಸುವ ಸಾಮಗ್ರಿ ಇದೆ, ವೈಜ್ಞಾನಿಕ ವಿಧಾನವನ್ನು ಎತ್ತಿಹಿಡಿಯುವ ಪ್ರಕ್ರಿಯೆಗಳಿವೆ. ಅವನ್ನು ಮೂಲೆಗುಂಪಾಗಿಸಿ, ಯಥಾಸ್ಥಿತಿ ವಾದಕ್ಕೆ ಅಂಗವಾಗಿರುವಂತಹ ಭಾವನೆಗಳನ್ನು ನಮ್ಮ ಸಂಸ್ಕೃತ ಗ್ರಂಥಗಳಿಂದ ಹೆಕ್ಕಿ ತೆಗೆಯುವ ಪದ್ಧತಿ ನಮ್ಮಲ್ಲಿ ಅಸಹ್ಯವೆನಿಸುವಷ್ಟು ಪ್ರಮಾಣದಲ್ಲಿ ನಡೆದಿದೆ, ನಡೆಯುತ್ತಿದೆ. ಆಕ್ರಮಣವನ್ನೆದುರಿಸಲು ಅನ್ಯಾಕ್ರಮಣ ಶೀಲತೆಯು ಆಯುಧವಾಗುವುದಿಲ್ಲ. ಜನಮಾನಸದಲ್ಲಿ ಅನನ್ಯತೆಯು ಗಾಢವಾದ ಪ್ರಜ್ಞೆಯಾಗಿ ಅಂಕುರಿಸಿದಾಗ ಮಾತ್ರವೇ ಜಾಗತೀಕರಣಕ್ಕೆ ಪ್ರತಿರೋಧ ಒಡ್ಡಲು ನಾವು ಸಮರ್ಥರಾಗುತ್ತೇವೆ. ಆ ದಿಕ್ಕಿನಲ್ಲಿ ಮುನ್ನಡೆಯಬೇಕಾದ್ದು ನಮ್ಮ ಇಂದಿನ ಕರ್ತವ್ಯ.

ಡಾ|| ಜಿ. ರಾಮಕೃಷ್ಣ

---

೫೧ನೇ ಪುಟದಿಂದ

ಈಗಲೂ ಕಲಿಯುತ್ತಿಲ್ಲವೆಂದು ಸ್ಪಷ್ಟವಾಗಿ ತೋರುತ್ತಿದೆ. ಧನಬಲ, ಸೈನ್ಯಬಲದ ಅಹಮಿಕೆಯಿಂದ ಮೆರೆಯುತ್ತಿರುವ ಜಾರ್ಜ್ ಬುಷ್ ಇರಾಕಿನಿಂದ ಕಾಲ್ತೆಗೆಯುವ ಬದಲು ತನ್ನ ರಕ್ಷಣಾ ಸಚಿವನನ್ನು ಹಿಂದಿಟ್ಟುಕೊಂಡಿರುವುದರಲ್ಲಿ ಅದನ್ನು ಕಾಣಬಹುದು. ಈತ ಎಂಥ ನೀಚ ಪ್ರವೃತ್ತಿಯವನೆಂದರೆ ಎಲ್ಲ ಪಾತಕಗಳನ್ನು ಸಮರ್ಥಿಸಿಕೊಳ್ಳಲು ನೋಡುತ್ತಾನೆ. ಪ್ಯಾಲೆಸ್ತೈನ್ ಜನರ ಮೇಲೆ ನಿಲ್ಲದ ಹತ್ಯಾಕಾಂಡ ನಡೆಸುತ್ತಿರುವ ಇಸ್ರೇಲಿ ಆಡಳಿತೆಗೆ ನೀಡುತ್ತಿರುವ ಬೆಂಬಲ ಅದಕ್ಕೆ ಸಾಕ್ಷಿ. ಈಚೆಗೆ ಹಮಾಸ್ ನಾಯಕನನ್ನು ಕೊಂದ ಇಸ್ರೇಲಿ ಕೃತ್ಯವನ್ನು ಭಯೋತ್ಪಾದನೆ ವಿರುದ್ಧ ಆತ್ಮರಕ್ಷಣೆಗಾಗಿ ಕೈಗೊಂಡ ಕ್ರಮ ಎಂದು ಹೇಳುವ ಉದ್ಧಟತನ ಅವನದು.

ಇರಾಕಿನ ಕಾರಾಗೃಹದಲ್ಲಿ ಜರುಗಿದ ದೌರ್ಜನ್ಯವನ್ನು ಪ್ರಸ್ತಾಪಿಸಿ ಅಧ್ಯಕ್ಷ ಬುಷ್ ಒಂದು ಕಡೆ ಇಂಥ ಕೃತ್ಯಗಳು ನಮ್ಮ ದೇಶದ ಗೌರವ, ಘನತೆಗಳಿಗೆ ಕಳಂಕಕಾರಿ ಎಂದು ಹೇಳಿದ್ದಾನೆ. ಹಾಗಿದ್ದರೆ, ಇರಾಕಿನಲ್ಲಿ ಸಾಮೂಹಿಕ ವಿನಾಶಕಾರಿ ಅಸ್ತ್ರಗಳಿವೆ ಎಂದು ಸುಳ್ಳು ಆರೋಪದ ಮೇಲೆ ದುರಾಕ್ರಮಣ ನಡೆಸಿದ ಬುಷ್ ಕೃತ್ಯ ಬಹಳ ಘನವಾದ ಕಾರ್ಯವೆ? ಇಡೀ ಜಗತ್ತಿನ ಜನತೆಯ, ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳ ಅಭಿಪ್ರಾಯವನ್ನು ಕಡೆಗಣಿಸಿ ಇರಾಕಿನ ಮೇಲೆ ದಾಳಿ ನಡೆಸಿದ್ದು ಅಕ್ಷಮ್ಯ ಅಪರಾಧವಲ್ಲವೆ? ಇರಾಕನ್ನು ಆಕ್ರಮಿಸಿಕೊಂಡಿರುವ ಅಮೆರಿಕ ಅಲ್ಲಿಂದ ತನ್ನ ಸೇನೆಗಳನ್ನು ಹಿಂತೆಗೆದುಕೊಳ್ಳಲು ಸಿದ್ಧವಾಗಿಲ್ಲ. ಅಲ್ಲಿ 'ಪ್ರಜಾಪ್ರಭುತ್ವ'ದ ಉದ್ಧಾರಕ್ಕಾಗಿ ಈ ಜೂನ್ ಅಂತ್ಯದೊಳಗೆ ಕೈಗೊಂಬೆ ಸರಕಾರವೊಂದನ್ನು ಸ್ಥಾಪಿಸಿ ಕೃತಾರ್ಥನಾಗುವುದಾಗಿ ಹೇಳುತ್ತಿರುವ ಅಧ್ಯಕ್ಷ ಬುಷ್ ಸೈನ್ಯವನ್ನು ಮಾತ್ರ ಹಿಂತೆಗೆದುಕೊಳ್ಳಲು ಸಿದ್ಧವಿಲ್ಲ. ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಂಡ ಮೇಲೆ ಅಮೆರಿಕ ಯಾವ ಬಗೆಯಲ್ಲಿ ನಡೆದುಕೊಂಡಿದೆಯೋ ಹಾಗೆಯೇ ಇರಾಕಿನಲ್ಲೂ ಮಾಡಲು ಹೊರಟಿದೆ.



ಹಿಟ್ಲರ್‌ನ ದುಷ್ಕೃತ್ಯ - ಅಂದು

ಭಯೋತ್ಪಾದನೆ ನಿಗ್ರಹದ ಹೆಸರಿನಲ್ಲಿ ಖಾಯಂ ಆಗಿ ತನ್ನ ಸೇನೆಯನ್ನು ಇರಿಸಿ ನೆಪ ಮಾತ್ರಕ್ಕೆ ಆಕ್ರಮಿಸಿಕೊಂಡಿರುವ ದೇಶಕ್ಕೆ ಸ್ವತಂತ್ರ ಸರಕಾರ ನೀಡುವ ಹುನ್ನಾರ ಅಮೆರಿಕದ್ದು. ಆಫ್ಘಾನಿಸ್ತಾನದಲ್ಲೂ ಅಮೆರಿಕದ ಸೈನಿಕರ ವಾಪಸಾತಿಗೆ ಜನ ಪ್ರತಿಭಟನೆ ನಡೆಸುತ್ತಿದ್ದಾರೆ. ಅವಕಾಶ ಸಿಕ್ಕಾಗ ಅಮೆರಿಕನ್ ಸೈನಿಕರ ಮೇಲೆ ದಾಳಿ ನಡೆಸುತ್ತಿದ್ದಾರೆ. ಅಲ್ಲಿನ ಕಾರಾಗೃಹಗಳಿಂದಲೂ ದೌರ್ಜನ್ಯದ ವರದಿಗಳು ಬರುತ್ತಿವೆ. ದುರಾಕ್ರಮಣಕಾರಿ ಸೇನೆಯಿಂದ ನಾಗರಿಕ ವರ್ತನೆ ಅಪೇಕ್ಷಿಸುವುದು ಹೇಗೆ ಸಾಧ್ಯ? ಅವು ಅಲ್ಲಿಂದ ಕಾಲ್ತೆಗೆಯುವವರೆಗೆ ಜನರಿಗೆ ಸ್ವಾತಂತ್ರ್ಯ, ಸಾರ್ವಭೌಮತ್ವ ಸಾಧ್ಯವಿಲ್ಲ. ಅಮೆರಿಕದ ಸೈನ್ಯದ ಉಪಸ್ಥಿತಿ ಇರುವ ಕಡೆಯಲ್ಲೆಲ್ಲ ಆಪತ್ತೆ, ಅವು ಕಾಲ್ತೆಗೆಯುವವರೆಗೆ ಸುರಕ್ಷತೆ ಇರದು. ಅಮೆರಿಕದ ಆಡಳಿತೆ ದೌರ್ಜನ್ಯಗಳಿಗೆ ಕ್ಷಮೆ ಕೋರಿದರೆ ಸಾಲದು, ನಡೆಸಿದ ದುರಾಕ್ರಮಣದ ಕುರಿತು ಪ್ರಪಂಚದ ಜನತೆಯ ಮುಂದೆ ತಪ್ಪು ಒಪ್ಪಿಕೊಂಡು ಕ್ಷಮೆ ಕೋರಿ ಆಕ್ರಮಿಸಿಕೊಂಡಿರುವ ದೇಶಗಳಿಂದ ಸೇನೆಯನ್ನು ವಾಪಾಸು ಕರೆಸಿಕೊಳ್ಳಬೇಕು. ಹಾಗಾದಾಗ ಮಾತ್ರ ಜನತೆ ಅಮೆರಿಕವನ್ನು ಕ್ಷಮಿಸಿಯಾರು. ಅಲ್ಲಿಯವರೆಗೆ ಅಮೆರಿಕದ ವಿರುದ್ಧ ಭಯೋತ್ಪಾದಕ ಕೃತ್ಯಗಳೂ ನಿಲ್ಲದು, ದುರಹಂಕಾರಿಗಳಿಗೆ ಕ್ಷಮೆಯೂ ದೊರಕದು.

---

ಸೀಯಾರ್ಕೆ, 'ಚೌಬೀನ', ೮೪೯, ಬನಶಂಕರಿ ೩ನೇ ಹಂತ, ಕತ್ತರಗುಪ್ಪೆ, ಬೆಂಗಳೂರು - ೫೬೦ ೦೮೫

**HOSATHU** Kannada Monthly / June 2004 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna